# ರಾಮಾನುಜರ ಬ್ರಹ್ಮಸೂತ್ರ ಭಾಷ್ಯ

ಹೆಚ್. ಜೆ. ರಾಮಯ್ಯಂಗಾರ್

ಹೆಚ್. ಜೆ. ರಾಮಯ್ಯಂಗಾರ್
ರಾಮಾನುಜರ ಬ್ರಹ್ಮಸೂತ್ರ ಭಾಷ್ಯ

RAMANUJARA BRAHMA SUTRA BHASHYA

—A Book on visistadvaita based on Sri Bhashya of Ramanuja, with relevant Sanskrit and Tamil Literature.

Written and Published by H. J. Ramaiengar, Retired subject Inspector, S. L. V. Sadana, 117/5A, Nagaraja Layout, Bull Temple Road Cross, Bangalore-560 019, Phone : 621358



First Published : 1991

Copies : 1000

Pages 8+240

Price Rs. 24/-

THIS BOOK IS PUBLISHED WITH THE FINANCIAL ASSISTANCE OF TIRUMALA TIRUPATHI DEVASTHANAMS UNDER THEIR SCHEME AID TO PUBLISH RELIGIOUS BOOKS

Printed at :

**Ila Printers,** 4th Main.
8th Cross, Chamarajpet,
Bangalore-18.

ವ್ಯಾಘ್ರ ಶೈಲಾಗ್ರ ಮಂದಾರಂ ಭಕ್ತಾಭೀಷ್ಟ ಪ್ರದಾಯಿನಂ ।
ವಂದೇಹಮಿಂದಿರಾನಾಥಂ ಪ್ರಸನ್ನಂ ವೇಂಕಟೇಶ್ವರಂ ॥



ರಾಮಾನುಜಾಚಾರ್ಯ



ಪೊನ್ನಾಥಪುರದ ಕಸ್ತೂರಿರಂಗಯ್ಯಂಗಾರ್ಯರ ಮಗನಾಗಿ, ಒಳ್ಳೆಯ ಮಗ, ತಮ್ಮ, ಗಂಡ, ಅಳಿಯ, ತಂದೆ, ಮಾವ ಎನಿಸಿ, ಹಾಸಿಗೆ ಇದ್ದಷ್ಟು ಕಾಲು ಚಾಚಬೇಕೆಂಬ ತತ್ತ್ವವನ್ನು ಪಾಲಿಸಿ, ಸತ್ಯಸಂಧತೆ, ಪ್ರಾಮಾಣಿಕತೆ, ಸರಳತೆ, ಶಿಸ್ತು, ಧೈರ್ಯ, ಕರ್ತವ್ಯಪ್ರಜ್ಞೆ ಮೈಗೂಡಿಸಿಕೊಂಡ ದಕ್ಷ ಉಪಾಧ್ಯಾಯರಾಗಿ, ಶ್ರೀಮಂತ ಅಳಿಯನ ಮನೆಯ ವೈಭವದ ಜೀವನದಲ್ಲೂ ವೈರಾಗ್ಯದಿಂದಿದ್ದು, ಬಂಧು ಬಳಗದವರ ಹಿತ ಚಿಂತಕರಾಗಿದ್ದ

**ಪಿ. ಕೆ. ಚನ್ನಕೇಶವಯ್ಯಂಗಾರ್**

(1896–1984)

ಮತ್ತು

ಅವರ ಧರ್ಮಪತ್ನಿ ಅಮ್ಮಯ್ಯಮ್ಮ

(1904–1990)

ಇವರ ಸವಿನೆನಪಿಗಾಗಿ.

# ಅರಿಕೆ

ವಿಶ್ವದಲ್ಲಿ ಯುದ್ಧವನ್ನು ತಪ್ಪಿಸಿ, ಶಾಂತಿಯನ್ನು ನೆಲೆಗೊಳಿಸಬಲ್ಲ ಶ್ರೀವೈಷ್ಣವ ಮತ ಸಿದ್ಧಾಂತಗಳನ್ನು ಸರಿಯಾಗಿ, ಚೆನ್ನಾಗಿ, ಅರಿತುಕೊಳ್ಳಲು ಇಚ್ಛಿಸುವವರು, ನಮ್ಮಾಳ್ವಾರರ ತಿರುವಾಯ್ಮೊಳಿ, ರಾಮಾನುಜರ ಶ್ರೀ ಭಾಷ್ಯ, ಗೀತಾಭಾಷ್ಯ, ವೇದಾಂತ ದೇಶಿಕರ ರಹಸ್ಯತ್ರಯಸಾರ ಎಂಬೀ ಪವಿತ್ರ ಗ್ರಂಥ ಚತುಷ್ಟಯಗಳನ್ನು ಪ್ರಾಜ್ಞರಾದ ಗುರುಗಳ ಸನ್ನಿಧಿಯಲ್ಲಿ ಕುಳಿತು ಕಾಲಕ್ಷೇಪ ಮಾಡುವುದು ಹಿಂದಿನಿಂದಲೂ ಬಂದ ಸಂಪ್ರದಾಯ. ಆದರೆ ಆಧುನಿಕ ಕಾಲದಲ್ಲಿ ಹೆಚ್ಚು ಜನರು ವಿವಿಧ ಸ್ಥಳಗಳಲ್ಲಿ, ವಿವಿಧ ಉದ್ಯೋಗಗಳಲ್ಲಿ ನಿರತರಾಗಿದ್ದು, ಕಾಲಕ್ಷೇಪ ಮಾಡಲು ಸಾಕಷ್ಟು ಕಾಲಾವಕಾಶವಿಲ್ಲದಿರುವಿಕೆ, ಪ್ರಾಜ್ಞರಾದ ಆಚಾರ್ಯರ ಅಭಾವ, ಇದ್ದವರಿಗೂ ಸಾಕಷ್ಟು ವಿರಾಮ–ಮನಸ್ಸು ಇಲ್ಲದಿರುವುದು—ಈ ಕಾರಣಗಳಿಂದ, ಗ್ರಂಥಗಳನ್ನೇ ಅವಲಂಬಿಸಿ ತಿಳಿದುಕೊಳ್ಳಬೇಕಾಗಿದೆ. ಅಂಥವರಿಗಾಗಿ ಸರಳವಾದ ಶೈಲಿಯಲ್ಲಿ ಹಾಗೂ ಸುಲಭವಾಗಿ ಅರ್ಥವಾಗುವ ಭಾಷೆಯಲ್ಲಿ ರಚಿತವಾದ, ರಾಮಾನುಜ ಮತದ ಮುಖ್ಯ ತತ್ತ್ವಗಳನ್ನೊಳಗೊಂಡ, ಈ ಗ್ರಂಥವು ಜ್ಞಾನ ಪಿಪಾಸುಗಳಿಗೆ ತೃಪ್ತಿಯನ್ನುಂಟು ಮಾಡುತ್ತದೆಂದು ನಂಬಿದ್ದೇನೆ. ಶ್ರೀಭಾಷ್ಯದ ಬಗ್ಗೆ ಕನ್ನಡದಲ್ಲಿ ಹತ್ತಾರು ಗ್ರಂಥಗಳು ಬಂದಿವೆಯಾದರೂ, ಇದನ್ನು ಹೊಸ ರೀತಿಯಲ್ಲಿ ಆಧುನಿಕ ಕಾಲದ ಯುವಜನರಿಗೂ ಮೆಚ್ಚುಗೆಯಾಗುವಂತೆ ಬರೆಯಲು ಯತ್ನಿಸಿದ್ದೇನೆ.

ಶ್ರೀ ವೈಷ್ಣವ ಮತದ ಅಧ್ಯಯನ—ಕೃತಿ ರಚನೆ ಮಾಡಲು ಆರಂಭಿಸುವ ಮೊದಲೇ ಅಂದರೆ 1974ರಲ್ಲಿಯೇ ಶ್ರೀಭಾಷ್ಯ ದರ್ಪಣವೆಂಬ ತಮ್ಮ ಪುಸ್ತಕವನ್ನು ನನಗೆ ಕೊಟ್ಟು ಆಶೀರ್ವದಿಸಿದವರು ಟಿ. ವಿ. ನಾಥಮುನಿ ಅಯ್ಯಂಗಾರ್ ; ಇಂಥ ಪುಸ್ತಕವೊಂದನ್ನು ಬರೆಯಲು ಉತ್ತೇಜನ ನೀಡಿದವರು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿರುವ ಡಾ॥ ಬಿ. ಎಸ್. ರಾಮಕೃಷ್ಣ ಅಯ್ಯಂಗಾರ್ ಹಾಗೂ ವ್ಯಾಕರಣ ಸಾಹಿತ್ಯ ವಿದ್ವಾನ್, ವೇದಾಂತ ನಿಪುಣ, ಪಂಡಿತ ರಾಜ, ಶ್ರೀ ಎನ್. ಟಿ. ಶ್ರೀನಿವಾಸಯ್ಯಂಗಾರ್ ; ಈ ಗ್ರಂಥವನ್ನು ಪ್ರಕಟಿಸಲು ಹೆಚ್ಚು ಭಾಗ ಸಹಾಯ ಧನವನ್ನು ಕೊಡಿಸಿದವರು ತಿರುಮಲ ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿ ಶ್ರೀ ಎಂ. ವಿ. ಎಸ್. ಪ್ರಸಾದ್ ಮತ್ತು ಸಂಪಾದಕ ಶ್ರೀ ಕೆ. ಸುಬ್ಬರಾವ್ ; ತಮ್ಮ ತಂದೆತಾಯಿಯರ ಹೆಸರಿನಲ್ಲಿ ಇದರ ಪ್ರಕಟನೆಗೆ ಧನ ಸಹಾಯ ಮಾಡಿದ

ಇನ್ನೊಬ್ಬರು, ಜಯನಗರದ ನ್ಯಾಷನಲ್ ಕಾಲೇಜಿನ ಹಿಂದೀ ವಿಭಾಗದ ಹಿರಿಯ ಉಪನ್ಯಾಸಕಿ ಶ್ರೀಮತಿ ಸಿ. ಸೀತಮ್ಮ; ಇದನ್ನು ಅತ್ಯಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟವರು ಇಳಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಗುರುಮೂರ್ತಿ ಮತ್ತು ಅಲ್ಲಿನ ಕೆಲಸಗಾರರು. ಈ ಎಲ್ಲ ವ್ಯಕ್ತಿಗಳಿಗೂ ನಾನು ಋಣಿಯಾಗಿದ್ದೇನೆ.

ಹಿರಿಯರ ಉಪನ್ಯಾಸ, ಗ್ರಂಥಗಳಲ್ಲಿನ ಭಾವ ಮತ್ತು ಮಾತುಗಳೆಂಬ ಒಳ್ಳೆಯ ಹೂಗಳನ್ನು ಆಯ್ದು ಮಾಲೆಯಾಗಿ ಕಟ್ಟುವ ಈ ಕಾರ್ಯದಲ್ಲಿ ನನ್ನದು ನಾರಿನ ಪಾತ್ರ ಮಾತ್ರ. ಈ ಗ್ರಂಥದಲ್ಲಿ ಉಳಿದುಕೊಂಡಿರಬಹುದಾದ ಲೋಪ ದೋಷಗಳನ್ನು ತಿದ್ದಿ ಉತ್ತಮ ಪಡಿಸಲು ನೀಡುವ ಸಲಹೆಗಳಿಗೆ ಸ್ವಾಗತ ಉಂಟು.

ಬೆಂಗಳೂರು-೧೯ | ಸೇವಾಕಾಂಕ್ಷಿ
ಸರ್ವೋದಯ ದಿನ | ಹು. ಜ. ರಾಮಯ್ಯಂಗಾರ್
ಜನವರಿ ೩೦, ೧೯೯೧

# ವಿಷಯ ಸೂಚಿಕೆ



## ಅನುಬಂಧ

ಶ್ರೀ ವೈಷ್ಣವರಿಗೆ ಅತ್ಯಂತ ಉಪಯುಕ್ತವಾದ

**ಹೆಚ್. ಜೆ. ರಾಮಯ್ಯಂಗಾರ್ ಅವರ**

ಐದು ಉತ್ತಮ ಪುಸ್ತಕಗಳು

೧. ರಾಮಾನುಜರ ಬ್ರಹ್ಮಸೂತ್ರ ಭಾಷ್ಯ — ಬೆಲೆ 24 ರೂ
(ಪ್ರಮಾಣ ಸಾಹಿತ್ಯದೊಂದಿಗೆ ವಿಶಿಷ್ಟಾದ್ವೈತದ ಪರಿಚಯ)

೨. ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ — ಬೆಲೆ 10 ರೂ
(ನಾಮಾವಳಿ ಮತ್ತು ಅರ್ಥದೊಂದಿಗೆ)

೩. ಶ್ರೀ ಲಕ್ಷ್ಮೀ ಸಹಸ್ರನಾಮ ಸ್ತೋತ್ರ — ಬೆಲೆ 4 ರೂ
(ನಾಮಾವಳಿಯೊಂದಿಗೆ)

೪. ಅಷ್ಟೋತ್ತರ ಶತನಾಮ ಸ್ತೋತ್ರಗಳು — ಬೆಲೆ 8 ರೂ
(ನಾಮಾವಳಿಯೊಂದಿಗೆ)

೫. ಕೆಲವು ಜನಪ್ರಿಯ ಹಾಡುಗಳು — ಬೆಲೆ 10 ರೂ
(ಪ್ರಮುಖ ಭಕ್ತರ ಪರಿಚಯದೊಂದಿಗೆ)

ಮೇಲ್ಕಂಡ ಐದು ಪುಸ್ತಕಗಳ ಒಂದು ಅಥವಾ ಹೆಚ್ಚು ಕಟ್ಟನ್ನು ಖರೀದಿಸಿ, ನಿಮ್ಮ ಮಿತ್ರರನ್ನೂ ಕೊಳ್ಳುವಂತೆ ಪ್ರೋತ್ಸಾಹಿಸಿ, ಪ್ರಕಟನೆಗೆ ಸಿದ್ಧವಾಗಿರುವ 400 ಪುಟಗಳ ರಾಮಾನುಜ ಸಿದ್ಧಾಂತ ದರ್ಪಣದ ಪರಿಷ್ಕೃತ ಆವೃತ್ತಿಯನ್ನು ಹೊರತರಲು ಸಹಾಯ ಮಾಡಬೇಕಾಗಿ ಪ್ರಾರ್ಥಿಸುತ್ತೇನೆ.

—ಲೇಖಕ ಮತ್ತು ಪ್ರಕಾಶಕ

# ರಾಮಾನುಜರ ಬ್ರಹ್ಮಸೂತ್ರ ಭಾಷ್ಯ

೧

## ಶ್ರೀವೈಷ್ಣವ ಗುರುಪರಂಪರಾ ಧ್ಯಾನಂ

ಅಶೇಷ ಚಿದಚಿದ್ವಸ್ತು ಶೇಷಿಣೇ ಶೇಷಶಾಯಿನೇ ।
ನಿರ್ಮಲಾನಂತ ಕಲ್ಯಾಣ ನಿಧಯೇ ವಿಷ್ಣವೇ ನಮಃ ॥

ನಮಾಮಿ ಸರ್ವಲೋಕಾನಾಂ ಜನನೀಮಬ್ಧಿ ಸಂಭವಾಂ ।
ಶ್ರಿಯಮುನ್ನಿದ್ರಪದ್ಮಾಕ್ಷೀಂ ವಿಷ್ಣು ವಕ್ಷಸ್ಥಲ ಸ್ಥಿತಾಂ ॥

ಚೇತನಾನಾಂ ಸಮಸ್ತಾನಾಂ ಜ್ಞಾನಯಾಥಾತ್ಮ್ಯದಾಯಿನೇ ।
ಲಕ್ಷ್ಮೀಕಟಾಕ್ಷ ಪಾತ್ರಾಯ ಸೇನೇಶಾಯ ನಮೋ ನಮಃ ॥

ತುಲಾಯಾಂ ಶ್ರವಣೇಜಾತಂ ಕಾಂಚ್ಯಾಂಕಾಂಚನ ವಾರಿಜಾತ್ ।
ದ್ವಾಪರೇ ಪಾಂಚಜನ್ಯಾಂಶಂ ಸರೋಯೋಗಿನ ಮಾಶ್ರಯೇ ॥
ಕಾಂಚ್ಯಾಂ ಸರಸಿ ಹೇಮಾಬ್ಜೇ ಜಾತಾಂ ಕಾಸಾರಯೋಗಿನಂ ।
ಕಲಯೇ ಯಃ ಶ್ರಿಯಃಪತ್ಯೇರವಿಂದೀಪಮಕಲ್ಪಯತ್ ॥

ತುಲಾ ಧನಿಷ್ಠಾ ಸಂಭೂತಂ ಭೂತಂ ಕಲ್ಲೋಲಮಾಲಿನಃ ।
ತೀರೇ ಫುಲ್ಲೋತ್ಪಲಾನ್ಮಲ್ಲಾಪುರ್ಯಾಮೀಡೇ ಗದಾಂಶಕಂ ॥
ಮಲ್ಲಾಪುರವರಾಧೀಶಂ ಮಾಧವೀ ಕುಸುಮೋದ್ಭವಂ ।
ಭೂತಂ ನಮಾಮಿ ಯೋ ವಿಷ್ಣೋರ್ಜ್ಞಾನದೀಪಮಕಲ್ಪಯತ್ ॥

ತುಲಾ ಶತಭಿಷಗ್ಜಾತಂ ಮಯೂರಪುರಿ ಕೈರವಾತ್ ।
ಮಹಾಂತಂ ಮಹದಾಖ್ಯಾತಂ ವಂದೇ ಶ್ರೀ ನಂದಕಾಂಶಕಂ ॥
ದೃಷ್ಟ್ವಾತುಷ್ಟಾವಯೋ ವಿಷ್ಣುಂ ರಮಯಾ ಮಯಿಲಾಧಿಪಂ ।
ಕೂಪೇ ರಕ್ತೋತ್ಪಲೇಜಾತಂ ಮಹದಾಹ್ವಯಮಾಶ್ರಯೇ ॥

ಮಖಾಯಾಂ ಮಕರೇ ಮಾಸೇ ಚಕ್ರಾಂಶಂ ಭಾರ್ಗವೋದ್ಭವಂ ।
ಮಹೀಸಾರಪುರಾಧೀಶಂ ಭಕ್ತಿಸಾರಮಹಂಭಜೇ ॥
ಶಕ್ತಿ ಪಂಚಮಯ ವಿಗ್ರಹಾತ್ಮನೇ ಶುಕ್ತಿಹಾರ ಜಿತಚಿತ್ತಹಾರಿಣೇ ।
ಮುಕ್ತಿದಾಯಕ ಮುರಾರಿ ಪಾದಯೋರ್ಭಕ್ತಿಸಾರ ಮುನಯೇ ನಮೋನಮಃ ॥

ಮೇಷೇ ಚಿತ್ರಾ ಸಮುದ್ಭೂತಂ ಪಾಂಡ್ಯದೇಶೇಗಣಾಂಶಕಂ ।
ಶ್ರೀಪರಾಂಕುಶಸದ್ಭಕ್ತಂ ಮಧುರಂ ಕವಿಮಾಶ್ರಯೇ ॥
ಹಸ್ತಸ್ಥತಾಳದ್ವಿತಯಃ ಪ್ರಪದ್ಯೇ ಶಠಾರಿ ವಾಗ್ವ್ಯಾಸಮುದಾರಕೀರ್ತಿಂ ।
ಮಾಧುರ್ಯ ಸಂಶ್ಲಿಷ್ಟ ಕವಿತ್ವಯುಕ್ತಂ ಮಹತ್ವ ಸಂಭಾವಿತ ಬುದ್ಧಿತತ್ತ್ವಂ ॥

ವೃಷಭೇತು ವಿಶಾಖಾಯಾಂ ಕುರುಕಾಪುರಿಕಾರಿಜಂ ।
ಪಾಂಡ್ಯದೇಶೇ ಕಲೇರಾದೌ ಶಠಾರಿಂ ಸೈನ್ಯಪಂ ಭಜೇ ॥
ವಕುಳಾಭರಣಂ ವಂದೇ ಜಗದಾಭರಣಂ ಮುನಿಂ ।
ಯಃಶ್ರುತೇರುತ್ತರಂ ಭಾಗಂ ಚಕ್ರೇ ದ್ರಾವಿಡ ಭಾಷಯಾ ॥
ಮಾತಾಪಿತಾ ಯುವತಯಸ್ತನಯಾ ವಿಭೂತಿ
ಸ್ಸರ್ವಂ ಯದೇವ ನಿಯಮೇನ ವದನ್ವಯಾನಾಂ ।
ಆದ್ಯಸ್ಯನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ॥

ಕುಂಭೇ ಪುನರ್ವಸೂ ಜಾತಂ ಕೇರಳೇ ಕೋಳಿಪಟ್ಟಣೇ ।
ಕೌಸ್ತುಭಾಂಶಂ ಧರಾಧೀಶಂ ಕುಲಶೇಖರಮಾಶ್ರಯೇ ।
ಘುಷ್ಯತೇ ಯತ್ರನಗರೇ ರಂಗಯಾತ್ರಾದಿನೇದಿನೇ ।
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ ॥

ಮಿಥುನೇ ಸ್ವಾತಿಜಂ ವಿಷ್ಣು ರಥಾಂಶಂ ಧನ್ವಿನಃ ಪುರೇ ।
ಪ್ರಪದ್ಯೇ ಶ್ವಶುರಂ ವಿಷ್ಣೋರ್ವಿಷ್ಣುಚಿತ್ತಂ ಪುರಶ್ಶಿಖಂ ॥
ಗುರುಮುಖಮನಧೀತ್ಯ ಪ್ರಾಹವೇದಾನಶೇಷಾನ್
ನರಪತಿ ಪರಿಕ್ಲಿಪ್ತಂ ಶುಲ್ಕಮಾದಾತುಕಾಮಃ ।
ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್
ದ್ವಿಜಕುಲತಿಲಕಂ ತಂ ವಿಷ್ಣುಚಿತ್ತಂ ನಮಾಮಿ ।

ಕರ್ಕಟೇ ಪೂರ್ವ ಫಲ್ಗುನ್ಯಾಂ ತುಲಸೀಕಾನನೋದ್ಭವಾಂ ।
ಪಾಂಡ್ಯೇ ವಿಶ್ವಂಭರಾಂಗೋದಾಂ ವಂದೇ ಶ್ರೀರಂಗವಲ್ಲಭಾಂ ॥
ನೀಳಾತುಂಗಸ್ತನಗಿರಿತಟೀ ಸುಪ್ತಮುದ್ಬೋಧ್ಯ ಕೃಷ್ಣಂ
ಪಾರಾರ್ಥ್ಯಂಸ್ವಂ ಶ್ರುತಿಶತಶಿರಸ್ಸಿದ್ಧಮಧ್ಯಾಪಯಂತೀ ।
ಸ್ವೋಚ್ಛಿಷ್ಟಾಯಾಂ ಸ್ರಜಿನಿಗಳಿತಂ ಯಾ ಬಲಾತ್ಕೃತ್ಯಭುಂಕ್ತೇ
ಗೋದಾ ತಸ್ಯೈನಮ ಇದಮಿದಂ ಭೂಯ ಏವಾಸ್ತುಭೂಯಃ ॥

ಧನುಷಿ ಜ್ಯೇಷ್ಠನಕ್ಷತ್ರೇ ಮಂಡಂಗುಡಿಪುರೋದ್ಭವಂ ।
ಚೋಳೋರ್ವ್ಯಾಂ ವನಮಾಲಾಂಶಂ ಭಕ್ತಾಂಘ್ರಿರೇಣುಮಾಶ್ರಯೇ ॥

ತವೋಪಮತ್ವಾ ಪರವಾಸುದೇವಂ ರಂಗೇಶಯಂ ರಾಜವದರ್ಹಣೀಯಂ ।
ಪ್ರಾಬೋಧಕೀಂ ಯೋಕೃತಸೂಕ್ತಿಮಾಲಾಂ ಭಕ್ತಾಂಘ್ರಿರೇಣುಂ ಭಗವಂತಮೀಡೇ ॥

ವೃಶ್ಚಿಕೇ ರೋಹಿಣೀಜಾತಂ ಶ್ರೀಪಾಣಂ ನಿಚುಳಾಪುರೇ ।
ಶ್ರೀವತ್ಸಾಂಶಂ ಗಾಯಕೇಂದ್ರಂ ಮುನಿವಾಹನಮಾಶ್ರಯೇ ॥
ಆಪಾದಚೂಡಮನುಭೂಯ ಹರಿಂಶಯಾನಂ
ಮಧ್ಯೇಕವೇರ ದುಹಿತುರ್ಮುದಿತಾಂತರಾತ್ಮಾ ।
ಅದೃಷ್ಟತಾಂ ನಯನಯೋರ್ವಿಷಯಾಂತರಾಣಾಂ
ಯೋ ನಿಶ್ಚಿಕಾಯ ಮನವೈಮುನಿವಾಹನಂ ತಂ ॥

ವೃಶ್ಚಿಕೇ ಕೃತ್ತಿಕಾಜಾತಂ ಚತುಷ್ಕವಿ ಶಿಖಾಮಣಿಂ ।
ಷಟ್ಪ್ರಬಂಧಕೃತಂಶಾರ್ಙ್ಗಮೂರ್ತಿಂ ಕಲಿಹನಂಭಜೇ ॥
ಕಲಿಯಾಮಿ ಕಲಿಧ್ವಂಸಂ ಕವಿಂ ಲೋಕದಿವಾಕರಂ ।
ಯಸ್ಯಗೋಭಿಃ ಪ್ರಕಾಶಾಭಿರಾವಿದ್ಯಂ ನಿಹಿತಂ ತಮಃ ॥

ಜ್ಯೇಷ್ಠೇನುರಾಧಾ ಸಂಭೂತಂ ವೀರನಾರಾಯಣೇಪುರೇ ।
ಗಜವಕ್ತ್ರಾಂಶಮಾಚಾರ್ಯಮಾದ್ಯಂ ನಾಥಮುನಿಂ ಭಜೇ ॥
ನಮೋಚಿಂತ್ಯಾದ್ಭುತಾಕ್ಲಿಷ್ಟ ಜ್ಞಾನವೈರಾಗ್ಯರಾಶಯೇ ।
ನಾಥಾಯ ಮುನಯೇಽಗಾಧ ಭಗವದ್ಭಕ್ತಿಸಿಂಧವೇ ॥
ವ್ಯೋಮ್ನಃಪರಸ್ಮಾತ್ಸವಿಧಂ ಸಮೇತ್ಯ ಲಕ್ಷ್ಮ್ಯಾ ನಿಯೋಗಾತ್ಕುರುಕಾಧಿರಾಜಃ ।
ಸಮಂತ್ರರತ್ನಂ ದ್ವಯಮಾಹ ಯಸ್ಮೈ ನಾಥಾಯ ತಸ್ಮೈಮುನಯೇ ನಮೋಽಸ್ತು ॥

ನಮಃ ಪಂಕಜನೇತ್ರಾಯ ನಾಥಶ್ರೀಪಾದಪಂಕಜೇ ।
ನ್ಯಸ್ತ ಸರ್ವಭರಾಯಾಸ್ಮತ್ಕುಲನಾಥಾಯಧೀಮಹಿ ॥

ಅಯತ್ನತೋಯಾಮುನಮಾತ್ಮದಾಸಂ ಅಲರ್ಕಪತ್ರಾರ್ಪಣ ನಿಷ್ಕ್ರಯೇಣ ।
ಯಃಕ್ರೀತವಾನಾಸ್ಥಿತಯೌವರಾಜ್ಯಂ ನಯಾಮಿ ತಂ ರಾಮಮಮೇಯ ಸತ್ತ್ವಂ ॥

ಯಾಮುನಾರ್ಯಸುಂದಾಂಬೋಧಿಂ ಅವಗಾಹ್ಯಯಥಾಮತಿ ।
ಆದಾಯ ಭಕ್ತಿಯೋಗಾಖ್ಯಂ ರತ್ನಂ ಸಂದರ್ಶಯಾಮ್ಯಹಂ ॥
ವಿದಾಯ ವೈದಿಕಂ ಮಾರ್ಗಂ ಯತ್ಸೈಕತುಸ್ತುತ ಕಂಟಕಂ ।
ನೇತಾರಂ ಭಗವದ್ಭಕ್ತೇಃ ಯಾಮುನಂ ಜನಪಾಮಹೇ ॥
ಆಷಾಢೇ ಚೋತ್ತರಾಷಾಢಾ ಸಂಭೂತಂ ತತ್ರವೈಪುರೇ ।
ಸಿಂಹಾಸನಾಂಶಂ ವಿಖ್ಯಾತಂ ಶ್ರೀಯಾಮುನಮುನಿಂ ಭಜೇ ॥

ಶ್ರೀರಾಮಮಿಶ್ರ ಸಚ್ಛಿಷ್ಯಂ ವಂದೇ ತತ್ತ್ವಾರ್ಥ ಕೋವಿದಂ ।
ಪಾದಾದಪಾಪ್ತ ರಾಜ್ಯಾದ್ಯೋ ವಿರಕ್ತೋ ಯಾಮುನೋಭವೇತ್ ॥
ಯತ್ಪದಾಂಭೋರುಹಧ್ಯಾನ ವಿಧ್ವಸ್ತಾಶೇಷ ಕಲ್ಮಷಃ ।
ವಸ್ತುತಾಮುಪಯಾತೋಹಂ ಯಾಮುನೇಯಂ ನಮಾಮಿ ತಂ ॥
ವಿಗಾಹೇಯಾಮುನಂ ತೀರ್ಥಂಸಾಧು ಬೃಂದಾವನೇ ಸ್ಥಿತಂ ।
ನಿರಸ್ತಜಿಹ್ಮಗಸ್ಪರ್ಶೇ ಯತ್ರ ಕೃಷ್ಣಃ ಕೃತಾದರಃ ॥
ಸಿಂಹಾಸನಾಂಶಭವಮೀಶ್ವರ ಯೋಗಿ ಸಿಂಧು
ಮುಕ್ತಾಮಣಿಂ ಮಹಿತನಾಥ ಮುನೀಂದ್ರ ಪೌತ್ರಂ ।
ಪ್ರಜ್ಞಾ ವಿಶೇಷ ಜಲಧಿಂ ಪ್ರತಿಪಾದಕೂಲ
ಜಂಘಾನಿಲಂ ಹೃದಯ ಚಿಂತಯ ಯಾಮುನಾರ್ಯಂ ॥
ಪರಂಬ್ರಹ್ಮೈವಾಜ್ಞಂ ಭ್ರಮ ಪರಿಗತಂ ಸಂ ಸರತಿತತ್
ಪರೋಪಾಧ್ಯಾಲೀಢಂ ವಿವಶಮಶುಭಸ್ಯಾಸ್ಪದ ಮಿತಿ ।
ಶ್ರುತಿನ್ಯಾಯಾ ಪೇತಂ ಜಗತಿ ವಿತತಂ ಮೋಹನಮಿದಂ
ತಮೋಯೇನಾಪಾಸ್ತಂ ಸಹಿ ವಿಜಯತೇ ಯಾಮುನ ಮುನಿಃ ॥

ಕುಂಭೇಮೃಗಶಿರೋಜಾತಂ ಶ್ರೀಕಾಂಚೀಪೂರ್ಣಮಾಶ್ರಯೇ ।
ಷಟ್ಸೂಕ್ತಿಂ ಯತಿರಾಜಾಯ ಯನ್ಮುಖಾದ್ವರದೋಽ ಬ್ರವೀತ್ ॥
ಕರುಣಾಕರ ಪಾದಾಬ್ಜ ಶರಣಾಯ ಮಹಾತ್ಮನೇ ।
ಶ್ರೀಮದ್ಗಜೇಂದ್ರದಾಸಾಯ ಕಾಂಚೀಪೂರ್ಣಾಯ ತೇ ನಮಃ ॥
ಶ್ರೀಮತ್ಕಾಂಚೀಮುನಿಂವಂದೇ ಕಮಲಾಪತಿ ನಂದನಂ
ವರದಾಂಘ್ರಿ ಸದಾಸಂಗ ರಸಾಯನ ಪರಾಯಣಂ ।
ದೇವರಾಜ ದಯಾಪಾತ್ರಂ ಶ್ರೀಕಾಂಚೀಪೂರ್ಣಮುತ್ತಮಂ
ರಾಮಾನುಜಮುನೇರ್ಮಾನ್ಯಂ ವಂದೇಹಂ ಸಜ್ಜನಾಶ್ರಯಂ ॥

ಕಮಲಾಪತಿ ಕಲ್ಯಾಣ ಗುಣಾಮೃತ ನಿಷೇವಯಾ ।
ಪೂರ್ಣಕಾಮಾಯ ಸತತಂ ಪೂರ್ಣಾಯ ಮಹತೇ ನಮಃ ॥
ಆಚಾರ್ಯಾದ್ಯಾಮುನೇಯಾದಧಿಗತನಿಗಮಾನಾರ್ಥ ಜಾತಃ ಪ್ರಪತ್ತಿಂ
ಚೋಪಾರಿಕ್ಷದ್ರಹಸ್ಯಾನ್ಯಪಿ ಯತಿಪತಯೇ ಯಶ್ಚತದ್ರಕ್ಷಣಾರ್ಥಂ ।
ಚೋಳೇಂದ್ರ ಪ್ರಾಪ್ಯ ಚೋಕ್ತಾ ಸದಸಿಪರಪುಮಾನ್ ಶ್ರೀಪತಿರ್ನೀತಿಪೀಡಾಂ
ಶಾರೀರಾಂತತ್ಕೃತಾಂಚಾಪ್ಯ ಸಹತಮನಘೈ ತಂ ಮಹಾಪೂರ್ಣಮಾರ್ಯಂ ॥

ಪಿತಾಮಹಸ್ಯಾಪಿ ಪಿತಾಮಹಾಯ ಪ್ರಾಚೇತಸಾದೇಶ ಫಲಪ್ರದಾಯ ।
ಶ್ರೀಭಾಷ್ಯಕಾರೋತ್ತಮ ದೇಶಿಕಾಯ ಶ್ರೀಶೈಲಪೂರ್ಣಾಯ ನಮೋನಮಸ್ತೇ ॥

ಶಮದಮಗುಣ ಪೂರ್ಣಂ ಯಾಮುನಾರ್ಯಪ್ರಸಾದಾತ್
ಅಧಿಗತ ಪರಮಾರ್ಥಂ ಜ್ಞಾನಭಕ್ತ್ಯಾದಿ ಸಿಂಧುಂ ।
ಯತಿಪತಿನುತಪಾದಂ ಶ್ಲೋಕ ತತ್ತ್ವಾರ್ಥ ನಿಷ್ಠಂ
ಶ್ರಿತದುರಿತಹರಂ ಗೋಷ್ಠಿಪೂರ್ಣಂ ನಮಾಮಿ ॥

ರಾಮಾನುಜ ಮುನೀಂದ್ರಾಯ ದ್ರಾವಿಡೀ ಸಂಹಿತಾರ್ಥದಂ ।
ಮಾಲಾಧರ ಗುರುಂವಂದೇ ಪಾಪದೂರಂ ವಿಪಶ್ಚಿತಂ ॥

ಅಧ್ಯಾಯ ಪದ್ಯತೀಂದ್ರಾಯ ಪರಾಂಕುಶಮಹೀಸ್ತ್ರಕಾಂ ।
ತಾನ್ಯಾಥವಂಶ್ಯಂ ವಂದೇಹಂ ಶ್ರೀರಂಗಾಧಿಪ ದೇಶಿಕಂ ॥

ಚೈತ್ರಾರ್ದ್ರಾ ಸಂಭವಂ ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ ।
ತುಂಡೀರಮಂಡಲೇ ಶೇಷಮೂರ್ತಿಂ ರಾಮಾನುಜಂ ಭಜೇ ॥
ಪುಣ್ಯಾಂಭೋಜವಿಕಾಸಾಯ ಪಾಪಧ್ವಾಂತಕ್ಷಯಾಯ ಚ ।
ಶ್ರೀಮಾನಾವಿರಭೂದ್ಭೂಮೌ ರಾಮಾನುಜ ದಿವಾಕರಃ ॥
ತಸ್ಮೈ ರಾಮಾನುಜಾರ್ಯಾಯ ನಮಃ ಪರಮಯೋಗಿನೇ ।
ಯಃಶ್ರುತಿ ಸ್ಮೃತಿಸೂತ್ರಾಣಾಂ ಅಂತರ್ಜ್ವರ ಮಶೀಶಮತ್ ॥
ಚಿದಚಿತ್ಪರತತ್ತ್ವಾನಾಂ ತತ್ತ್ವಯಾಥಾರ್ಥ್ಯ ವೇದಿನೇ ।
ರಾಮಾನುಜಾಯ ಮುನಯೇ ನಮೋಮಮ ಗರೀಯಸೇ ॥
ಶ್ರೀ ಭಾಷ್ಯಕಾರ ಭಗವನ್‌ಯತಿ ಸಾರ್ವಭೌಮ
ಶ್ರೀಭೂತ ದಿವ್ಯ ನಗರೀಕೃತನಿತ್ಯವಾಸ ।
ಶ್ರೀದೇವರಾಜ ಚರಣಾಂಬುರುಹಾಂತರಂಗ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥
ನಮಃಪ್ರಣವ ಶೋಭಿತಂ ನವಕಷಾಯ ಖಂಡಾಂಬರಂ
ತ್ರಿದಂಡ ಪರಿಮಂಡಿತಂ ತ್ರಿವಿಧ ತತ್ತ್ವ ನಿರ್ವಾಹಕಂ ।
ದಯಾಂಚಿತದೃಗಂಚಲಂ ದಳಿತವಾದಿ ವಾಗ್ವೈಭವಂ
ಶಮಾದಿ ಗುಣಸಾಗರಂ ಶರಣಮೇಮಿ ರಾಮಾನುಜಂ ॥
ಯೋನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯದಯೈಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥

ರಾಮಾನುಜ ದಯಾಪಾತ್ರಂ ಜ್ಞಾನವೈರಾಗ್ಯ ಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವಂದೇ ವೇದಾಂತದೇಶಿಕಂ ॥

ಕವಿತಾರ್ಕಿಕ ಸಿಂಹಾಯ ಕಲ್ಯಾಣ ಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತ ಗುರವೇ ನಮಃ ॥

ಶ್ರೀಶೈಲೇಶ ದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ ।
ಯತೀಂದ್ರ ಪ್ರವಣಂ ವಂದೇ ರಮ್ಯ ಜಾಮಾತರಂ ಮುನಿಂ ॥
ಶ್ರೀಮತೇ ರಮ್ಯಜಾಮಾತೃ ಮುನೀಂದ್ರಾಯ ಮಹಾತ್ಮನೇ ।
ಶ್ರೀರಂಗವಾಸಿನೇ ಭೂಯಾತ್ ನಿತ್ಯಶ್ರೀರ್ನಿತ್ಯ ಮಂಗಳಂ ॥

ಕೇಶವಾರ್ಯ ಕೃಪಾಪಾತ್ರಂ ಧೀಶಮಾದಿಗುಣಾರ್ಣವಂ ।
ಶ್ರೀ ಶಠಾರಿಯತೀಶಾನಂ ದೇಶಿಕೇಂದ್ರಮಹಂ ಭಜೇ ॥
ಭಾಷ್ಯಕಾರಃ ಪುನರ್ಭೂಮೌ ಭಾಷ್ಯ ಪ್ರವಚನಾದರಾತ್ ।
ಯದ್ರೂಪೇಣಾಗತಸ್ತಸ್ಮೈ ಶಠಗೋಪಾಯ ಮಂಗಳಂ ॥

– ❋ –

೨

# ವಿಷಯ ಪ್ರವೇಶ

ಹಿಂದೂಗಳ ಪವಿತ್ರ ಗ್ರಂಥವಾದ ವೇದದಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕ ಎಂಬ ಮೂರು ಮುಖ್ಯ ಭಾಗಗಳಿವೆ. ಆರಣ್ಯಕದಲ್ಲಿ ಆತ್ಮನ ವಿಚಾರ ಇರುವ ಭಾಗವು ಉಪನಿಷತ್ತು ಎನಿಸುತ್ತದೆ. ಉಪನಿಷತ್ತುಗಳು ವೇದದ ಕೊನೆಯ ಭಾಗವಾದ ಆರಣ್ಯಕದಲ್ಲಿ ಇರುವುದರಿಂದ ಅವುಗಳಿಗೆ ವೇದಾಂತ ಎಂದು ಹೆಸರು ಬಂದಿದೆ. ಈ ಉಪನಿಷತ್ತುಗಳಲ್ಲಿರುವ ಸಾರವು ಭಗವದ್ಗೀತೆಯಲ್ಲೂ ಇದೆ. ಉಪನಿಷತ್ತು ಮತ್ತು ಭಗವದ್ಗೀತೆಗಳಲ್ಲಿರುವ ತತ್ತ್ವ, ಅದನ್ನು ಕಂಡುಕೊಳ್ಳಬಹುದಾದ ಸಾಧನ, ಅದರಿಂದಾಗುವ ಪ್ರಯೋಜನ, ಇವೆಲ್ಲವುಗಳನ್ನೂ ನಿರ್ಣಯಿಸುವ ಶಾಸ್ತ್ರವು ವೇದಾಂತ ದರ್ಶನ ಎನಿಸಿಕೊಳ್ಳುತ್ತದೆ. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆ ಎಂಬ ಆರು ದರ್ಶನಗಳಲ್ಲಿಯೂ ವೇದೋಕ್ತಿಗಳನ್ನು ಕುರಿತು ವಿಚಾರ ಮಾಡಲಾಗಿದೆ. ಆದರೂ ಉತ್ತರ ಮೀಮಾಂಸೆಯು ಮುಖ್ಯವಾಗಿ ಉಪನಿಷತ್ತುಗಳ ತಾತ್ಪರ್ಯವನ್ನೇ ವಿಚಾರ ಮಾಡು ವುದರಿಂದ ಅದಕ್ಕೆ ವೇದಾಂತ ದರ್ಶನ ಎಂಬ ಹೆಸರೇ ರೂಢಿಯಲ್ಲಿದೆ. ಇದು ಹಿಂದೂ ಗಳ ವಿಚಾರ ವೃಕ್ಷದ ಪರಿಪಕ್ವವಾದ ಫಲವಾಗಿರುತ್ತದೆ.

ನಾವು ಇರುವ ಈ ಜಗತ್ತಿನ ಮೂರು ತತ್ತ್ವಗಳಾದ ಚಿತ್ (ಪುರುಷ), ಅಚಿತ್ (ಪ್ರಕೃತಿ), ಈಶ್ವರ (ಪುರುಷೋತ್ತಮ) ಎಂಬುದನ್ನು ವಿವರಿಸಿ ಇವುಗಳ ಪರಸ್ಪರ ಸಂಘಟನೆ–ಸಂಬಂಧಗಳನ್ನೆಲ್ಲ ವಿವರಿಸುವುದು ವೇದಾಂತ ಸೂತ್ರ ಅಥವಾ ಬ್ರಹ್ಮ ಸೂತ್ರಗಳ ಗುರಿ. ಸಾರವತ್ತಾದ ವಿಷಯವನ್ನು, ಸಂದೇಹಕ್ಕೆ ಆಸ್ಪದವಿಲ್ಲ ದಂತೆ, ಸ್ವಲ್ಪದರಲ್ಲಿ ತಿಳಿಸುವ ವಾಕ್ಯವೇ ಸೂತ್ರ ಎನಿಸುತ್ತದೆ. ಉಪನಿಷತ್ತುಗಳಲ್ಲಿ ಹೇಳಿರುವ ಪರಮ ತತ್ತ್ವಕ್ಕೆ ಬ್ರಹ್ಮ ಎಂಬ ಹೆಸರಿರುವುದರಿಂದ, "ಬ್ರಹ್ಮ ಪ್ರಮಾಣಂ, ಬ್ರಹ್ಮ ಯುಕ್ತಿಃ, ಬ್ರಹ್ಮ ಸಾಧನಂ, ಬ್ರಹ್ಮ ಫಲಮಿತಿ" ಎಂಬಂತೆ ನಾಲ್ಕು ಅಧ್ಯಾಯ ಗಳೂ ಬ್ರಹ್ಮನ ವಿಚಾರ ಮಾಡುವುದರಿಂದ, ವೇದಾಂತ ಸೂತ್ರಗಳನ್ನು ಬ್ರಹ್ಮ ಸೂತ್ರ ಎಂದು ಕರೆಯುತ್ತಾರೆ.

ಉಪನಿಷತ್ತು, ಭಗವದ್ಗೀತೆಗಳಲ್ಲಿ ಇರುವುದೇ ಬ್ರಹ್ಮಸೂತ್ರಗಳಲ್ಲಿಯೂ ಇರುವುದರಿಂದ, ಇವು ಮೂರನ್ನೂ ಪ್ರಸ್ಥಾನತ್ರಯ ಅಥವಾ ತತ್ತ್ವವನ್ನು ತಿಳಿಸಲು ಹೊರಟ ರೀತಿ ಎನ್ನುತ್ತಾರೆ. ಅತಿ ಸಂಕ್ಷಿಪ್ತವಾಗಿರುವ ಬ್ರಹ್ಮಸೂತ್ರಗಳ ಅರ್ಥ ವನ್ನು ತಿಳಿದುಕೊಳ್ಳುವುದು ಬಹು ಕಷ್ಟವಾದುದರಿಂದ ಈ ಸೂತ್ರಗಳಿಗೆ ಶಂಕರ,

ರಾಮಾನುಜ, ಮಧ್ವ ಎಂಬ ಮೂವರು ಶ್ರೇಷ್ಠ ಆಚಾರ್ಯರುಗಳು ಭಾಷ್ಯವನ್ನು ಬರೆದು ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳನ್ನು ಸಮರ್ಥಿಸಿ ಕೊಂಡಿರುತ್ತಾರೆ. ರಾಮಾನುಜರ ವಿಶಿಷ್ಟಾದ್ವೈತವು ಅದ್ವೈತ, ದ್ವೈತಗಳ ಮಧ್ಯ ಸ್ಥಾನದಲ್ಲಿದ್ದು, ಇವೆರಡರ ಸುಂದರ ಸಮನ್ವಯದ ಪ್ರಯತ್ನ ಇದರಲ್ಲಿ ಕಾಣ ಬರುತ್ತದೆ.

ಬ್ರಹ್ಮರುದ್ರಾದಿ ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಪುರುಷೋತ್ತಮ ನಾದ ನಾರಾಯಣನು, ಪರಾಶರ–ಸತ್ಯವತಿಯರ ಕುಮಾರನಾಗಿ ಅವತರಿಸಿ, ನಿಗಮಾಚಾರ್ಯರೆಂದು ಪ್ರಖ್ಯಾತರಾದ ವೇದವ್ಯಾಸರೂಪಿಯಾಗಿ, ಯಥಾರ್ಥವಾದ ವೇದಾಂತ ಸಾರತತ್ತ್ವಜ್ಞರಾಗಿ, ಉಪನಿಷತ್ತುಗಳೆಂಬ ಅಮೃತ ಸಮುದ್ರವನ್ನು ಸೂತ್ರಗಳೆಂಬ ಕಡೆಗೋಲಿನಲ್ಲಿ ಮಥನಮಾಡಿ, ಸಾರಭೂತವಾದ ನವನೀತವನ್ನು ಸಂಸ್ಕೃತ ಭಾಷೆಯಲ್ಲಿ 156 ಅಧಿಕರಣಗಳ 545 ಬ್ರಹ್ಮಸೂತ್ರಗಳ ರೂಪದಲ್ಲಿ ಲೋಕ ಕಲ್ಯಾಣಕ್ಕಾಗಿ ಕೊಟ್ಟಿರುತ್ತಾರೆ. ಈ ಬ್ರಹ್ಮಸೂತ್ರವು ತತ್ತ್ವಹಿತ ಪುರುಷಾರ್ಥ ಗಳನ್ನು ತರ್ಕಬದ್ಧವಾಗಿ, ಭ್ರಾಂತಿ ಉಂಟಾಗದಂತೆ, ಪೂರ್ಣವಾಗಿ ವಿಚಾರ ಮಾಡಿ ನಿರ್ಣಯಿಸಿದೆ. ಇದಕ್ಕೆ ಬೋಧಾಯನ ಋಷಿಗಳು ವ್ಯಾಸರ ಅಭಿಪ್ರಾಯವನ್ನು ಅನುಸರಿಸಿ ವೃತ್ತಿ ಎಂಬ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದರು. ವಾಕ್ಯಕಾರರು ಇದಕ್ಕೆ ಸಂಗ್ರಹವಾಗಿ ವ್ಯಾಖ್ಯಾನವೊಂದನ್ನು ಬರೆದರು. ಈ ವಾಕ್ಯಕಾರರ ಕೃತಿಗೆ ದ್ರಮಿಡಾಚಾರ್ಯರು ಸಂಗ್ರಹವಾಗಿ ಭಾಷ್ಯವೊಂದನ್ನು ಬರೆದರು.

ತನ್ನ ನಿಃಶ್ವಾಸದಿಂದ ಉತ್ಪನ್ನವಾದ ವೇದಗಳನ್ನು ಮೊದಲು ಚತುರ್ಮುಖ ಬ್ರಹ್ಮನಿಗೆ ಉಪದೇಶಿಸಿ ವೇದರಕ್ಷಣೆ ಮಾಡಿ, ವೇದಮಯ ಶರೀರನಾದ ಗರುಡನನ್ನು ವಾಹನವಾಗಿ ಉಳ್ಳ ಆ ನಾರಾಯಣನೇ ಯತಿರಾಜ ರಾಮಾನುಜರ ಹೃದಯಾರೂಢ ನಾಗಿ ನಿಂತು, ಬೋಧಾಯನ ವೃತ್ತಿ, ವಾಕ್ಯ–ದ್ರಮಿಡ ಭಾಷ್ಯ ಇವುಗಳನ್ನು ಅನುಸರಿಸಿ, ಸೂತ್ರಗಳಿಗೆ ಭಾಷ್ಯವನ್ನು ರಚಿಸಿದನು. ಮುಕ್ತಿಯನ್ನು ಪಡೆಯ ಬೇಕೆನ್ನುವ ಪ್ರತಿಯೊಬ್ಬರೂ ಇದರಲ್ಲಿ ಅಡಗಿರುವ ವಿಷಯಗಳನ್ನು ತಿಳಿದುಕೊಳ್ಳ ಬೇಕು.

ಬೋಧಾಯನ ಅಥವಾ ಉಪವರ್ಷರು ವಿಸ್ತೀರ್ಣವಾಗಿ ಬರೆದ ಬ್ರಹ್ಮಸೂತ್ರ ವೃತ್ತಿ, ವಾಕ್ಯ–ದ್ರಮಿಡರ ಸಂಕ್ಷೇಪ ಭಾಷ್ಯ, ಇವುಗಳಲ್ಲಿರುವ ಅಭಿಪ್ರಾಯವನ್ನೇ ಅನುಸರಿಸಿ, ಸೂತ್ರಾಕ್ಷರಗಳು ವ್ಯಾಖ್ಯಾನ ಮಾಡಲ್ಪಡುತ್ತವೆ ಎಂಬುದಾಗಿ ರಾಮಾನುಜರು ತಮ್ಮ ಭಾಷ್ಯದ ಅವತರಣಿಕೆಯಲ್ಲಿಯೇ ಹೇಳಿರುತ್ತಾರೆ. ಬೋಧಾಯನ ವೃತ್ತಿಯ ವಾಕ್ಯಗಳೊಂದಿಗೇ, ಛಾಂದೋಗ್ಯೋಪನಿಷತ್ತಿಗೆ ವಾಕ್ಯ ವೆಂಬ ವ್ಯಾಖ್ಯಾನವನ್ನು ಬರೆದ ಟಂಕಾಚಾರ್ಯರೆಂಬ ಬ್ರಹ್ಮನಂದಿಗಳ ವಾಕ್ಯಗಳನ್ನೂ, ಅದಕ್ಕೆ ಪ್ರಸಿದ್ಧವಾದ ಭಾಷ್ಯವನ್ನು ಬರೆದ ದ್ರಮಿಡಾಚಾರ್ಯರ ವಾಕ್ಯಗಳನ್ನೂ ರಾಮಾನುಜರು ತಮ್ಮ ಭಾಷ್ಯದಲ್ಲಿ ಉದಾಹರಿಸಿದ್ದಾರೆ.

ತಮ್ಮ ಪ್ರಿಯಶಿಷ್ಯ ಹಾಗೂ ಮಹಾಮೇಧಾವಿಯಾದ ಶ್ರೀವತ್ಸಾಂಕಮಿಶ್ರ ಅಥವಾ ಕೂರೇಶರ ಸಹಾಯದಿಂದ, ರಹಸ್ಯವಾಗಿ ಇಡಲ್ಪಟ್ಟಿದ್ದ ಬೋಧಾಯನ ವೃತ್ತಿಯನ್ನು ಅತಿಶ್ರಮಪಟ್ಟು ಅವಲೋಕಿಸಿ, ವ್ಯಾಸರ ಬ್ರಹ್ಮಸೂತ್ರಗಳಿಗೆ ವಿಶಿಷ್ಟಾ-ದ್ವೈತ ಪರವಾಗಿ ರಾಮಾನುಜರು ರಚಿಸಿದ ವಿಸ್ತಾರವಾದ ಹಾಗೂ ಪರಿಪೂರ್ಣವಾದ ವಿವರಣೆಯೇ ಶ್ರೀಭಾಷ್ಯ. ಉಪನಿಷತ್ತುಗಳು ಹಾಗೂ ಪರಾಶರ ಮಹರ್ಷಿಯ ವಿಷ್ಣು ಪುರಾಣಗಳಲ್ಲಿ ಪ್ರತಿಪಾದಿತವಾಗಿ, ವೇದವ್ಯಾಸರ ಬ್ರಹ್ಮಸೂತ್ರದಲ್ಲಿ ಸೂಚಿತ ವಾಗಿ, ಮಹಾಭಾರತದಲ್ಲಿ ವರ್ಣಿತವಾಗಿ, ಬೋಧಾಯನ ಮುನಿಯಿಂದ ವಿವರಿಸ ಲ್ಪಟ್ಟಿರುವ, ನಾಥಮುನಿ ಮತ್ತು ಯಾಮುನಮುನಿಗಳಿಂದ ಪರೀಕ್ಷಿಸಲ್ಪಟ್ಟ, ವಿಶಿಷ್ಟಾದ್ವೈತ ಸಿದ್ಧಾಂತವು ರಾಮಾನುಜರ ಶ್ರೀಭಾಷ್ಯದಲ್ಲಿ, ಪರಿಷ್ಕರಣ ರೀತಿಯಲ್ಲಿ ಸ್ಪಷ್ಟ, ವಿಸ್ತಾರ ಆಗಿ ನಿರೂಪಿಸಲ್ಪಟ್ಟು, ಪ್ರಮಾಣ–ಯುಕ್ತಿಗಳಿಂದ ತಾರ್ಕಿಕವಾಗಿ ಸುವ್ಯವಸ್ಥಿತ ರೂಪದಲ್ಲಿ ಪ್ರತಿಪಾದಿಸಲ್ಪಟ್ಟು, ಸುಪ್ರತಿಷ್ಠಿತವಾದ ನೆಲೆಯನ್ನು ಪಡೆ ಯುವಂತೆ ಸುಭದ್ರಗೊಳಿಸಲ್ಪಟ್ಟಿದೆ. ಇದರಲ್ಲಿ ಸಂಪ್ರದಾಯ ವಿರುದ್ಧವಾದ ನವೀನ ಅರ್ಥ ಕಲ್ಪನೆ ಇರುವುದರ ಬದಲು, ಸಂಪ್ರದಾಯದ ಜಾಡನ್ನೇ ಹಿಡಿದು ಹಳೆಯ ಅರ್ಥವನ್ನು ಹೊಸರೀತಿಯಲ್ಲಿ ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ. ಸಾರಾ ಸಾರ ವಿವೇಕ, ಸರ್ವಶಾಸ್ತ್ರ ವಿಮರ್ಶೆ, ವಿಮತ್ಸರ ದೃಷ್ಟಿ, ಪ್ರಮಾಣ ಶೀಲತೆ, ಎಂಬೀ ಲಕ್ಷಣಗಳುಳ್ಳ ಶ್ರೀ ಭಾಷ್ಯವು ವಿಶಿಷ್ಟಾದ್ವೈತ ಸಿದ್ಧಾಂತದ ಶಿಖರ ಪ್ರಾಯ ಕೃತಿರತ್ನ ವಾಗಿದೆ.

ಪರಬ್ರಹ್ಮನಿಂದ ಈ ಲೋಕಕ್ಕೆ ಬಂದ ಜೀವಾತ್ಮನು ಆ ಪರತತ್ತ್ವವನ್ನು ಹೇಗೆ ಸಾಕ್ಷಾತ್ಕರಿಸಿಕೊಂಡು ಮೋಕ್ಷವನ್ನು ಹೊಂದಬಹುದು ಎಂಬುದು ಶ್ರೀಭಾಷ್ಯದಲ್ಲಿ ವಿವರಿಸಲ್ಪಟ್ಟಿದೆ. ಇದರಲ್ಲಿ ಉಪನಿಷತ್ತುಗಳ ವ್ಯಾಖ್ಯಾನವೂ ಸಾಕಷ್ಟು ಪ್ರಮಾಣ ದಲ್ಲಿ ಬಂದಿದೆ. ಪರಬ್ರಹ್ಮನ ಪ್ರಾಪ್ತಿಗೆ ಭಕ್ತಿಯೇ ಸಾಧನ ಎಂಬ ಗ್ರಂಥದ ಶಾಸ್ತ್ರಾರ್ಥ ವೆಲ್ಲಾ ಈ ಶ್ರೀಭಾಷ್ಯದ ಆರಂಭದ ಮಂಗಳ ಶ್ಲೋಕದಲ್ಲಿಯೇ ಅಡಗಿದೆ.

"ಅಖಿಲಭುವನಜನ್ಮ ಸ್ಥೇಮ ಭಂಗಾದಿಲೀಲೇ
ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೇ ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥

(ಅಖಿಲ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರವೇ ಮೊದಲಾದುವು ಯಾವನಿಗೆ ಲೀಲೆಯಾಗಿ ವೆಯೋ, ಶರಣಾಗತರಾದ ವಿವಿಧ ಪ್ರಾಣಿ ಸಮೂಹಗಳ ರಕ್ಷಣೆಯೊಂದೇ ಯಾವನಿಗೆ ದೀಕ್ಷೆಯಾಗಿದೆಯೋ, ಶ್ರುತಿಗಳಿಗೆ ಶಿರಸ್ಸು ಎನಿಸಿದ ಉಪನಿಷತ್ತುಗಳಲ್ಲಿ ಯಾವನು ವಿಶೇಷವಾಗಿ ಪ್ರತಿಪಾದಿತನಾಗಿರುವನೋ, ಆ ಪರಬ್ರಹ್ಮನಾದ ಶ್ರೀನಿವಾಸನಲ್ಲಿ ನನಗೆ ಭಕ್ತಿರೂಪವಾದ ಜ್ಞಾನ ಉಂಟಾಗಲಿ)

ಶ್ರೀ ಭಾಷ್ಯವೆಂಬ ಗ್ರಂಥವು ಬ್ರಹ್ಮವಿಚಾರವಾದ ಶಾಸ್ತ್ರವಾದುದರಿಂದ ಇದಕ್ಕೆ

ಬ್ರಹ್ಮಮೀಮಾಂಸೆ ಎಂದೂ, ಬ್ರಹ್ಮವು ಜೀವಜಗತ್ತುಗಳನ್ನು ಶರೀರವನ್ನಾಗಿ ಹೊಂದಿರುವುದನ್ನು ಪ್ರತಿಪಾದಿಸುವುದರಿಂದ ಇದಕ್ಕೆ ಶಾರೀರಕ ಮೀಮಾಂಸಾ ಶಾಸ್ತ್ರವೆಂದೂ ಹೆಸರು ಬಂದಿದೆ. ಶರೀರವೆಂದರೆ ದೇಹವೆಂದೂ, ಶರೀರದಲ್ಲಿರುವ ಆತ್ಮನಿಗೆ ಶಾರೀರಕ ಎಂದೂ ಹೆಸರು. ಶರೀರದಲ್ಲಿರುವ ಜೀವಾತ್ಮನ ಬ್ರಹ್ಮತ್ವವನ್ನು ಕುರಿತು ವಿಚಾರಮಾಡುವುದರಿಂದ ಶಾರೀರಕ ಮೀಮಾಂಸೆ ಎಂಬ ಹೆಸರು ಬಂದಿದೆ.

ವೇದವ್ಯಾಸರ ಶಿಷ್ಯರಾದ ಜೈಮಿನಿಯು 16 ಅಧ್ಯಾಯಗಳುಳ್ಳ ಕರ್ಮಕಾಂಡ ಅಥವಾ ಪೂರ್ವ ಮೀಮಾಂಸಾ ಶಾಸ್ತ್ರವನ್ನು ರಚಿಸಿದರು. ಇದರಲ್ಲಿ ಮೊದಲ 12 ಅಧ್ಯಾಯಗಳಲ್ಲಿ ಕರ್ಮಗಳನ್ನೂ, ಉಳಿದ 4 ಅಧ್ಯಾಯಗಳಲ್ಲಿ ಕರ್ಮಾರಾಧ್ಯರಾದ ದೇವತೆಗಳ ಬಗ್ಗೆಯೂ ವಿವರಿಸಿದ್ದಾರೆ. ಆಮೇಲೆ ವ್ಯಾಸರು 4 ಅಧ್ಯಾಯಗಳಲ್ಲಿ ಈ ಕರ್ಮಾರಾಧ್ಯರಾದ ದೇವತೆಗಳಿಗೆ ಅಂತರಾತ್ಮನಾಗಿರುವ ಬ್ರಹ್ಮವನ್ನು ವಿಚಾರಿಸಿ ನಿಷ್ಕರ್ಷೆಮಾಡಿ, ಉತ್ತರ ಮೀಮಾಂಸಾ ಶಾಸ್ತ್ರವನ್ನು ರಚಿಸಿದ್ದಾರೆ. ಹೀಗೆ ಜೈಮಿನಿಯ 16, ವ್ಯಾಸರ 4 ಸೇರಿ 20 ಅಧ್ಯಾಯಗಳುಳ್ಳ ಮೀಮಾಂಸಾಶಾಸ್ತ್ರವಾಗಿದೆ. ಪೂರ್ವ ಮೀಮಾಂಸೆಯು ಕರ್ಮವನ್ನು ಕುರಿತು ವಿಚಾರಮಾಡುತ್ತದೆ. ಅಂದರೆ ವೇದಗಳ ಪೂರ್ವಭಾಗವು ಇಹಲೋಕದಲ್ಲಿ ಅನುಭವಿಸಲ್ಪಡುವ ಹಾಗೂ ಊರ್ಧ್ವ ಲೋಕಗಳಲ್ಲಿ ಸಿಗುವ ನಶ್ವರ, ಅಲ್ಪ ಆದ ಫಲಗಳಿಗಾಗಿ ಜೀವರು ಅನುಷ್ಠಿಸಬೇಕಾದ ಸಾಧನಗಳನ್ನು ತಿಳಿಸುತ್ತದೆ ; ಉತ್ತರ ಮೀಮಾಂಸೆಯು ಬ್ರಹ್ಮವನ್ನು ಕುರಿತು ವಿಚಾರಮಾಡುತ್ತದೆ. ಅಂದರೆ ವೇದಗಳ ಉತ್ತರಭಾಗವಾದ ಉಪನಿಷತ್ತು ಅತಿಶ್ರೇಷ್ಠವಾದ ಮೋಕ್ಷ ಪುರುಷಾರ್ಥವನ್ನೂ, ಅದನ್ನು ಪಡೆಯುವ ಉಪಾಯವನ್ನೂ ತೋರಿಸಿಕೊಡುತ್ತದೆ. ಹೀಗೆ ಇವೆರಡೂ ಮೀಮಾಂಸೆಗಳೂ ಸಮಸ್ತ ವೇದವನ್ನು ಕುರಿತು ವಿಚಾರಮಾಡುತ್ತವೆ. ವೇದಗಳು ತತ್ತ್ವಹಿತ ಪುರುಷಾರ್ಥಗಳನ್ನು ಯಾಥಾವತ್ತಾಗಿ ತಿಳಿಸುವ ಉತ್ತಮಶಾಸ್ತ್ರ. ಆದಕಾರಣ ಶ್ರೀಭಾಷ್ಯದಲ್ಲಿ ಉದಾಹರಿಸಿರುವ ವೃತ್ತಿಕಾರರ ಅಭಿಪ್ರಾಯದಂತೆ ಕರ್ಮ ಮೀಮಾಂಸೆ ಹಾಗೂ ಬ್ರಹ್ಮ ಮೀಮಾಂಸೆ ಎರಡೂ ಒಂದೇ ಶಾಸ್ತ್ರವಾಗಿದೆ ಎಂಬುದು ರಾಮಾನುಜರ ಖಚಿತ ಅಭಿಪ್ರಾಯ.

ಬ್ರಹ್ಮಸೂತ್ರಗಳಲ್ಲಿ 4 ಅಧ್ಯಾಯಗಳಿವೆ. ಪರಸ್ಪರ ವಿರುದ್ಧವೆಂದು ಕಂಡು ಬರುವ ಶ್ರುತಿವಾಕ್ಯಗಳಿಗೆಲ್ಲ ಸುಸಂಗತವಾದ ತಾತ್ಪರ್ಯವನ್ನು ಕೊಡುವ ಉದ್ದೇಶವಿರುವ ಸಮನ್ವಯಾಧ್ಯಾಯವು ಮೊದಲನೆಯದು ; ಮೊದಲನೆಯ ಅಧ್ಯಾಯದಲ್ಲಿ ಪ್ರತಿಪಾದಿಸಿದ ವಿಷಯಗಳು ಇತರ ಪಕ್ಷಗಳಿಗೆ ವಿರುದ್ಧವಲ್ಲ ಎಂದು ತಿಳಿಸುವ ಅವಿರೋಧಾಧ್ಯಾಯವು ಎರಡನೆಯದು ; ಬ್ರಹ್ಮದರ್ಶನಕ್ಕೆ ಅವಶ್ಯವಾದ ಸಾಧನ–ಉಪಾಯಗಳನ್ನು ಪ್ರತಿಪಾದಿಸುವ ಸಾಧನಾಧ್ಯಾಯವು ಮೂರನೆಯದು ; ಬ್ರಹ್ಮವಿದ್ಯೆಯ ಫಲವನ್ನು ಕುರಿತು ವಿಚಾರಮಾಡುವ ಫಲಾಧ್ಯಾಯವು ನಾಲ್ಕನೆಯದು. ಈ ಒಂದೊಂದು ಅಧ್ಯಾಯವೂ ನಾಲ್ಕುನಾಲ್ಕು ಪಾದಗಳಿಂದ ಕೂಡಿದೆ. ಒಂದೊಂದು

ಪಾದಕ್ಕೂ ವಿಷಯಕ್ಕನುಗುಣವಾಗಿ ಸೂತ್ರಗಳನ್ನೊಳಗೊಂಡ ಅಧಿಕರಣಗಳಿವೆ. ಪ್ರತಿಯೊಂದು ಅಧಿಕರಣವೂ ಒಂದೊಂದು ವಿಷಯ ಅಥವಾ ಭಗವದ್ಗುಣವನ್ನೊಳಗೊಂಡು ಅದಕ್ಕೆ ವಿರೋಧವಾಗಿರುವುದನ್ನು ನಿರಾಕರಿಸುತ್ತದೆ.

ಭಗವದ್ಗುಣಾನುಭವ ಪ್ರಧಾನವಾಗಿರುವ ಶ್ರೀ ಭಾಷ್ಯದಲ್ಲಿ ಒಟ್ಟು 16 ಪಾದಗಳಿದ್ದು, ಪ್ರತಿಯೊಂದು ಪಾದದಲ್ಲೂ ಒಂದೊಂದು ವಿಷಯ ಅಥವಾ ಭಗವದ್ಗುಣವು ಹೇಳಲ್ಪಟ್ಟಿವೆ. ಅವು :–

೧ನೇ ಪಾದ (ಸ್ರಷ್ಟಾ) ಸಕಲ ಪ್ರಪಂಚವನ್ನೂ ಸೃಷ್ಟಿಸುವವನು ಪರಬ್ರಹ್ಮನು.

೨ನೇ ಪಾದ (ದೇಹೀ) ಆತನು ಈ ವಿಶ್ವವನ್ನೇ ಶರೀರವಾಗಿ ಹೊಂದಿದ್ದಾನೆ.

೩ನೇ ಪಾದ (ಸ್ವನಿಷ್ಠಃ) ಸಂಸಾರಿ, ಮುಕ್ತ, ನಿತ್ಯ ಎಂಬ ಮೂರು ವಿಧವಾದ ಆತ್ಮಗಳನ್ನು ಧರಿಸಿರುವ ಅನನ್ಯಾಧಾರನು.

೪ನೇ ಪಾದ (ನಿರವಧಿಮಹಿಮಾ) ಅವನು ಎಲ್ಲೆಯಿಲ್ಲದ ಮಹಿಮೆಯುಳ್ಳವನು. ಹೀಗೆ ಮೊದಲನೆಯ ಅಧ್ಯಾಯದಲ್ಲಿ ಸಮಸ್ತಸೂಕ್ಷ್ಮ ಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೇ ಜಗತ್ಕಾರಣನು ಎಂಬ ವಿಷಯವು ನಿರ್ಧರಿಸಲ್ಪಟ್ಟಿದೆ.

೫ನೇ ಪಾದ (ಅಪಾಸ್ತಬಾಧಃ) ಜಗತ್ಕಾರಣನಾದ ಅವನು ಯಾರಿಂದಲೂ ಬಾಧಿಸಲ್ಪಡದವನು.

೬ನೇ ಪಾದ (ಆಶ್ರಿತಾಪ್ತಃ) ಆತನು ಆಶ್ರಿತರಾದವರಿಗೆ ಆಪ್ತನು.

೭ನೇ ಪಾದ (ಖಾತ್ಮಾದೇ ಉಚಿತ ಜನಕೃತ್) ಆತನು ಪಂಚಭೂತಗಳಿಗೆ ಹಾಗೂ ಜೀವಾತ್ಮರ ಸ್ವರೂಪಸ್ವಭಾವಗಳ ವಿಕಾರಕ್ಕೆ ಕಾರಣನಾದವನು.

೮ನೇ ಪಾದ (ಇಂದ್ರಿಯಾದೇಃ ಉಚಿತ ಜನಕೃತ್) ಆತನು ಇಂದ್ರಿಯಗಳಿಗೆ ಕಾರಣನಾದವನು.

ಪರಬ್ರಹ್ಮ ನಿರ್ಧಾರಣ ವಿಷಯದಲ್ಲಿ ಇತರ ಮತಗಳಲ್ಲಿರುವ ಶಾಸ್ತ್ರಗಳೆಲ್ಲ ಅಸಮಂಜಸ ಹಾಗೂ ಅನಾದರಣೀಯ ಆಗಿವೆ ಎಂಬುದು ಎರಡನೆಯ ಅಧ್ಯಾಯದಲ್ಲಿ ಚರ್ಚಿಸಿ, ಸಿದ್ಧಾಂತ ಮಾಡಲ್ಪಟ್ಟಿವೆ.

೯ನೇ ಪಾದ (ಸಂಸೃತೌತಂತ್ರವಾಹೀ) ಆತನು ಈ ಸಂಸಾರವನ್ನು ನಡೆಸಲು ಅವಶ್ಯವಾದ ಸಂಕಲ್ಪವುಳ್ಳವನು.

೧೦ನೇ ಪಾದ (ನಿರ್ದೋಷತ್ವಾದಿರಮ್ಯಃ) ಚೇತನ–ಅಚೇತನಗಳಲ್ಲೆಲ್ಲ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷ ಅಂಟದಿರುವವನು.

೧೧ನೇ ಪಾದ (ಬಹುಭಜನಪದಂ) ಹಲವು ವಿಧವಾದ ಧ್ಯಾನ–ಉಪಾಸನೆಗಳಿಗೆ ವಿಷಯ-ಲಕ್ಷ್ಯ ಆಗಿರುವವನು.

೧೨ನೇ ಪಾದ (ಸ್ವಾರ್ಹಕರ್ಮಪ್ರಸಾದ್ಯಃ) ವರ್ಣಾಶ್ರಮ ಧರ್ಮಗಳ ಅನುಷ್ಠಾನದಿಂದ ಆತನು ಸಂತೋಷಗೊಳ್ಳುವವನು.

ಮೂರನೆಯ ಅಧ್ಯಾಯದಲ್ಲಿ ಉಪಾಯ ಸ್ವರೂಪವಾದ ಉಪಾಸನೆ ಅಥವಾ ಭಕ್ತಿಯ ವಿಷಯವು ಸಿದ್ಧಾಂತ ಮಾಡಲ್ಪಟ್ಟಿದೆ.

೧೩ನೇ ಪಾದ (ಪಾಪಚ್ಛಿತ್) ಉಪಾಸಿಸುವ ಚೇತನರಲ್ಲಿ ಇರುವ ಪುಣ್ಯಪಾಪಗಳೆಂದು ಕರೆಯುವ ಸಕಲ ವಿಧವಾದ ಕರ್ಮಗಳನ್ನೂ ನಾಶಮಾಡುವ ದೃಢಸಂಕಲ್ಪವುಳ್ಳವನು.

೧೪ನೇ ಪಾದ (ಬ್ರಹ್ಮನಾಡೀಗತಿಕೃತ್) ಮೋಕ್ಷಮಾರ್ಗಕ್ಕೆ ಮುಖ್ಯದ್ವಾರವಾದ ಬ್ರಹ್ಮ ನಾಡಿಯಲ್ಲಿ ಜೀವನು ಪ್ರವೇಶಿಸುವಂತೆ ಮಾಡಬಲ್ಲವನು.

೧೫ನೇ ಪಾದ (ಅತಿವಹನ್) ಜೀವನನ್ನು ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ ಅಲ್ಲಿ ತನ್ನನ್ನು ಅನುಭವಿಸುವಂತೆ ಮಾಡಬಲ್ಲವನು.

೧೬ನೇ ಪಾದ (ಸಾಮ್ಯದಃ) ಮುಕ್ತರಿಗೆ ಆತ್ಮಸಾಮ್ಯದೊಂದಿಗೆ ತನ್ನ ಸಕಲಾನಂದ ವನ್ನೂ ನೀಡುವವನು.

ನಾಲ್ಕನೆಯ ಅಧ್ಯಾಯದಲ್ಲಿ ಮೋಕ್ಷ ಸ್ವರೂಪ ಹಾಗೂ ಮೋಕ್ಷಾನುಭವ ವಿಷಯವು ಹೇಳಲ್ಪಟ್ಟಿದೆ.

ಈ ಶಾರೀರಕ ಮೀಮಾಂಸಾ ಶಾಸ್ತ್ರದ ೧೬ ಪಾದಗಳಲ್ಲಿ ಇರುವ ೧೬ ಗುಣ ಗಳನ್ನು ಸುಲಭವಾಗಿ ನೆನಪಿನಲ್ಲಿಡಲು ನಿಗಮಾಂತ ಮಹಾದೇಶಿಕರ ಈ ಶ್ಲೋಕವು ಸಹಾಯ ಮಾಡುತ್ತದೆ.

"ಸ್ರಷ್ಟಾದೇಹೀ ಸ್ವನಿಷ್ಠೋ ನಿರವಧಿಮಹಿಮಾಪಾಸ್ತಬಾಧಾಶ್ರಿತಾಪ್ತಃ
ಖಾತ್ಮಾದೇರಿಂದ್ರಿಯಾದೇರುಚಿತ ಜನಕೃತ್ಸಂಸ್ಮೃತೌತಂತ್ರ ವಾಹೀ ।
ನಿರ್ದೋಷತ್ವಾದಿರಮ್ಯೋ ಬಹುಭಜನಪದಂ ಸ್ವಾರ್ಹಕರ್ಮ ಪ್ರಸಾದ್ಯಃ
ಪಾಪಚ್ಛಿದ್ಬ್ರಹ್ಮನಾಡೀಗತಿ ಕೃದತಿವಹನ್ಸಾಮ್ಯದಶ್ಚಾತ್ರವೇದ್ಯಃ ॥

ಎರಡನೆ ರಾಮಮಿಶ್ರರ ಶ್ರೀಭಾಷ್ಯ ವಿವರಣ, ವಾತ್ಸ್ಯವರದಾಚಾರ್ಯರ ತತ್ತ್ವಸಾರ, ಸುದರ್ಶನ ಸೂರಿಗಳ ಶ್ರುತಪ್ರಕಾಶಿಕೆ, ವೇದಾಂತ ದೇಶಿಕರ ತತ್ತ್ವಟೀಕೆ, ಮೇಘನಾದಾರಿ ಸೂರಿಗಳ ನಯಪ್ರಕಾಶಿಕೆ, ವೀರರಾಘವದಾಸರ ತಾತ್ಪರ್ಯ ದೀಪಿಕೆ, ಪರಕಾಲ ಸ್ವಾಮಿಗಳ ಗೂಢಾರ್ಥ ಸಂಗ್ರಹ, ಇವೆಲ್ಲವೂ ರಾಮಾನುಜರ ಶ್ರೀಭಾಷ್ಯ ಗ್ರಂಥದ ಅರ್ಥಗಳನ್ನು ವಿವರಿಸುವ ಸಲುವಾಗಿ ಬೇರೆ ಬೇರೆ ಕಾಲಗಳಲ್ಲಿ ರಚಿಸಲ್ಪಟ್ಟ ಕೃತಿಗಳು.

ಶ್ರೀಭಾಷ್ಯದ ಬಗ್ಗೆ ಕೆಲವು ಅಭಿಪ್ರಾಯಗಳು ಹೀಗಿವೆ:–

ಆಕರ್ಷಣಾನಿ ನಿಗಮಾಂತ ಸರಸ್ವತೀನಾಂ
ಉಚ್ಚಾಟನಾನಿ ಬಹಿರಂತರುಪಪ್ಲವಾನಾಂ ।
ಪಥ್ಯಾನಿ ಘೋರಭವಸಂಜ್ವರ ಪೀಡಿತಾನಾಂ
ಹೃದ್ಯಾನಿಭಾಂತಿ ಯತಿರಾಜ ಮುನೇರ್ವಚಾಂಸಿ ॥

–ವೇದಾಂತ ದೇಶಿಕ

I feel bound to say that Ramanuja is on many points the more faithful interpreter of vedanta sutras.

*—Max Muller*

Ramanuja with his Sariri–Sarira Bhava of god and World, a most Practical Philosophy, a great appeal to the emotions, an entire denial of birthrights before spiritual attainments and its appeal through the Popular tongue, completely succeeded in bringing the masses back to the Vedic Religion.

*—Swami Vivekananda*

Ramanuja is the greatest exponent of Hindu Theism and the greatest philosopher of Bhakthi. His analogy of self body relationship between God and the universe, is the best way. Ramanuja's doctrine is the heart of vedanta and a clear expression of the real concerns of the Brahma Sutras.

*—Ninian Smart*

ಶೈಲಿ ಸರಳ, ವಿಷಯ ಪ್ರತಿಪಾದನೆ ರಮ್ಯ, ಮಹತ್ತ್ವದ ವಿಷಯವನ್ನು ಪರಿಮಿತ ಮಾತುಗಳಿಂದ ನೇರವಾಗಿ ಮನಮುಟ್ಟುವಂತೆ ತಿಳಿಸುವ ವಿಧಾನ ಅಪೂರ್ವ, ಪ್ರಮಾಣ-ಸೂಕ್ತಿಗಳ ಉಲ್ಲೇಖ ವಿಸ್ತಾರ, ತಾರ್ಕಿಕರನ್ನೂ ಬೆರಗುಗೊಳಿಸುವ ಯುಕ್ತಿಗಳಿಂದ ವಿಷಯಗಳ ದಕ್ಷ ಸಮರ್ಥನೆ, ಯಾವ ಸಂದರ್ಭದಲ್ಲಿಯೂ ಉದ್ವೇಗಕರ ಮಾತುಗಳನ್ನು ಬಳಸದಿರುವಿಕೆ – ಇವು ರಾಮಾನುಜರ ಶ್ರೀಭಾಷ್ಯದಲ್ಲಿರುವ ಮುಖ್ಯಾಂಶಗಳು.

–ಎನ್. ಟಿ. ಶ್ರೀನಿವಾಸಯ್ಯಂಗಾರ್


ಮೀಮಾಂಸಾ ಶಾಸ್ತ್ರ
ಜೈಮಿನಿ
ವ್ಯಾಸ
ಕರ್ಮಕಾಂಡ
ಪೂರ್ವಮೀಮಾಂಸೆ
೧೨ ಅಧ್ಯಾಯಗಳು
ದೇವತಾಕಾಂಡ
೪ ಅಧ್ಯಾಯಗಳು
ಬ್ರಹ್ಮಕಾಂಡ
ಉತ್ತರ ಮೀಮಾಂಸೆ
೪ ಅಧ್ಯಾಯಗಳು


ಉತ್ತರ ಮೀಮಾಂಸೆ
(ಶಾರೀರಕ ಶಾಸ್ತ್ರ)
ವಿಷಯ
(ಸಿದ್ಧದ್ವಿಕಂ)
ವಿಷಯಿ
(ಸಾಧ್ಯದ್ವಿಕಂ)
ಸಮನ್ವಯಾಧ್ಯಾಯ
ಅವಿರೋಧಾಧ್ಯಾಯ
ಸಾಧನಾಧ್ಯಾಯ
ಫಲಾಧ್ಯಾಯ

## ಬ್ರಹ್ಮಸೂತ್ರಗಳು

| ಅಧ್ಯಾಯ | ಪಾದ | ವಿಷಯ | ಅಧಿಕರಣ | ಸೂತ್ರ |
|---|---|---|---|---|
| 1 | ೧. | ಅಸ್ಪಷ್ಟತರ ಜೀವ | 11 | 32 |
| ,, | ೨. | ಅಸ್ಪಷ್ಟ ಜೀವ | 6 | 33 |
| ,, | ೩. | ಸ್ಪಷ್ಟ ಜೀವ | 10 | 44 |
| ,, | ೪. | ಸ್ಪಷ್ಟತರ ಜೀವ | 8 | 29 |
| 2 | ೫. | ಸ್ಮೃತಿ | 10 | 36 |
| ,, | ೬. | ತರ್ಕ | 8 | 42 |
| ,, | ೭. | ವಿಯತ್ | 7 | 52 |
| ,, | ೮. | ಪ್ರಾಣ | 8 | 19 |
| 3 | ೯. | ಜೀವದೋಷ (ವೈರಾಗ್ಯ) | 6 | 27 |
| ,, | ೧೦. | ಉಭಯಲಿಂಗ | 8 | 40 |
| ,, | ೧೧. | ಗುಣೋಪಸಂಹಾರ | 26 | 64 |
| ,, | ೧೨. | ಪುರುಷಾರ್ಥ (ಅಂಗ) | 15 | 51 |
| 4 | ೧೩. | ಆವೃತ್ತಿ (ಉಪಾಸನೆ) | 11 | 19 |
| ,, | ೧೪. | ಉತ್ಕ್ರಾಂತಿ | 11 | 20 |
| ,, | ೧೫. | ಅರ್ಚಿರಾದಿ (ಗತಿ) | 5 | 15 |
| ,, | ೧೬. | ಮುಕ್ತಿ | 5 | 22 |
| 4 | 16 | | 156 | 545 |

# ಬ್ರಹ್ಮಸೂತ್ರಗಳು

## ಒಂದನೆಯ ಅಧ್ಯಾಯ

### ಪಾದ ಒಂದು

1 ಜಿಜ್ಞಾಸಾಧಿಕರಣ

೧. ಅಥಾತೋ ಬ್ರಹ್ಮ ಜಿಜ್ಞಾಸಾ

2 ಜನ್ಮಾದ್ಯಧಿಕರಣ

೨. ಜನ್ಮಾದ್ಯಸ್ಯಯತಃ

3 ಶಾಸ್ತ್ರಯೋನಿತ್ವಾಧಿಕರಣ

೩. ಶಾಸ್ತ್ರಯೋನಿತ್ವಾತ್

4 ಸಮನ್ವಯಾಧಿಕರಣ

೪. ತತ್ತು ಸಮನ್ವಯಾತ್

5 ಈಕ್ಷತ್ಯಧಿಕರಣ

೫. ಈಕ್ಷತೇರ್ನಾಶಬ್ದಾತ್
೬. ಗೌಣಶ್ಚೇನ್ನಾತ್ಮ ಶಬ್ದಾತ್
೭. ತನ್ನಿಷ್ಠಸ್ಯ ಮೋಕ್ಷೋಪದೇಶಾತ್
೮. ಹೇಯತ್ವಾವಚನಾಚ್ಚ
೯. ಪ್ರತಿಜ್ಞಾವಿರೋಧಾತ್
೧೦. ಸ್ವಾಪ್ಯಯಾತ್
೧೧. ಗತಿಸಾಮಾನ್ಯಾತ್
೧೨. ಶ್ರುತತ್ವಾಚ್ಚ

6 ಆನಂದಮಯಾಧಿಕರಣ

೧೩. ಆನಂದಮಯೋಽಭ್ಯಾಸಾತ್
೧೪. ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್
೧೫. ತದ್ಧೇತು ವ್ಯಪದೇಶಾಚ್ಚ
೧೬. ಮಾಂತ್ರವರ್ಣಿಕಮೇವ ಚ ಗೀಯತೇ

೩೪. ವಿವಕ್ಷಿತ ಗುಣೋಪಪತ್ತೇಶ್ಚ
೩೫. ಅನುಪಪತ್ತೇಸ್ತುನ ಶಾರೀರಃ
೩೬. ಕರ್ಮಕರ್ತೃ ವ್ಯಪದೇಶಾಚ್ಚ
೩೭. ಶಬ್ದ ವಿಶೇಷಾತ್
೩೮. ಸ್ಮೃತೇಶ್ಚ
೩೯. ಅರ್ಭಕೌಕ ಸ್ತ್ವಾತ್ತದ್ವ್ಯಪದೇಶಾಚ್ಚ
ನೇತಿಚೇನ್ನನಿಚಾಯ್ಯತ್ವಾದೇವಂವ್ಯೋಮವಚ್ಚ
೪೦. ಸಂಭೋಗ ಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್

**13 ಅತ್ರಧಿಕರಣ**

೪೧. ಅತ್ತಾಚರಾಚರಗ್ರಹಣಾತ್
೪೨. ಪ್ರಕರಣಾಚ್ಚ
೪೩. ಗುಹಾಂಪ್ರವಿಷ್ಟೌ ಆತ್ಮಾನೌಹಿತದ್ದರ್ಶನಾತ್
೪೪. ವಿಶೇಷಣಾಚ್ಚ

**14 ಅಂತರಾಧಿಕರಣ**

೪೫. ಅಂತರ ಉಪಪತ್ತೇಃ
೪೬. ಸ್ಥಾನಾದಿ ವ್ಯಪದೇಶಾಚ್ಚ
೪೭. ಸುಖವಿಶಿಷ್ಟಾಭಿಧಾನಾದೇವಚ
೪೮. ಅತಏವಚಸಬ್ರಹ್ಮ
೪೯. ಶ್ರುತೋಪನಿಷತ್ಕಗತ್ಯಭಿಧಾನಾಚ್ಚ
೫೦. ಅನವಸ್ಥಿತೇರಸಂಭವಾಚ್ಚನೇತರಃ

**15 ಅಂತರ್ಯಾಮ್ಯಧಿಕರಣ**

೫೧. ಅಂತರ್ಯಾಮ್ಯಧಿದೈವಾಧಿ ಲೋಕಾದಿಷು
ತದ್ಧರ್ಮವ್ಯಪದೇಶಾತ್
೫೨. ನಚಸ್ಮಾರ್ತಮತದ್ಧರ್ಮಾಭಿಲಾಪಾಚ್ಛಾರೀರಶ್ಚ
೫೩. ಉಭಯೋಽಪಿಹಿ ಭೇದೇನೈನಮಧೀಯತೇ

**16 ಅದೃಶ್ಯತ್ವಾಧಿಕರಣ**

೫೪. ಅದೃಶ್ಯತ್ವಾದಿ ಗುಣಕೋಧರ್ಮೋಕ್ತೇಃ
೫೫. ವಿಶೇಷಣ ಭೇದವ್ಯಪದೇಶಾಭ್ಯಾಂ ಚನೇತರೌ
೫೬. ರೂಪೋಪನ್ಯಾಸಾಚ್ಚ

## 17 ವೈಶ್ವಾನರಾಧಿಕರಣ

೫೭. ವೈಶ್ವಾನರಸ್ಸಾಧಾರಣ ಶಬ್ದ ವಿಶೇಷಾತ್
೫೮. ಸ್ಮರ್ಯಮಾಣ ಮನುಮಾನಂಸ್ಯಾದಿತಿ
೫೯. ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾಚ್ಚನೇತಿಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ಪುರುಷಮಪಿಚೈನ ಮಧೀಯತೇ
೬೦. ಅತಏವ ನದೇವತಾ ಭೂತಂಚ
೬೧. ಸಾಕ್ಷಾದಪ್ಯ ವಿರೋಧಂ ಜೈಮಿನಿಃ
೬೨. ಅಭಿವ್ಯಕ್ತೇರಿತ್ಯಾತ್ಮರಥ್ಯಃ
೬೩. ಅನುಸ್ಮೃತೇರ್ಬಾದರಿಃ
೬೪. ಸಂಪತ್ತೇರಿತಿ ಜೈಮಿನಿ ಸ್ತಥಾಹಿ ದರ್ಶಯತಿ
೬೫. ಆಮನಂತಿಚೈನಮಸ್ಮಿನ್

# ಪಾದ ಮೂರು

## 18 ದ್ಯುಭ್ವಾದ್ಯಧಿಕರಣ

೬೬. ದ್ಯುಭ್ವಾದ್ಯಾಯತನಂ ಸ್ವಶಬ್ದಾತ್
೬೭. ಮುಕ್ತೋಪಸೃಪ್ಯವ್ಯಪದೇಶಾಚ್ಚ
೬೮. ನಾನು ಮಾನಮತಚ್ಛಬ್ದಾತ್ಪ್ರಾಣಭೃಚ್ಚ
೬೯. ಭೇದವ್ಯಪದೇಶಾಚ್ಚ
೭೦. ಪ್ರಕರಣಾತ್
೭೧. ಸ್ಥಿತ್ಯದನಾಭ್ಯಾಂಚ

## 19 ಭೂಮಾಧಿಕರಣ

೭೨. ಭೂಮಾ ಸಂಪ್ರಸಾದಾದಧ್ಯುಪದೇಶಾತ್
೭೩. ಧರ್ಮೋಪಪತ್ತೇಶ್ಚ

## 20 ಅಕ್ಷರಾಧಿಕರಣ

೭೪. ಅಕ್ಷರಮಂಬರಾಂತಧೃತೇಃ
೭೫. ಸಾಚಪ್ರಶಾಸನಾತ್
೭೬. ಅನ್ಯಭಾವವ್ಯಾವೃತ್ತೇಶ್ಚ

## 21 ಈಕ್ಷತಿ ಕರ್ಮಾಧಿಕರಣ

೭೭. ಈಕ್ಷತಿ ಕರ್ಮವ್ಯಪದೇಶಾತ್ಸಃ

## 22 ದಹರಾಧಿಕರಣ

೭೮. ದಹರ ಉತ್ತರೇಭ್ಯಃ
೭೯. ಗತಿಶಬ್ದಾಭ್ಯಾಂತಥಾಹಿದೃಷ್ಟಂಲಿಂಗಂಚ
೮೦. ಧೃತೇಶ್ಚಮಹಿಮ್ನೋಸ್ಯಾಸ್ಮಿನ್ನುಪಲಬ್ಧೇಃ
೮೧. ಪ್ರಸಿದ್ಧೇಶ್ಚ
೮೨. ಇತರಪರಾಮರ್ಶಾತ್ಸ ಇತಿಚೇನ್ನಾಸಂಭವಾತ್
೮೩. ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು
೮೪. ಅನ್ಯಾರ್ಥಶ್ಚ ಪರಾಮರ್ಶಃ
೮೫. ಅಲ್ಪ ಶ್ರುತೇರಿತಿಚೇತ್ತದುಕ್ತಮ್
೮೬. ಅನುಕೃತೇಸ್ತಸ್ಯಚ
೮೭. ಅಪಿಸ್ಮರ್ಯತೇ

## 23 ಪ್ರಮಿತಾಧಿಕರಣ

೮೮. ಶಬ್ದಾದೇವ ಪ್ರಮಿತಃ
೮೯. ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್

## 24 ದೇವತಾಧಿಕರಣ

೯೦. ತದುಪರ್ಯಪಿ ಬಾದರಾಯಣಸ್ಸಂಭವಾತ್
೯೧. ವಿರೋಧಃಕರ್ಮಣೀತಿಚೇನ್ನಾನೇಕ
ಪ್ರತಿಪತ್ತೇರ್ದರ್ಶನಾತ್
೯೨. ಶಬ್ದ ಇತಿ ಚೇನ್ನಾತಃ ಪ್ರಭವಾತ್
ಪ್ರತ್ಯಕ್ಷಾನುಮಾನಾಭ್ಯಾಂ
೯೩. ಅತ ಏವಚ ನಿತ್ಯತ್ವಮ್
೯೪. ಸಮಾನ ನಾಮರೂಪತ್ವಾಚ್ಚಾವೃತ್ತಾವಪ್ಯ
ವಿರೋಧೋದರ್ಶನಾತ್ಸ್ಮೃತೇಶ್ಚ

## 25 ಮಧ್ವಧಿಕರಣ

೯೫. ಮಧ್ವಾದಿಷ್ವ ಸಂಭವಾದನಧಿಕಾರಂಜೈಮಿನಿಃ
೯೬. ಜ್ಯೋತಿಷಿ ಭಾವಾಚ್ಚ
೯೭. ಭಾವಂತುಬಾದರಾಯಣೋಽಸ್ತಿಹಿ

## 26 ಅಪಶೂದ್ರಾಧಿಕರಣ

೯೮. ಶುಗಸ್ಯತದನಾದರಶ್ರವಣಾತ್

ತದಾದ್ರವಣಾತ್ತೂಸ್ಸೂಚ್ಯತೇಹಿ

೯೯. ಕ್ಷತ್ರಿಯತ್ವಗತೇಶ್ಚ

೧೦೦. ಉತ್ತರತ್ರ ಚೈತ್ರ ರಥೇನಲಿಂಗಾತ್

೧೦೧. ಸಂಸ್ಕಾರ ಪರಾಮರ್ಶಾತ್ ತದಭಾವಾಭಿಲಾಪಾಚ್ಚ

೧೦೨. ತದಭಾವನಿರ್ಧಾರಣೇಚಪ್ರವೃತ್ತೇಃ

೧೦೩. ಶ್ರವಣಾಧ್ಯಯನಾರ್ಥಪ್ರತಿಷೇಧಾತ್

೧೦೪. ಸ್ಮೃತೇಶ್ಚ

೧೦೫. ಕಂಪನಾತ್

೧೦೬. ಜ್ಯೋತಿರ್ದರ್ಶನಾತ್

## 27 ಅರ್ಥಾಂತರತ್ವಾದಿವ್ಯಪದೇಶಾಧಿಕರಣ

೧೦೭. ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್

೧೦೮. ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ

೧೦೯. ಪತ್ಯಾದಿಶಬ್ದೇಭ್ಯಃ

# ಪಾದ ನಾಲ್ಕು

## 28 ಅನುಮಾನಿಕಾಧಿಕರಣ

೧೧೦. ಅನುಮಾನಿಕಮಪ್ಯೇಕೇಷಾಮಿತಿಚೇನ್ನ
ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿಚ

೧೧೧. ಸೂಕ್ಷ್ಮಂತು ತದರ್ಹತ್ವಾತ್

೧೧೨. ತದಧೀನತ್ವಾದರ್ಥವತ್

೧೧೩. ಜ್ಞೇಯತ್ವಾವಚನಾಚ್ಚ

೧೧೪. ವದತೀತಿಚೇನ್ನ ಪ್ರಾಜ್ಞೋಹಿ ಪ್ರಕರಣಾತ್

೧೧೫. ತ್ರಯಾಣಾಮೇವಚೈವಮುಪನ್ಯಾಸಃಪ್ರಶ್ನಶ್ಚ

೧೧೬. ಮಹದ್ವಚ್ಚ

## 29 ಚಮಸಾಧಿಕರಣ

೧೧೭. ಚಮಸವದವಿಶೇಷಾತ್

೧೧೮. ಜ್ಯೋತಿರುಪಕ್ರಮಾತು ತಥಾಹ್ಯಧೀಯತ ಏಕೇ

೧೧೯. ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ

## 30 ಸಂಖ್ಯೋಪಸಂಗ್ರಹಾಧಿಕರಣ

೧೨೦. ನಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ

## ಎರಡನೆಯ ಅಧ್ಯಾಯ

**ಪಾದ ಒಂದು**

ನಾನ್ಯಸ್ಮೃತ್ಯನವಕಾಶದೋಷ ಪ್ರಸಂಗಾತ್
೧೪೦. ಇತರೇಷಾಂಚಾನುಪಲಬ್ಧೇಃ

## 37 ಯೋಗ ಪ್ರತ್ಯುಕ್ತ್ಯಧಿಕರಣ

೧೪೧. ಏತೇನಯೋಗಃ ಪ್ರತ್ಯುಕ್ತಃ

## 38 ನವಿಲಕ್ಷಣತ್ವಾಧಿಕರಣ

೧೪೨. ನವಿಲಕ್ಷಣತ್ವಾದಸ್ಯತಥಾತ್ವಂ ಚಶಬ್ದಾತ್
೧೪೩. ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ
೧೪೪. ದೃಶ್ಯತೇತು
೧೪೫. ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್
೧೪೬. ಅಪೀತೌ ತದ್ವತ್ಪ್ರಸಂಗಾದಸಮಂಜಸಂ
೧೪೭. ನತುದೃಷ್ಟಾಂತಭಾವಾತ್
೧೪೮. ಸ್ವಪಕ್ಷದೋಷಾಚ್ಚ
೧೪೯. ತರ್ಕಾಪ್ರತಿಷ್ಠಾನಾದಪಿ
೧೫೦. ಅನ್ಯಥಾನುಮೇಯ ಮಿತಿಚೇದೇವ
ಮಪ್ಯ ನಿರ್ಮೋಕ್ಷ ಪ್ರಸಂಗಃ

## 39 ಶಿಷ್ಟಾಪರಿಗ್ರಹಾಧಿಕರಣ

೧೫೧. ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ

## 40 ಭೋಕ್ತ್ರಾಪತ್ತ್ಯಧಿಕರಣ

೧೫೨. ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್

## 41 ಆರಂಭಣಾಧಿಕರಣ

೧೫೩. ತದನನ್ಯತ್ವಮಾರಂಭಣಶಬ್ದಾದಿಭ್ಯಃ
೧೫೪. ಭಾವೇಚೋಪಲಬ್ಧೇಃ
೧೫೫. ಸತ್ವಾಚ್ಚಾಪರಸ್ಯ
೧೫೬. ಅಸದ್ವ್ಯಪದೇಶಾನ್ನೇತಿಚೇನ್ನ ಧರ್ಮಾಂತರೇಣ
ವಾಕ್ಯ ಶೇಷಾದ್ಯುಕ್ತೇಃಶ್ಶಬ್ದಾಂತರಾಚ್ಚ
೧೫೭. ಪಟವಚ್ಚ
೧೫೮. ಯಥಾಚಪ್ರಾಣಾದಿಃ

## 42 ಇತರ ವ್ಯಪದೇಶಾಧಿಕರಣ

೧೫೯. ಇತರ ವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ

೧೬೦. ಅಧಿಕಂತು ಭೇದ ನಿರ್ದೇಶಾತ್

೧೬೧. ಅಶ್ಮಾದಿವಚ್ಚ ತದನುಪಪತ್ತಿಃ

**43 ಉಪಸಂಹಾರದರ್ಶನಾಧಿಕರಣ**

೧೬೨. ಉಪಸಂಹಾರದರ್ಶನಾನ್ನೇತಿಚೇನ್ನ ಕ್ಷೀರವದ್ಧಿ

೧೬೩. ದೇವಾದಿವದಪಿಲೋಕೇ

**44 ಕೃತ್ಸ್ನಪ್ರಸಕ್ತ್ಯಧಿಕರಣ**

೧೬೪. ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋವಾ

೧೬೫. ಶ್ರುತೇಸ್ತು ಶಬ್ದಮೂಲತ್ವಾತ್

೧೬೬. ಆತ್ಮನಿಚೈವಂವಿಚಿತ್ರಾಶ್ಚಹಿ

೧೬೭. ಸ್ವಪಕ್ಷದೋಷಾಚ್ಚ

೧೬೮. ಸರ್ವೋಪೇತಾಚತದ್ದರ್ಶನಾತ್

೧೬೯. ವಿಕರಣತ್ವಾನ್ನೇತಿಚೇತ್ತದುಕ್ತಮ್

**45 ನಪ್ರಯೋಜನವತ್ತ್ವಾಧಿಕರಣ**

೧೭೦. ನಪ್ರಯೋಜನವತ್ತ್ವಾತ್

೧೭೧. ಲೋಕವತ್ತುಲೀಲಾಕೈವಲ್ಯಮ್

೧೭೨. ವೈಷಮ್ಯನೈರ್ಘೃಣ್ಯೇನಸಾಪೇಕ್ಷತ್ವಾ
ತ್ತಥಾಹಿ ದರ್ಶಯತಿ

೧೭೩. ನಕರ್ಮಾವಿಭಾಗಾದಿತಿಚೇನ್ನಾನಾದಿತ್ವಾ
ದುಪಪದ್ಯತೇಚಾಪ್ಯುಪಲಭ್ಯತೇಚ

೧೭೪. ಸರ್ವಧರ್ಮೋಪಪತ್ತೇಶ್ಚ

**ಪಾದ ಎರಡು**

**46 ರಚನಾನುಪಪತ್ತ್ಯಧಿಕರಣ**

೧೭೫. ರಚನಾನುಪಪತ್ತೇಶ್ಚ ನಾನುಮಾನಂಪ್ರವೃತ್ತೇಶ್ಚ

೧೭೬. ಪಯೋಽಂಬುವಚ್ಚೇತ್ತತ್ರಾಪಿ

೧೭೭. ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್

೧೭೮. ಅನ್ಯತ್ರಾಭಾವಾಚ್ಚನತೃಣಾದಿವತ್

೧೭೯. ಪುರುಷಾಶ್ಮವದಿತಿಚೇತ್ತಥಾಽಪಿ

೧೮೦. ಅಂಗಿತ್ವಾನುಪಪತ್ತೇಶ್ಚ

೧೮೧. ಅನ್ಯಥಾನುಮಿತೌಚಜ್ಞಶಕ್ತಿವಿಯೋಗಾತ್

೧೮೨. ಅಭ್ಯುಪಗಮೇಽಪ್ಯರ್ಥಾಭಾವಾತ್
೧೮೩. ವಿಪ್ರತಿಷೇಧಾಚ್ಚಾ ಸಮಂಜಸಮ್

## 47 ಮಹದ್ದೀರ್ಘಾಧಿಕರಣ

೧೮೪. ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್
೧೮೫. ಉಭಯಥಾಪಿ ನ ಕರ್ಮಾತಸ್ತದಭಾವಃ
೧೮೬. ಸಮವಾಯಾಭ್ಯುಪಗಮಾಚ್ಚ
ಸಾಮ್ಯಾದನವಸ್ಥಿತೇಃ
೧೮೭. ನಿತ್ಯಮೇವಚ ಭಾವಾತ್
೧೮೮. ರೂಪಾದಿಮತ್ತ್ವಾಚ್ಚ ವಿಪರ್ಯಯೋದರ್ಶನಾತ್
೧೮೯. ಉಭಯಥಾ ಚ ದೋಷಾತ್
೧೯೦. ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ

## 48 ಸಮುದಾಯಾಧಿಕರಣ

೧೯೧. ಸಮುದಾಯ ಉಭಯಹೇತುಕೇಽಪಿತದಪ್ರಾಪ್ತಿಃ
೧೯೨. ಇತರೇತರ ಪ್ರತ್ಯಯತ್ವಾದುಪಪನ್ನಮಿತಿ
ಚೇನ್ನಸಂಘಾತ ಭಾವಾನ್ನಿಮಿತ್ತತ್ವಾತ್
೧೯೩. ಉತ್ತರೋತ್ಪಾದೇಚ ಪೂರ್ವ ನಿರೋಧಾತ್
೧೯೪. ಅಸತಿಪ್ರತಿಜ್ಞೋಪರೋಧೋಯೌಗಪದ್ಯಮನ್ಯಥಾ
೧೯೫. ಪ್ರತಿಸಂಖ್ಯಾ ಪ್ರತಿಸಂಖ್ಯಾನಿರೋಧಾ ಪ್ರಾಪ್ತಿರವಿಚ್ಛೇದಾತ್
೧೯೬. ಉಭಯಥಾಚದೋಷಾತ್
೧೯೭. ಆಕಾಶೇಚಾ ವಿಶೇಷಾತ್
೧೯೮. ಅನುಸ್ಮೃತೇಶ್ಚ
೧೯೯. ನಾಸತೋಽದೃಷ್ಟತ್ವಾತ್
೨೦೦. ಉದಾಸೀನಾನಾಮಪಿಚೈವಂ ಸಿದ್ಧಿಃ

## 49 ಉಪಲಬ್ಧ್ಯಧಿಕರಣ

೨೦೧. ನಾಭಾವ ಉಪಲಬ್ಧೇಃ
೨೦೨. ವೈಧರ್ಮ್ಯಾಚ್ಚನಸ್ವಪ್ನಾದಿವತ್
೨೦೩. ನಭಾವೋಽನುಪಲಬ್ಧೇಃ

## 50 ಸರ್ವಥಾನುಪಪತ್ತ್ಯಧಿಕರಣ

೨೦೪. ಸರ್ವಥಾನುಪಪತ್ತೇಶ್ಚ

### 51 ಏಕಸ್ಮಿನ್ನಸಂಭವಾಧಿಕರಣ

೨೦೫. ನೈಕಸ್ಮಿನ್ನಸಂಭವಾತ್

೨೦೬. ಏವಂಚಾತ್ಮಾಕಾರ್ತ್ಸ್ನ್ಯಂಚ

೨೦೭. ನಚಪರ್ಯಾಯಾದಪ್ಯವಿರೋಧೋವಿಕಾರಾದಿಭ್ಯಃ

೨೦೮. ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ

### 52 ಪಶುಪತ್ಯಧಿಕರಣ

೨೦೯. ಪತ್ಯುರಸಾಮಂಜಸ್ಯಾತ್

೨೧೦. ಅಧಿಷ್ಠಾನಾನುಪಪತ್ತೇಶ್ಚ

೨೧೧, ಕರಣವಚ್ಚೇನ್ನಭೋಗಾದಿಭ್ಯಃ

೨೧೨. ಅಂತವತ್ತ್ವಮಸರ್ವಜ್ಞತಾವಾ

### 53 ಉತ್ಪತ್ತ್ಯಸಂಭವಾಧಿಕರಣ

೨೧೩. ಉತ್ಪತ್ತ್ಯಸಂಭವಾತ್

೨೧೪. ನಚಕರ್ತುಃ ಕರಣಮ್

೨೧೫. ವಿಜ್ಞಾನಾದಿ ಭಾವೇವಾತದಪ್ರತಿಷೇಧಃ

೨೧೬. ವಿಪ್ರತಿಷೇಧಾಚ್ಚ

## ಪಾದ ಮೂರು

### 54 ವಿಯದಧಿಕರಣ

೨೧೭. ನವಿಯದ ಶ್ರುತೇಃ

೨೧೮. ಅಸ್ತಿತು

೨೧೯. ಗೌಣ್ಯಸಂಭವಾಚ್ಛಬ್ದಾಚ್ಚ

೨೨೦. ಸ್ಯಾಚ್ಚೈಕಸ್ಯಬ್ರಹ್ಯಶಬ್ದವತ್

೨೨೧. ಪ್ರತಿಜ್ಞಾಹಾನಿವ್ಯತಿರೇಕಾತ್

೨೨೨. ಶಬ್ದೇಭ್ಯಃ

೨೨೩. ಯಾವದ್ವಿಕಾರಂತು ವಿಭಾಗೋಲೋಕವತ್

೨೨೪. ಏತೇನಮಾತರಿಶ್ವಾವ್ಯಾಖ್ಯಾತಃ

೨೨೫. ಅಸಂಭವಸ್ತು ಸತೋಽನುಪಪತ್ತೇಃ

### 55 ತೇಜೋಽಧಿಕರಣ

೨೨೬. ತೇಜೋಽತಸ್ತಥಾಹ್ಯಹ

೨೨೭. ಆಪಃ

೨೨೮. ಪೃಥಿವೀ
೨೨೯. ಅಧಿಕಾರರೂಪ ಶಬ್ದಾಂತರೇಭ್ಯಃ
೨೩೦. ತದಭಿಧ್ಯಾನಾದೇವತು ತಲ್ಲಿಂಗಾತ್ಸಃ
೨೩೧. ವಿಪರ್ಯಯೇಣತುಕ್ರಮೋಽತಉಪಪದ್ಯತೇಚ
೨೩೨. ಅಂತರಾವಿಜ್ಞಾನಮನಸೀಕ್ರಮೇಣ
ತಲ್ಲಿಂಗಾದಿತಿ ಚೇನ್ನಾವಿಶೇಷಾತ್
೨೩೩. ಚರಾಚರ ವ್ಯಪಾಶ್ರಯಸ್ತುಸ್ಯಾತ್ತದ್ವ್ಯಪದೇಶೋ
ಭಾಕ್ತಸ್ತದ್ಭಾವಭಾವಿತ್ವಾತ್

## 56 ಆತ್ಮಾಧಿಕರಣ

೨೩೪. ನಾತ್ಮಾಶ್ರುತೇರ್ನಿತ್ಯತ್ವಾಚ್ಚತಾಭ್ಯಃ

## 57 ಜ್ಞಾಧಿಕರಣ

೨೩೫. ಜ್ಞೋಽತಏವ
೨೩೬. ಉತ್ಕ್ರಾಂತಿಗತ್ಯಾಗತೀನಾಂ
೨೩೭. ಸ್ವಾತ್ಮನಾಚೋತ್ತರಯೋಃ
೨೩೮. ನಾಣುರತಚ್ಛ್ರುತೇರಿತಿಚೇನ್ನೇತರಾಧಿಕಾರಾತ್
೨೩೯. ಸ್ವಶಬ್ದೋನ್ಮಾನಾಭ್ಯಾಂಚ
೨೪೦. ಅವಿರೋಧಶ್ಚಂದನವತ್
೨೪೧. ಅವಸ್ಥಿತಿ ವೈಶೇಷ್ಯಾದಿತಿಚೇನ್ನಾಭ್ಯುಪಗಮಾದ್ಧೃದಿಹಿ
೨೪೨. ಗುಣಾದ್ವಾಽಲೋಕವತ್
೨೪೩. ವ್ಯತಿರೇಕೋಗಂಧವತ್ತಥಾಹಿದರ್ಶಯತಿ
೨೪೪. ಪೃಥಗುಪದೇಶಾತ್
೨೪೫. ತದ್ಗುಣಸಾರತ್ವಾತ್ತುತದ್ವ್ಯಪದೇಶಃಪ್ರಾಜ್ಞವತ್
೨೪೬. ಯಾವದಾತ್ಮಭಾವಿತ್ವಾಚ್ಚನದೋಷಸ್ತದ್ದರ್ಶನಾತ್
೨೪೭. ಪುಂಸ್ತ್ವಾದಿವತ್ತ್ವಸ್ಯಸತೋಽಭಿವ್ಯಕ್ತಿಯೋಗಾತ್
೨೪೮. ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋ
ನ್ಯತರನಿಯಮೋವಾನ್ಯಥಾ

## 58 ಕರ್ತ್ರಧಿಕರಣ

೨೪೯. ಕರ್ತಾ ಶಾಸ್ತ್ರಾರ್ಥವತ್ತ್ವಾತ್
೨೫೦. ಉಪಾದಾನಾದ್ವಿಹಾರೋಪದೇಶಾಚ್ಚ
೨೫೧. ವ್ಯಪದೇಶಾಚ್ಚಕ್ರಿಯಾಯಾಂನ

ಚೇನ್ನಿರ್ದೇಶ ವಿಪರ್ಯಯಃ
೨೫೨. ಉಪಲಬ್ಧಿವದನಿಯಮಃ
೨೫೩. ಶಕ್ತಿವಿಪರ್ಯಯಾತ್
೨೫೪. ಸಮಾಧ್ಯ ಭಾವಾಚ್ಚ
೨೫೫. ಯಥಾಚ ತಕ್ಷೋಽಭಯಥಾ

**59 ಪರಾಯತ್ತಾಧಿಕರಣ**

೨೫೬. ಪರಾತ್ತು ತಚ್ಛ್ರುತೇಃ
೨೫೭. ಕೃತಪ್ರಯತ್ನಾಪೇಕ್ಷಸ್ತುವಿಹಿತ
ಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ

**60 ಅಂಶಾಧಿಕರಣ**

೨೫೮. ಅಂಶೋನಾನಾ ವ್ಯಪದೇಶಾದನ್ಯಥಾ ಚಾಪಿ
ದಾಶಕಿತ ವಾದಿತ್ವಮಧೀಯತ ಏಕೇ
೨೫೯. ಮಂತ್ರವರ್ಣಾತ್
೨೬೦. ಅಪಿಸ್ಮರ್ಯತೇ
೨೬೧. ಪ್ರಕಾಶಾದಿವತ್ತು ನೈವಂ ಪರಃ
೨೬೨. ಸ್ಮರಂತಿಚ
೨೬೩. ಅನುಜ್ಞಾಪರಿಹಾರೌ ದೇಹಸಂಬಂಧಾ
ಜ್ಯೋತಿರಾದಿವತ್
೨೬೪. ಅಸಂತತೇಶ್ಚಾವ್ಯತಿಕರಃ
೨೬೫. ಆಭಾಸಾ ಏವಚ
೨೬೬. ಅದೃಷ್ಟಾ ನಿಯಮಾತ್
೨೬೭. ಅಭಿಸಂಧ್ಯಾದಿಷ್ವಪಿ ಚೈವಂ
೨೬೮. ಪ್ರದೇಶ ಭೇದಾದಿತಿಚೇನ್ನಾಂತರ್ಭಾವಾತ್

**ಪಾದ ನಾಲ್ಕು**

**61 ಪ್ರಾಣೋತ್ಪತ್ತ್ಯಧಿಕರಣ**

೨೬೯. ತಥಾಪ್ರಾಣಾಃ
೨೭೦. ಗೌಣ್ಯಸಂಭವಾತ್ತತ್ಪ್ರಾಕ್‌ಶ್ರುತೇಶ್ಚ
೨೭೧. ತತ್ಪೂರ್ವಕತ್ವಾದ್ವಾಚಃ

**62 ಸಪ್ತಗತ್ಯಧಿಕರಣ**

೨೭೨. ಸಪ್ತಗತೇರ್ವಿಶೇಷಿತತ್ವಾಚ್ಚ

೨೭೩. ಹಸ್ತಾದಯಸ್ತು ಸ್ಥಿತೇಽತೋ ನೈವಂ

**63 ಪ್ರಾಣಾಣುತ್ವಾಧಿಕರಣ**

೨೭೪. ಅಣವಶ್ಚ

೨೭೫. ಶ್ರೇಷ್ಠಶ್ಚ

**64 ವಾಯುಕ್ರಿಯಾಧಿಕರಣ**

೨೭೬. ನವಾಯುಕ್ರಿಯೇ ಪೃಥಗುಪದೇಶಾತ್

೨೭೭. ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ

೨೭೮. ಅಕರಣತ್ವಾಚ್ಚನ ದೋಷಸ್ತಥಾಹಿ ದರ್ಶಯತಿ

೨೭೯. ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ

**65 ಶ್ರೇಷ್ಠಾಣುತ್ವಾಧಿಕರಣ**

೨೮೦. ಅಣುಶ್ಚ

**66 ಜ್ಯೋತಿರಾದ್ಯಧಿಷ್ಠಾನಾಧಿಕರಣ**

೨೮೧. ಜ್ಯೋತಿರಾದ್ಯಧಿಷ್ಠಾನಂತುತದಾ
ಮನನಾತ್ಪ್ರಾಣವತಾ ಶಬ್ದಾತ್

೨೮೨. ತಸ್ಯಚ ನಿತ್ಯತ್ವಾತ್

**67 ಇಂದ್ರಿಯಾಧಿಕರಣ**

೨೮೩. ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್

೨೮೪. ಭೇದಶ್ರುತೇರ್ವೈಲಕ್ಷಣ್ಯಾಚ್ಚ

**68 ಸಂಜ್ಞಾಮೂರ್ತಿ ಕ್ಲೃಪ್ತ್ಯಧಿಕರಣ**

೨೮೫. ಸಂಜ್ಞಾಮೂರ್ತಿಕ್ಲೃಪ್ತಿಸ್ತುತ್ರಿವೃತ್ಕುರ್ವತ
ಉಪದೇಶಾತ್

೨೮೬. ಮಾಂಸಾದಿಭೌಮಂ ಯಥಾಶಬ್ದಮಿತರಯೋಶ್ಚ

೨೮೭. ವೈಶೇಷ್ಯಾತ್ತು ತದ್ವಾದಸ್ತದ್ವಾದಃ

## ಮೂರನೆಯ ಅಧ್ಯಾಯ

### ಪಾದ ಒಂದು

**69 ತದಂತರ ಪ್ರತಿ ಪತ್ತ್ಯಧಿಕರಣ**

೨೮೮. ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ

ಪ್ರಶ್ನನಿರೂಪಣಾಭ್ಯಾಂ

೨೮೯. ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್

೨೯೦. ಪ್ರಾಣಗತೇಶ್ಚ

೨೯೧. ಅಗ್ನ್ಯಾದಿಗತಿಶ್ರುತೇರಿತಿ ಚೇನ್ನಭಾಕ್ತತ್ವಾತ್

೨೯೨. ಪ್ರಥಮೇಽಶ್ರವಣಾದಿತಿ ಚೇನ್ನತಾ ಏವಹ್ಯುಪಪತ್ತೇಃ

೨೯೩. ಅಶ್ರುತತ್ವಾದಿತಿ ಚೇನ್ನೇಷ್ಟಾದಿ ಕಾರಿಣಾಂ ಪ್ರತೀತೇಃ

೨೯೪. ಭಾಕ್ತಂ ವಾಽನಾತ್ಮವಿತ್ತ್ವಾತ್ತಥಾಹಿದರ್ಶಯತಿ

## 70 ಕೃತಾತ್ಯಯಾಧಿಕರಣ

೨೯೫. ಕೃತಾತ್ಯಯೇಽನು ಶಯವಾನ್‌ದೃಷ್ಟ ಸ್ಮೃತಿಭ್ಯಾಂ ಯಥೇತಮನೇವಂಚ

೨೯೬. ಚರಣಾದಿತಿಚೇನ್ನತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ

೨೯೭. ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್

೨೯೮. ಸುಕೃತ ದುಷ್ಕೃತೇ ಏವೇತಿತು ಬಾದರಿಃ

## 71 ಅನಿಷ್ಟಾದಿಕಾರ್ಯಧಿಕರಣ

೨೯೯. ಅನಿಷ್ಟಾದಿ ಕಾರಿಣಾಮಪಿ ಚಶ್ರುತಂ

೩೦೦. ಸಂಯಮನೇತ್ವನುಭೂಯೇತರೇಷಾಂ ಆರೋಹಾವರೋಹೌ ತದ್ಗತಿದರ್ಶನಾತ್

೩೦೧. ಸ್ಮರಂತಿಚ

೩೦೨. ಅಪಿಸಪ್ತ

೩೦೩. ತತ್ರಾಪಿತದ್ವ್ಯಾಪಾರಾದವಿರೋಧಃ

೩೦೪. ವಿದ್ಯಾಕರ್ಮಣೋರಿತಿತು ಪ್ರಕೃತತ್ವಾತ್

೩೦೫. ನತೃತೀಯೇ ತಥೋಪಲಬ್ಧೇಃ

೩೦೬. ಸ್ಮರ್ಯತೇಽಪಿಚಲೋಕೇ

೩೦೭. ದರ್ಶನಾಚ್ಚ

೩೦೮. ತೃತೀಯ ಶಬ್ದಾವರೋಧಸ್ಸಂಶೋಕಜಸ್ಯ

## 72 ತತ್ಸ್ವಾಭಾವ್ಯಾಪತ್ತ್ಯಧಿಕರಣ

೩೦೯. ತತ್ಸ್ವಾಭಾವ್ಯಾಪತ್ತಿರುಪಪತ್ತೇಃ

## 73 ನಾತಿಚಿರಾಧಿಕರಣ

೩೧೦. ನಾತಿಚಿರೇಣ ವಿಶೇಷಾತ್

### 74 ಅನ್ಯಾಧಿಷ್ಠಿತಾಧಿಕರಣ

೩೧೧. ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್

೩೧೨. ಅಶುದ್ಧಮಿತಿ ಚೇನ್ನ ಶಬ್ದಾತ್

೩೧೩. ರೇತಸ್ಸಿಗ್ಯೋಗೋಽಥ

೩೧೪. ಯೋನೇಶ್ಶರೀರಂ

## ಪಾದ ಎರಡು

### 75 ಸಂಧ್ಯಾಧಿಕರಣ

೩೧೫. ಸಂಧ್ಯೇಸೃಷ್ಟಿರಾಹಹಿ

೩೧೬. ನಿರ್ಮಾತಾರಂ ಚೈಕೇಪುತ್ರಾದಯಶ್ಚ

೩೧೭. ಮಾಯಾಮಾತ್ರಂತುಕಾರ್ತ್ಸ್ನ್ಯೇನಾ
ನಭಿವ್ಯಕ್ತಸ್ವರೂಪತ್ವಾತ್

೩೧೮. ಪರಾಭಿಧ್ಯಾನಾತ್ತು ತಿರೋಹಿತಂ ತತೋಹ್ಯಸ್ಯ
ಬಂಧವಿಪರ್ಯಯೌ

೩೧೯. ದೇಹಯೋಗಾದ್ವಾಸೋಽಪಿ

೩೨೦. ಸೂಚಕಶ್ಚಹಿ ಶ್ರುತೇರಾಚಕ್ಷತೇ ಚ ತದ್ವಿದಃ

### 76 ತದಭಾವಾಧಿಕರಣ

೩೨೧. ತದಭಾವೋನಾಡೀಷು ತಚ್ಛ್ರುತೇರಾತ್ಮನಿಚ

೩೨೨. ಅತಃಪ್ರಬೋಧೋಽಸ್ಮಾತ್

### 77 ಕರ್ಮಾನುಸ್ಮೃತಿ ಶಬ್ದ ವಿಧ್ಯಧಿಕರಣ

೩೨೩. ಸಏವತು ಕರ್ಮಾನುಸ್ಮೃತಿ ಶಬ್ದವಿಧಿಭ್ಯಃ

### 78 ಮುಗ್ಧಾಧಿಕರಣ

೩೨೪. ಮುಗ್ಧೇಽರ್ಧಸಂಪತ್ತಿಃಪರಿಶೇಷಾತ್

### 79 ಉಭಯಲಿಂಗಾಧಿಕರಣ

೩೨೫. ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ

೩೨೬. ಭೇದಾದಿತಿಚೇನ್ನ ಪ್ರತ್ಯೇಕಮತದ್ವಚನಾತ್

೩೨೭. ಅಪಿಚೈವಮೇಕೇ

೩೨೮. ಅರೂಪವದೇವಹಿತತ್ಪ್ರಧಾನತ್ವಾತ್

೩೨೯. ಪ್ರಕಾಶವಚ್ಚಾವೈಯರ್ಥ್ಯಾತ್

೩೩೦. ಅಹಚತನ್ಮಾತ್ರಂ

೩೩೧. ದರ್ಶಯತಿಚಾಥೋಅಪಿಸ್ಮರ್ಯತೇ

೩೩೨. ಅತಏವಚೋಪಮಾ ಸೂರ್ಯಕಾದಿವತ್

೩೩೩. ಅಂಬುವದಗ್ರಹಣಾತ್ತುನತಥಾತ್ವಂ

೩೩೪. ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ
ಸಾಮಂಜಸ್ಯಾದೇವಂ ದರ್ಶನಾಚ್ಚ

೩೩೫. ಪ್ರಕೃತೈತಾವತ್ತ್ವಂ ಹಿಪ್ರತಿಷೇಧತಿ
ತತೋಬ್ರವೀತಿ ಚಭೂಯಃ

೩೩೬. ತದವ್ಯಕ್ತಮಾಹಹಿ

೩೩೭. ಅಪಿಸಂರಾಧನೇಪ್ರತ್ಯಕ್ಷಾನುಮಾನಾಭ್ಯಾಂ

೩೩೮. ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ
ಕರ್ಮಣ್ಯಭ್ಯಾಸಾತ್

೩೩೯. ಅತೋಽನಂತೇ ನ ತಥಾಹಿ ಲಿಂಗಂ

**80 ಅಹಿಕುಂಡಲಾಧಿಕರಣ**

೩೪೦. ಉಭಯವ್ಯಪದೇಶಾತ್ತ್ವಹಿಕುಂಡಲವತ್

೩೪೧. ಪ್ರಕಾಶಾಶ್ರಯವದ್ವಾತೇಜಸ್ತ್ವಾತ್

೩೪೨. ಪೂರ್ವವದ್ವಾ

೩೪೩. ಪ್ರತಿಷೇಧಾಚ್ಚ

**81 ಪರಾಧಿಕರಣ**

೩೪೪. ಪರಮತಸ್ಸೇತೂನ್ಮಾನಸಂಬಂಧಭೇದ
ವ್ಯಪದೇಶೇಭ್ಯಃ

೩೪೫. ಸಾಮಾನ್ಯಾತ್ತು

೩೪೬. ಬುದ್ಧ್ಯರ್ಥಃ ಪಾದವತ್

೩೪೭. ಸ್ಥಾನವಿಶೇಷಾತ್ಪ್ರಕಾಶಾದಿವತ್

೩೪೮. ಉಪಪತ್ತೇಶ್ಚ

೩೪೯. ತಥಾನ್ಯಪ್ರತಿಷೇಧಾತ್

೩೫೦. ಅನೇನ ಸರ್ವಗತತ್ವಮಾಯಾಮ ಶಬ್ದಾದಿಭ್ಯಃ

**82 ಫಲಾಧಿಕರಣ**

೩೫೧. ಫಲಮತ ಉಪಪತ್ತೇಃ

೩೫೨. ಶ್ರುತತ್ವಾಚ್ಚ

೩೫೩. ಧರ್ಮಂ ಜೈಮಿನಿರತಏವ

೩೫೪. ಪೂರ್ವಂತು ಬಾದರಾಯಣೋ ಹೇತುವ್ಯಪದೇಶಾತ್

## ಪಾದ ಮೂರು

### 83 ಸರ್ವವೇದಾಂತ ಪ್ರತ್ಯಯಾಧಿಕರಣ

೩೫೫. ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್

೩೫೬. ಭೇದಾನ್ನೇತಿ ಚೇದೇಕಸ್ಯಾಮಪಿ

೩೫೭. ಸ್ವಾಧ್ಯಾಯಸ್ಯ ತಥಾತ್ವೇಹಿ ಸಮಾಚಾರೇ
ಅಧಿಕಾರಾಚ್ಚ ಸವವಚ್ಚ ತನ್ನಿಯಮಃ

೩೫೮. ದರ್ಶಯತಿಚ

೩೫೯. ಉಪಸಂಹಾರೋಽರ್ಥಾಭೇದಾದ್ವಿಧಿ
ಶೇಷವತ್ಸಮಾನೇಚ

### 84 ಅನ್ಯಥಾತ್ವಾಧಿಕರಣ

೩೬೦. ಅನ್ಯಥಾತ್ವಂ ಶಬ್ದಾದಿತಿಚೇನ್ನಾವಿಶೇಷಾತ್

೩೬೧. ನವಾಪ್ರಕರಣ ಭೇದಾತ್ಪರೋವರೀಯ ಸ್ತ್ವಾದಿವತ್

೩೬೨. ಸಂಜ್ಞಾತಶ್ಚೇತ್ತದುಕ್ತಮಸ್ತಿತು ತದಪಿ

೩೬೩. ವ್ಯಾಪ್ತೇಶ್ಚ ಸಮಂಜಸಂ

### 85 ಸರ್ವಾಭೇದಾಧಿಕರಣ

೩೬೪. ಸರ್ವಾಭೇದಾದನ್ಯತ್ರೇಮೇ

### 86 ಆನಂದಾದ್ಯಧಿಕರಣ

೩೬೫. ಆನಂದಾದಯಃ ಪ್ರಧಾನಸ್ಯ

೩೬೬. ಪ್ರಿಯಶಿರಸ್ತ್ವಾದ್ಯ ಪ್ರಾಪ್ತಿರುಪಚಯಾ
ಪಚಯೌಹಿಭೇದೇ

೩೬೭. ಇತರೇತ್ವರ್ಥಸಾಮಾನ್ಯಾತ್

೩೬೮. ಆಧ್ಯಾನಾಯ ಪ್ರಯೋಜನಾ ಭಾವಾತ್

೩೬೯. ಆತ್ಮಶಬ್ದಾಚ್ಚ

೩೭೦. ಆತ್ಮಗೃಹೀತಿರಿತರವದುತ್ತರಾತ್

೩೭೧. ಅನ್ವಯಾದಿತಿ ಚೇತ್ಸ್ಯಾದವಧಾರಣಾತ್

### 87 ಕಾರ್ಯಾಖ್ಯಾನಾಧಿಕರಣ

೩೭೨. ಕಾರ್ಯಾಖ್ಯಾನಾದಪೂರ್ವಂ

**88** ಸಮಾನಾಧಿಕರಣ

೩೭೩. ಸಮಾನಏವಂಚಾ ಭೇದಾತ್

**89** ಸಂಬಂಧಾಧಿಕರಣ

೩೭೪. ಸಂಬಂಧಾದೇವಮನ್ಯತ್ರಾಪಿ

೩೭೫. ನವಾವಿಶೇಷಾತ್

೩೭೬. ದರ್ಶಯತಿಚ

**90** ಸಂಭೃತ್ಯಧಿಕರಣ

೩೭೭. ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ

**91** ಪುರುಷವಿದ್ಯಾಧಿಕರಣ

೩೭೮. ಪುರುಷವಿದ್ಯಾಯಾಮಪಿ ಚೇತರೇಷಾ
ಮನಾಮ್ನಾನಾತ್

**92** ವೇಧಾದ್ಯಧಿಕರಣ

೩೭೯. ವೇಧಾದ್ಯರ್ಥಭೇದಾತ್

**93** ಹಾನ್ಯಧಿಕರಣ

೩೮೦. ಹಾನೌತೂಪಾಯನ ಶಬ್ದ ಶೇಷತ್ವಾತ್ಕುಶಾಚ್ಛಂದ
ಸ್ತುತ್ಯುಪಗಾನ ವತ್ತದುಕ್ತಂ

**94** ಸಾಂಪರಾಯಾಧಿಕರಣ

೩೮೧. ಸಾಂಪರಾಯೇ ತರ್ತವ್ಯಾ ಭಾವಾತ್ತಥಾಹ್ಯನ್ಯೇ

೩೮೨. ಛಂದಕ ಉಭಯಾವಿರೋಧಾತ್

೩೮೩. ಗತೇರರ್ಥವತ್ತ್ವಮುಭಯಥಾಽನ್ಯತಾಹಿ ವಿರೋಧಃ

೩೮೪. ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್

೩೮೫. ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ

**95** ಅನಿಯಮಾಧಿಕರಣ

೩೮೬. ಅನಿಯಮಸ್ಸರ್ವೇಷಾಮವಿರೋಧ
ಶ್ಶಬ್ದಾನುಮಾನಾಭ್ಯಾಂ

**96** ಅಕ್ಷರದ್ಯಧಿಕರಣ

೩೮೭. ಅಕ್ಷರಧಿಯಾಂತ್ವವರೋಧಸ್ಸಾಮಾನ್ಯ
ತದ್ಭಾವಾಭ್ಯಾಮೌಪಸದವತ್ತದುಕ್ತಂ

೩೮೮. ಇಯದಾಮನನಾತ್

**97** ಅಂತರತ್ವಾಧಿಕರಣ

೩೮೯. ಅಂತರಾಭೂತಗ್ರಾಮವತ್ಸ್ವಾತ್ಮನೋಽನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್

೩೯೦. ವ್ಯತಿಹಾರೋ ವಿಶಿಂಷಂತಿ ಹೀತರವತ್

೩೯೧. ಸೈವಹಿ ಸತ್ಯಾದಯಃ

**98** ಕಾಮಾದ್ಯಧಿಕರಣ

೩೯೨. ಕಾಮಾದೀತರತ್ರ ತತ್ರಚಾಯತನಾದಿಭ್ಯಃ

೩೯೩. ಆದರಾದ ಲೋಪಃ

೩೯೪. ಉಪಸ್ಥಿತೇಽತಸ್ತದ್ವಚನಾತ್

**99** ತನ್ನಿರ್ಧಾರಣನಿಯಮನಾಧಿಕರಣ

೩೯೫. ತನ್ನಿರ್ಧಾರಣಾನಿಯಮ ಸ್ತದ್ದೃಷ್ಟೇಃ ಪೃಥಗ್ಘ್ಯ ಪ್ರತಿಬಂಧಃ ಫಲಂ

**100** ಪ್ರದಾನಾಧಿಕರಣ

೩೯೬. ಪ್ರದಾನವದೇವ ತದುಕ್ತಂ

**101** ಲಿಂಗಭೂಯಸ್ತ್ವಾಧಿಕರಣ

೩೯೭. ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ

**102** ಪೂರ್ವವಿಕಲ್ಪಾಧಿಕರಣ

೩೯೮. ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್

೩೯೯. ಅತಿದೇಶಾಚ್ಚ

೪೦೦. ವಿದ್ಯೈವತು ನಿರ್ಧಾರಣಾದ್ದರ್ಶನಾಚ್ಚ

೪೦೧. ಶ್ರುತ್ಯಾದಿ ಬಲೀಯಸ್ತ್ವಾಚ್ಚನಬಾಧಃ

೪೦೨. ಅನುಬಂಧಾದಿಭ್ಯಃ ಪ್ರಜ್ಞಾಂತರ ಪೃಥಕ್ತ್ವವದೃಷ್ಟಶ್ಚತದುಕ್ತಂ

೪೦೩. ನಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನಹಿ ಲೋಕಾಪತ್ತಿಃ

೪೦೪. ಪರೇಣಚ ಶಬ್ದ ಸ್ಯತಾದ್ವಿಧ್ಯಂ ಭೂಯಸ್ತ್ವಾತ್ತ್ವನು ಬಂಧಃ

**103** ಶರೀರೇಭಾವಾಧಿಕರಣ

೪೦೫. ಏಕ ಆತ್ಮನಶ್ಶರೀರೇ ಭಾವಾತ್

೪೦೬. ವ್ಯತಿರೇಕಸ್ತದ್ಭಾವ ಭಾವಿತ್ವಾನ್ನತೂಪ ಲಬ್ಧಿವತ್

**104** ಅಂಗಾವಬದ್ಧಾಧಿಕರಣ

೪೦೭. ಅಂಗಾವಬದ್ಧಾಸ್ತುನ ಶಾಖಾಸುಹಿ ಪ್ರತಿವೇದಂ

೪೦೮. ಮಂತ್ರಾದಿವದ್ವಾಽವಿರೋಧಃ

**105** ಭೂಮುಜ್ಯಾಯಸ್ತ್ವಾಧಿಕರಣ

೪೦೯. ಭೂಮ್ನಃಕ್ರತುವಜ್ಜ್ಯಾಯಸ್ತ್ವಂ ತಥಾಹಿದರ್ಶಯತಿ

**106** ಶಬ್ದಾದಿ ಭೇದಾಧಿಕರಣ

೪೧೦. ನಾನಾಶಬ್ದಾದಿ ಭೇದಾತ್

**107** ವಿಕಲ್ಪಾಧಿಕರಣ

೪೧೧. ವಿಕಲ್ಪೋಽವಿಶಿಷ್ಟ ಫಲತ್ವಾತ್

೪೧೨. ಕಾಮ್ಯಾಸ್ತುಯಥಾಕಾಮಂ ಸಮುಚ್ಚೀಯೇರನ್

**108** ಯಥಾಶ್ರಯಭಾವಾಧಿಕರಣ

ನವಾ ಪೂರ್ವಹೇತ್ವಭಾವಾತ್

೪೧೩. ಅಂಗೇಷು ಯಥಾಶ್ರಯ ಭಾವಃ

೪೧೪. ಶಿಷ್ಟೇಶ್ಚ

೪೧೫. ಸಮಾಹಾರಾತ್

೪೧೬. ಗುಣಸಾಧಾರಣ್ಯ ಶ್ರುತೇಶ್ಚ

೪೧೭. ನವಾತತ್ಸಹ ಭಾವಾಶ್ರುತೇಃ

೪೧೮. ದರ್ಶನಾಚ್ಚ

ಪಾದ ನಾಲ್ಕು

**109** ಪುರುಷಾರ್ಥಾಧಿಕರಣ

೪೧೯. ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ

೪೨೦. ಶೇಷತ್ವಾತ್ಪುರು ಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ

೪೨೧. ಆಚಾರ ದರ್ಶನಾತ್

೪೨೨. ತಚ್ಛ್ರುತೇಃ

೪೨೩. ಸಮನ್ವಾರಂಭಣಾತ್

೪೨೪. ತದ್ವತೋ ವಿಧಾನಾತ್

೪೨೫. ನಿಯಮಾಚ್ಚ

೪೨೬. ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್

೪೨೭. ತುಲ್ಯಂತು ದರ್ಶನಂ

೪೨೮. ಅಸಾರ್ವತ್ರಿಕೀ
೪೨೯. ವಿಭಾಗಶ್ಶತವತ್
೪೩೦. ಅಧ್ಯಯನ ಮಾತ್ರವತಃ
೪೩೧. ನಾವಿಶೇಷಾತ್
೪೩೨. ಸ್ತುತಯೇಽನುಮತಿರ್ವಾ
೪೩೩. ಕಾಮಕಾರೇಣಚೈಕೇ
೪೩೪. ಉಪಮರ್ದಂಚ
೪೩೫. ಊರ್ಧ್ವರೇತಸ್ಸು ಚ ಶಬ್ದೇಹಿ
೪೩೬. ಪರಾಮರ್ಶಂ ಜೈಮಿನೀ ರಚೋದನಾ ಚ್ಚಾಪವದತಿಹಿ
೪೩೭. ಅನುಷ್ಠೇಯಂ ಬಾದರಾಯಣಸ್ಸಾಮ್ಯಶ್ರುತೇಃ
೪೩೮. ವಿಧಿರ್ವಾಧಾರಣವತ್

## 110 ಸ್ತುತಿಮಾತ್ರಾಧಿಕರಣ

೪೩೯. ಸ್ತುತಿಮಾತ್ರಮುಪಾದಾನಾದಿಚೇನ್ನಾಪೂರ್ವತ್ವಾತ್
೪೪೦. ಭಾವಶಬ್ದಾಚ್ಚ

## 111 ಪಾರಿಪ್ಲವಾಧಿಕರಣ

೪೪೧. ಪಾರಿಪ್ಲವಾರ್ಥಾ ಇತಿಚೇನ್ನ ವಿಶೇಷಿತತ್ವಾತ್
೪೪೨. ತಥಾಚೈಕವಾಕ್ಯೋಪಬಂಧಾತ್

## 112 ಅಗ್ನೀಂಧನಾದ್ಯಧಿಕರಣ

೪೪೩. ಅತಏವಚಾಗ್ನೀಂಧನಾದ್ಯನಪೇಕ್ಷಾ

## 113 ಸರ್ವಾಪೇಕ್ಷಾಧಿಕರಣ

೪೪೪. ಸರ್ವಾಪೇಕ್ಷಾಚ ಯಜ್ಞಾದಿಶ್ರುತೇರಶ್ವವತ್

## 114 ಶಮದಮಾದ್ಯಧಿಕರಣ

೪೪೫, ಶಮದಮಾದ್ಯುಪೇತಸ್ಸ್ಯಾತ್ತಥಾಪಿತು ತದ್ವಿಧೇಸ್ತ
ದಂಗತಯಾ ತೇಷಾಮಪ್ಯವಶ್ಯಾನುಷ್ಠೇಯತ್ವಾತ್

## 115 ಸರ್ವಾನ್ನಾನುಮತ್ಯಧಿಕರಣ

೪೪೬. ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್
೪೪೭. ಅಬಾಧಾಚ್ಚ
೪೪೮. ಅಪಿಸ್ಮರ್ಯತೇ
೪೪೯. ಶಬ್ದಶ್ಚಾತೋಽಕಾಮಕಾರೇ

**116 ವಿಹಿತತ್ವಾಧಿಕರಣ**

೪೫೦. ವಿಹಿತತ್ವಾಚ್ಚಾಶ್ರಮ ಕರ್ಮಾಪಿ
೪೫೧. ಸಹಕಾರಿತ್ವೇನಚ
೪೫೨. ಸರ್ವಥಾಪಿತ ಏವೋಭಯ ಲಿಂಗಾತ್
೪೫೩. ಅನಭಿಭವಂಚದರ್ಶಯತಿ

**117 ವಿಧುರಾಧಿಕರಣ**

೪೫೪. ಅಂತರಾಚಾಪಿತು ತದ್ದೃಷ್ಟೇಃ
೪೫೫. ಅಪಿಸ್ಮರ್ಯತೇ
೪೫೬. ವಿಶೇಷಾನುಗ್ರಹಾಚ್ಚ
೪೫೭. ಅತಿಸ್ತ್ವಿತರ ಜ್ಯಾಯೋಲಿಂಗಾಚ್ಚ

**118 ತದ್ಭೂತಾಧಿಕರಣ**

೪೫೮. ತದ್ಭೂತಸ್ಯತು ನಾತದ್ಭಾವೋ ಜೈಮಿನೇರಪಿ
ನಿಯಮಾತ್ತದ್ರೂಪಾ ಭಾವೇಭ್ಯಃ
೪೫೯. ನಚಾಧಿಕಾರಿಕಮಪಿಪತನಾನುಮಾನಾ
ತ್ತದಯೋಗಾತ್
೪೬೦. ಉಪಪೂರ್ವ ಮಪೀತ್ಯೇಕೇ ಭಾವಮಶನವತ್ತದುಕ್ತಂ
೪೬೧. ಬಹಿಸ್ತೂಭಯತಾಪಿ ಸ್ಮೃತೇರಾಚಾರಾಚ್ಚ

**119 ಸ್ವಾಮ್ಯಧಿಕರಣ**

೪೬೨. ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ
೪೬೩. ಆರ್ತ್ವಿಜ್ಯಮಿ ತ್ಯಾಡುಲೋಮಿಸ್ತಸ್ಮೈಹಿ ಪರಿಕ್ರಿಯತೇ

**120 ಸಹಕಾರ್ಯಂತರವಿಧ್ಯಧಿಕರಣ**

೪೬೪. ಸಹಕಾರ್ಯಂತರ ವಿಧಿಃ ಪಕ್ಷೇಣ ತೃತೀಯಂ
ತದ್ವತೋ ವಿಧ್ಯಾದಿವತ್
೪೬೫. ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ
೪೬೬. ಮೌನವದಿತರೇಷಾಮಪ್ಯುಪದೇಶಾತ್

**121 ಅನಾವಿಷ್ಕಾರಾಧಿಕರಣ**

೪೬೭. ಅನಾವಿಷ್ಕುರ್ವನ್ನನ್ವಯಾತ್

**122 ಐಹಿಕಾಧಿಕರಣ**

೪೬೮. ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್

**123 ಮುಕ್ತಿಫಲಾಧಿಕರಣ**

೪೭೯. ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಃ ತದವಸ್ಥಾವಧೃತೇಃ

# ನಾಲ್ಕನೆಯ ಅಧ್ಯಾಯ

## ಪಾದ ಒಂದು

**124 ಆವೃತ್ತ್ಯಧಿಕರಣ**

೪೮೦. ಆವೃತ್ತಿರಸಕೃದುಪದೇಶಾತ್

೪೮೧. ಲಿಂಗಾಚ್ಚ

**125 ಆತ್ಮತ್ವೋಪಾಸನಾಧಿಕರಣ**

೪೮೨. ಆತ್ಮೇತಿತೂಪಗಚ್ಛಂತಿಗ್ರಾಹಯಂತಿಚ

**126 ಪ್ರತೀಕಾಧಿಕರಣ**

೪೮೩. ನಪ್ರತೀಕೇನಹಿಸಃ

೪೮೪. ಬ್ರಹ್ಮದೃಷ್ಟಿರುತ್ಕರ್ಷಾತ್

**127 ಆದಿತ್ಯಾದಿಮತ್ಯಧಿಕರಣ**

೪೮೫. ಆದಿತ್ಯಾದಿ ಮತಯಶ್ಚಾಂಗ ಉಪಪತ್ತೇಃ

**128 ಆಸೀನಾಧಿಕರಣ**

೪೮೬. ಆಸೀನಸ್ಸಂಭವಾತ್

೪೮೭. ಧ್ಯಾನಾಚ್ಚ

೪೮೮. ಅಚಲತ್ವಂಚಾಪೇಕ್ಷ್ಯ

೪೮೯. ಸ್ಮರಂತಿಚ

೪೯೦. ಯತ್ರೈಕಾಗ್ರತಾ ತತ್ರಾವಿಶೇಷಾತ್

**129 ಅಪ್ರಾಯಣಾಧಿಕರಣ**

೪೯೧. ಅಪ್ರಯಾಣಾತ್ತತ್ರಾಪಿಹಿದೃಷ್ಟಂ

**130 ತದಧಿಗಮಾಧಿಕರಣ**

೪೯೨. ತದಧಿಗಮೇ ಉತ್ತರಪೂರ್ವಾರ್ಘಯೋರಶ್ಲೇಷ ವಿನಾಶೌತದ್ವ್ಯಪದೇಶಾತ್

**131.** **ಇತರಾಧಿಕರಣ**

೪೮೩. ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು

**132** **ಅನಾರಬ್ಧಕಾರ್ಯಾಧಿಕರಣ**

೪೮೪. ಅನಾರಬ್ಧಕಾರ್ಯೇ ಏವತು ಪೂರ್ವೇತದವಧೇಃ

**133** **ಅಗ್ನಿಹೋತ್ರಾದ್ಯಧಿಕರಣ**

೪೮೫. ಅಗ್ನಿಹೋತ್ರಾದಿತು ತತ್ಕಾರ್ಯಾಯೈವ ತದ್ದರ್ಶನಾತ್

೪೮೬. ಅತೋಽನ್ಯಾಪಿಹ್ಯೇಕೇಷಾಮುಭಯೋಃ

೪೮೭. ಯದೇವ ವಿದ್ಯಯೇತಿ ಹಿ

**134** **ಇತರ ಕ್ಷಪಣಾಧಿಕರಣ**

೪೮೮. ಭೋಗೇನತ್ವಿತರೇಕ್ಷಪಯಿತ್ವಾಥ ಸಂಪದ್ಯತೇ

**ಪಾದ ಎರಡು**

**135** **ವಾಗಧಿಕರಣ**

೪೮೯. ವಾಂಗ್ಮನಸಿದರ್ಶನಾಚ್ಛಬ್ದಾಚ್ಚ

೪೯೦. ಅತಏವ ಸರ್ವಾಣ್ಯನು

**136** **ಮನೋಽಧಿಕರಣ**

೪೯೧. ತನ್ಮನಃ ಪ್ರಾಣ ಉತ್ತರಾತ್

**137** **ಅಧ್ಯಕ್ಷಾಧಿಕರಣ**

೪೯೨. ಸೋಽಧ್ಯಕ್ಷೇ ತದುಪಗಮಾದಿಭ್ಯಃ

**138** **ಭೂತಾಧಿಕರಣ**

೪೯೩. ಭೂತೇಷು ತಚ್ಛ್ರುತೇಃ

೪೯೪. ನೈಕಸ್ಮಿನ್ ದರ್ಶಯತೋಹಿ

**139** **ಆಸೃತ್ಯುಪಕ್ರಮಾಧಿಕರಣ**

೪೯೫. ಸಮಾನಾಚಾಸೃತ್ಯುಪಕ್ರಮಾದಮೃತತ್ವಂ
ಚಾನುಪೋಷ್ಯ

೪೯೬. ತದಾಪೀತೇಸ್ಸಂಸಾರವ್ಯಪದೇಶಾತ್

೪೯೭. ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ

೪೯೮. ನೋಪಮರ್ದೇನಾತಃ

೪೯೯. ಅಸ್ಯೈವ ಚೋಪಪತ್ತೇರೂಷ್ಮಾ

೫೦೦. ಪ್ರತಿಷೇಧಾದಿತಿ ಚೇನ್ನಶಾರೀರಾತ್
ಸ್ಪಷ್ಟೋಹ್ಯೇಕೇಷಾಂ

೫೦೧. ಸ್ಮರ್ಯತೇಚ

## 140 ಪರಸಂಪತ್ತ್ಯಧಿಕರಣ

೫೦೨. ತಾನಿಪರೇ ತಥಾಹ್ಯಹ

## 141 ಅವಿಭಾಗಾಧಿಕರಣ

೫೦೩. ಅವಿಭಾಗೋ ವಚನಾತ್

## 142 ತದೋಕೋಽಧಿಕರಣ

೫೦೪. ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ
ವಿದ್ಯಾ ಸಾಮರ್ಥ್ಯಾತ್ತಚ್ಛೇಷ ಗತ್ಯನುಸ್ಮೃತಿ
ಯೋಗಾಚ್ಚ ಹಾರ್ದಾನು ಗೃಹೀತಶ್ಶತಾಧಿಕಯಾ

## 143 ರಶ್ಮ್ಯನುಸಾರಾಧಿಕರಣ

೫೦೫. ರಶ್ಮ್ಯನುಸಾರೀ

## 144 ನಿಶಾಧಿಕರಣ

೫೦೬. ನಿಶಿನೇತಿ ಚೇನ್ನಸಂಬಂಧಸ್ಯ ಯಾವದ್ದೇಹ
ಭಾವಿತ್ವಾದ್ದರ್ಶಯತಿಚ

## 145 ದಕ್ಷಿಣಾಯನಾಧಿಕರಣ

೫೦೭. ಅತಶ್ಚಾಯನೇಽಪಿ ದಕ್ಷಿಣೇ

೫೦೮. ಯೋಗಿನಃ ಪ್ರತಿಸ್ಮರ್ಯತೇ ಸ್ಮಾರ್ತೇಚೈತೇ

# ಪಾದ ಮೂರು

## 146 ಅರ್ಚಿರಾದ್ಯಧಿಕರಣ

೫೦೯. ಅರ್ಚಿರಾದಿನಾ ತತ್ಪ್ರಥಿತೇಃ

## 147 ವಾಯ್ವಧಿಕರಣ

೫೧೦. ವಾಯುಮಬ್ದಾದ ವಿಶೇಷ ವಿಶೇಷಾಭ್ಯಾಂ

## 148 ವರುಣಾಧಿಕರಣ

೫೧೧. ತಟಿತೋಧಿವರುಣ ಸ್ಸಂಬಂಧಾತ್

### 149 ಅತಿವಾಹಿಕಾಧಿಕರಣ

೫೧೨. ಅತಿವಾಹಿಕಾಸ್ತಲ್ಲಿಂಗಾತ್
೫೧೩. ವೈದ್ಯುತೇನೈವತತಸ್ತಚ್ಛ್ರುತೇಃ

### 150 ಕಾರ್ಯಾಧಿಕರಣ

೫೧೪. ಕಾರ್ಯಂ ಬಾದರಿರಸ್ಯಗತ್ಯುಪಪತ್ತೇಃ
೫೧೫. ವಿಶೇಷಿತತ್ವಾಚ್ಚ
೫೧೬. ಸಾಮೀಪ್ಯಾತ್ತು ತದ್ವ್ಯಪದೇಶಃ
೫೧೭. ಕಾರ್ಯಾತ್ಯಯೇ ತದಧ್ಯಕ್ಷೇಣ ಸಹತಃ ಪರಮಭಿಧಾನಾತ್
೫೧೮. ಸ್ಮೃತೇಶ್ಚ
೫೧೯. ಪರಂಜೈಮಿನಿರ್ಮುಖ್ಯತ್ವಾತ್
೫೨೦. ದರ್ಶನಾಚ್ಚ
೫೨೧. ನಚಕಾರ್ಯೇ ಪ್ರತ್ಯಭಿಸಂಧಿಃ
೫೨೨. ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾಚದೋಷಾತ್ತ ತತ್ಕ್ರತುಶ್ಚ
೫೨೩. ವಿಶೇಷಂ ಚ ದರ್ಶಯತಿ

## ಪಾದ ನಾಲ್ಕು

### 151 ಸಂಪದ್ಯಾವಿರ್ಭಾವಾಧಿಕರಣ

೫೨೪. ಸಂಪದ್ಯಾವಿರ್ಭಾವಸ್ಸ್ವೇನಶಬ್ದಾತ್
೫೨೫. ಮುಕ್ತಃ ಪ್ರತಿಜ್ಞಾನಾತ್
೫೨೬. ಆತ್ಮಾ ಪ್ರಕರಣಾತ್

### 152 ಅವಿಭಾಗೇನದೃಷ್ಟತ್ವಾಧಿಕರಣ

೫೨೭. ಅವಿಭಾಗೇನದೃಷ್ಟತ್ವಾತ್

### 153 ಬ್ರಾಹ್ಮಾಧಿಕರಣ

೫೨೮. ಬ್ರಾಹ್ಮೇಣ ಜೈಮಿನಿರುಪನ್ಯಾಸಾಧಿಭ್ಯಃ
೫೨೯. ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ
೫೩೦. ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ

## 154 ಸಂಕಲ್ಪಾಧಿಕರಣ

೫೩೧. ಸಂಕಲ್ಪಾದೇವತಚ್ಛ್ರುತೇಃ

೫೩೨. ಅತಏವಚಾನನ್ಯಾಧಿಪತಿಃ

## 155 ಅಭಾವಾಧಿಕರಣ

೫೩೩. ಅಭಾವಂ ಬಾದರಿರಾಹಹ್ಯೇವಂ

೫೩೪. ಭಾವಂ ಜೈಮಿನಿರ್ವಿಕಲ್ಪಾಮನನಾತ್

೫೩೫. ದ್ವಾದಶಾಹವದುಭಯವಿಧಂ ಬಾದರಾಯಣೋऽತಃ

೫೩೬. ತನ್ವಭಾವೇಸಂಧ್ಯವದುಪಪತ್ತೇಃ

೫೩೭. ಭಾವೇಜಾಗ್ರದ್ವತ್

೫೩೮. ಪ್ರದೀಪವದಾವೇಶಸ್ತಥಾಹಿ ದರ್ಶಯತಿ

೫೩೯. ಸ್ವಾಪ್ಯಯ ಸಂಪತ್ತ್ಯೋರನ್ಯತರಾಪೇಕ್ಷ
ಮಾವಿಷ್ಕೃತಂಹಿ

## 156 ಜಗದ್ವ್ಯಾಪಾರವರ್ಜಾಧಿಕರಣ

೫೪೦. ಜಗದ್ವ್ಯಾಪಾರವರ್ಜಂ ಪ್ರಕರಣಾದ
ಸನ್ನಿಹಿತತ್ವಾಚ್ಚ

೫೪೧. ಪ್ರತ್ಯಕ್ಷೋಪದೇಶಾನ್ನೇತಿಚೇನ್ನಾಧಿಕಾರಿ
ಮಂಡಲಸ್ಥೋಕ್ತೇಃ

೫೪೨. ವಿಕಾರಾವರ್ತಿಚ ತಥಾಹಿ ಸ್ಥಿತಿಮಾಹ

೫೪೩. ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ

೫೪೪. ಭೋಗಮಾತ್ರಸಾಮ್ಯ ಲಿಂಗಾಚ್ಚ

೫೪೫. ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್

# ಸೂತ್ರಾರ್ಥಸಾರ

## ಒಂದನೆಯ ಅಧ್ಯಾಯ

ವೇದದ ಪೂರ್ವಭಾಗ ವಿಚಾರ ರೂಪವಾದ ಕರ್ಮಕಾಂಡದಲ್ಲಿ ವರ್ಣಾಶ್ರಮ ಧರ್ಮಗಳಿಗನುಸಾರವಾದ ನಿತ್ಯನೈಮಿತ್ತಿಕಾದಿ ಕರ್ಮಗಳ ಬಗ್ಗೆ, ಸ್ವರ್ಗಾದಿ ಪುಣ್ಯ ಲೋಕಗಳನ್ನು ಹೊಂದಲು ಮಾಡಬೇಕಾದ ಕರ್ಮಗಳ ಬಗ್ಗೆ ತಿಳಿದುಕೊಂಡಾಗ, ಇವುಗಳಿಂದ ಜೀವನು ಅನಾದಿಯಾಗಿ ಸಂಸಾರ ಚಕ್ರದಲ್ಲಿ ಸುತ್ತುತ್ತಿರಬೇಕಾಗುತ್ತದೆ, ಅವುಗಳಿಂದ ಬರುವ ಫಲವು ಅಲ್ಪ, ಅಸ್ಥಿರ ಎಂಬುದು ತಿಳಿದುಬರುತ್ತದೆ. ಕರ್ಮಗಳ ಜೊತೆಗೆ ಭಗವಂತ, ಭಾಗವತ ಇವರ ಬಗ್ಗೆ ಓದಿ ಕಲಿತು ಸಂಪಾದಿಸಿದ ಜ್ಞಾನವೂ, ಅದರ ಫಲವಾಗಿ ಒಳ್ಳೆಯ ನಡತೆಗಳೂ ತಿಳಿದುಬರುತ್ತವೆ. ಇದರಿಂದ ಸನ್ಮಾರ್ಗದಲ್ಲಿ ಪ್ರವರ್ತಿಸುವ ಅಭಿಲಾಷೆ ಹುಟ್ಟುತ್ತದೆ.

ವೇದದ ಉತ್ತರಭಾಗ ವಿಚಾರ ರೂಪವಾದ ಜ್ಞಾನಕಾಂಡದಲ್ಲಿ ಅಲ್ಪ, ಅಸ್ಥಿರ ರೂಪವಾದ ಸಂಸಾರ ಚಕ್ರದಿಂದ ತಪ್ಪಿಸಿಕೊಂಡು ಪುನರ್ಜನ್ಮವಿಲ್ಲದ ಶಾಶ್ವತ ಸುಖವು ಬ್ರಹ್ಮಾನುಗ್ರಹದಿಂದ ಬ್ರಹ್ಮಜ್ಞಾನದ ಮೂಲಕ ಸಿಗುತ್ತದೆಂದು ತಿಳಿದಾಗ ಬ್ರಹ್ಮನನ್ನು ಅರಿಯುವ ಇಚ್ಛೆ ಉಂಟಾಗುತ್ತದೆ. ಕರ್ಮಯೋಗದ ಅನುಷ್ಠಾನದಿಂದ ನಿರ್ಮಲಾಂತಃಕರಣವನ್ನು ಪಡೆದ ಮುಮುಕ್ಷುವು ಜ್ಞಾನಕ್ಕೆ ಅರ್ಹತೆ ಪಡೆಯುತ್ತಾನೆ. ಆತ್ಮನು ಪ್ರಕೃತಿಗಿಂತ ಭಿನ್ನನೆಂದು ತಿಳಿಯುವುದೇ ಜ್ಞಾನಯೋಗ. ಪರಬ್ರಹ್ಮನ ಜ್ಞಾನಕ್ಕೆ ವೇದಾಂತಶಾಸ್ತ್ರವೇ ಆಧಾರವಾಗಿದೆ.

ಕರ್ಮಫಲವನ್ನು ಅನುಭವಿಸುವ ಚಿತ್ (ಭೋಕ್ತಾ) ಅಥವಾ ಜೀವ, ಅವನಿಗೆ ಭೋಗೋಪಕರಣವಾಗಿ ಕಲ್ಪಿಸಲ್ಪಟ್ಟಿರುವ ಅಚಿತ್ (ಭೋಗ್ಯಂ) ಅಥವಾ ಜೀವರಹಿತ, ಭೂತೇಂದ್ರಿಯ ರೂಪ ಆದ ಪ್ರಪಂಚ (ಮೂಲಪ್ರಕೃತಿ), ಇವೆರಡಕ್ಕೂ ಸ್ಥಿತಿಗತಿಗಳನ್ನು ಕಲ್ಪಿಸಿರುವ ಈಶ್ವರ (ಪ್ರೇರಿತಾರಂ) ಅಥವಾ ಪರಬ್ರಹ್ಮ–ಇವು ಮೂರೇ ಸಮಸ್ತ, ಶಾಶ್ವತ, ಅನಾದಿ ಆಗಿವೆ ; ಜೀವ, ಪ್ರಕೃತಿಗಳು ಇರುವುದು ಪರಬ್ರಹ್ಮನು ಅವೆರಡರಲ್ಲೂ ಅಂತರ್ಯಾಮಿಯಾಗಿ ಇರುವುದರಿಂದಲೇ. ಎಂಬುದೆಲ್ಲ ಉಪನಿಷತ್ತುಗಳಿಂದ ತಿಳಿಯುತ್ತದೆ.

ಚಿತ್ ಅಚಿತ್ ಈಶ್ವರ ಎಂದು ತತ್ತ್ವಗಳು ಮೂರಾಗಿದ್ದರೂ ಚಿತ್‌ಅಚಿತ್‌ಗಳೆರಡೂ ಈಶ್ವರನಿಗೆ ಶರೀರದಂತಿದ್ದು, ಸದಾ ಅವನ ಸಂಬಂಧ–ಸಂಪರ್ಕವನ್ನು ಪಡೆದಿರುತ್ತವೆ. ಹಾಗೆಯೇ ಈಶ್ವರನು ಚಿತ್-ಅಚಿತ್‌ಗಳಿಗೆ ಆತ್ಮ ಅಥವಾ ಶರೀರಿ

ಯಾಗಿದ್ದು ಅವುಗಳೊಂದಿಗೆ ಸದಾ ಕೂಡಿಯೇ ಇರುತ್ತಾನೆ. ಈ ಮೂರಕ್ಕೂ ಇರುವ ಸಂಬಂಧವು ಬೇರ್ಪಡಿಸಲು, ಪ್ರತ್ಯೇಕಿಸಲು, ಆಗದಂತಹುದು. ಆದುದರಿಂದ ವಿಶಿಷ್ಟವಾದ ತತ್ತ್ವ ಒಂದೇ ಎನ್ನಬಹುದು. ಚೇತನಾ ಚೇತನ ರೂಪ ಜಗತ್ತಿಗೂ, ಪರಮಾತ್ಮನಿಗೂ ಇರುವ ಶರೀರ-ಶರೀರಿ ಭಾವವು ಕಾಲ್ಪನಿಕವಾಗಿರದೆ, ವೇದೋಕ್ತ ವಾಗಿದೆ ಎಂಬುದು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಪ್ರತಿಪಾದಿತವಾಗಿದೆ. ಆತ್ಮನ ಆಧಾರದಿಂದ ಶರೀರ ಇರುವಂತೆ ಪರಮಾತ್ಮನ ಆಧಾರದಿಂದ ಜಗತ್ತು ಇದೆ. ಶರೀರ ಆತ್ಮಗಳಿಗೆ ಇರುವ ಗಾಢವಾದ ಸಂಬಂಧವೇ ಜಗತ್ತು-ಪರಮಾತ್ಮರಿಗೆ ಇದೆ. ಈ ಶರೀರಾತ್ಮ ಸಂಬಂಧವು ಅವಿನಾಭಾವ, ಅಪೃಥಕ್‌ಸಿದ್ಧಿ ಆಗಿದೆ.

ಪೂರ್ವ ಮೀಮಾಂಸಕರು ಉಪನಿಷತ್ತುಗಳಿಗೆ ಮಾನ್ಯತೆ ಕೊಡಲಿಲ್ಲ. ಉಪ ನಿಷತ್ತುಗಳಿಗೆ ಮಾನ್ಯತೆಯಿತ್ತ ವೇದಾಂತಿಗಳು ಕರ್ಮಕಾಂಡಕ್ಕೆ ಮನ್ನಣೆ ಕೊಡಲಿಲ್ಲ. ವೇದದ ಪೂರ್ವಭಾಗವಾದ ಕರ್ಮಕಾಂಡ, ಉತ್ತರ ಭಾಗವಾದ ಜ್ಞಾನಕಾಂಡ, ಇವೆರಡಕ್ಕೂ ಸಾಮರಸ್ಯ–ಐಕಮತ್ಯವಿದೆ. ಆದುದರಿಂದ ಪ್ರತಿಪಾದಿತವಾಗಿರುವ ವಿಷಯ ದೃಷ್ಟಿಯಿಂದ ಪೂರ್ವ ಹಾಗೂ ಉತ್ತರ ಮೀಮಾಂಸೆಗಳಿಗೆ ಭೇದ ಹೇಳಿದರೂ ಅವೆರಡೂ ಒಂದೇ ಶಾಸ್ತ್ರವಾಗಿದೆ. ಎಲ್ಲ ಅಂಗಗಳಿಂದ ಕೂಡಿರುವ ವೇದಗಳನ್ನು ಅಧ್ಯಯನ ಮಾಡಿ, ಕರ್ಮಗಳಿಂದ ಬರುವ ಫಲವು ಅಲ್ಪ, ಅಸ್ಥಿರ ಎಂದು ಅರಿತು, ಮೋಕ್ಷಾಭಿಲಾಷೆ ಉಂಟಾದೊಡನೆ, ಅನಂತ, ಸ್ಥಿರ ಫಲವುಳ್ಳ ಬ್ರಹ್ಮಜ್ಞಾನದ ಆಸೆ ಉಂಟಾಗುತ್ತದೆ. ಚಿದಚಿದೀಶ್ವರ ತತ್ತ್ವಜ್ಞಾನದಿಂದ ಮನುಷ್ಯನ ಸಕಲ ಕ್ಲೇಶಗಳಿಗೂ ಕಾರಣವಾದ ದೇಹಾತ್ಮ ಭ್ರಮೆ, ಸ್ವತಂತ್ರಾತ್ಮ ಭ್ರಮೆ, ಎರಡೂ ನಿರ್ಮೂಲನವಾಗಿ, ಈ ತತ್ತ್ವತ್ರಯ ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿದೆ. ಕಾರಣ, ಕಾರ್ಯ ಎರಡೂ ಚೇತನ-ಅಚೇತತ ವಿಶಿಷ್ಟ ಬ್ರಹ್ಮವೊಂದೇ ಆಗಿರುತ್ತದೆ. ಕಾರಣಾವಸ್ಥೆಯ ಬ್ರಹ್ಮವು ನಾಮರೂಪ ವಿಭಾಗ ಮಾಡಲು ಆಗದಿರುವ ಸೂಕ್ಷ್ಮ ಚೇತನಾಚೇತನ ವಿಶಿಷ್ಟವಾಗಿ ದ್ದರೆ, ಕಾರ್ಯಾವಸ್ಥೆಯ ಬ್ರಹ್ಮವು ನಾಮರೂಪ ವಿಭಾಗ ಮಾಡಲು ಆಗುವ ಸ್ಥೂಲ ಚೇತನಾಚೇತನ ವಿಶಿಷ್ಟವಾಗಿರುತ್ತದೆ. ಹೀಗೆ ವಿಶ್ಲೇಷ ಮಾಡಿ ಪ್ರತ್ಯೇಕಿಸಿ ವಿಚಾರ ಮಾಡಿದಾಗ ಮೂರು ತತ್ತ್ವಗಳು ಇರುವಂತೆ ಕಾಣಬಂದರೂ, ವಿಶಿಷ್ಟ ರೀತಿಯಿಂದ ನೋಡುವಾಗ ತತ್ತ್ವ ಒಂದೇ ಎಂಬುದು ತಿಳಿಯುತ್ತದೆ.

ಬ್ರಹ್ಮ ಶಬ್ದವು ನಿಖಿಲದೋಷರಹಿತನೂ, ಅತಿಶಯವುಳ್ಳ ಕಲ್ಯಾಣಗುಣಗಳಿಂದ ಕೂಡಿರುವವನೂ ಆದ ಪುರುಷೋತ್ತಮನನ್ನು ನಿರ್ದೇಶಿಸುತ್ತದೆ. ಪರಮಶ್ರೇಷ್ಠನೂ, ವೃದ್ಧಿಯನ್ನು ಹೊಂದಿಸುವ ಶಕ್ತಿಯುಳ್ಳವನೂ, ಆದ ಬ್ರಹ್ಮನೇ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನಾಗಿರುತ್ತಾನೆ. ಅಚಿಂತ್ಯನಾದ, ವಿವಿಧ ವಿಚಿತ್ರ ರಚನೆ ಯುಳ್ಳ ಮತ್ತು ನಿಯತವಾದ ದೇಶಕಾಲಗಳಲ್ಲಿ ಕರ್ಮಫಲಗಳನ್ನು ಅನುಭವಿಸುತ್ತಿರುವ ಜೀವರಾಶಿಯುಳ್ಳ, ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನಾದ, ಪರಮಪುರುಷನು ಸರ್ವೇಶ್ವರ, ಸರ್ವಜ್ಞ, ಸರ್ವಶಕ್ತ, ಸತ್ಯಸಂಕಲ್ಪ, ನಿಖಿಲಹೇಯಗಳಿಗೆ ವಿರುದ್ಧವಾದ

ಸ್ವಭಾವವುಳ್ಳವ, ಜ್ಞಾನಾನಂದಗಳೇ ಮೊದಲಾದ ಅನಂತಕಲ್ಯಾಣ ಗುಣಗಳುಳ್ಳವ, ಪರಮಕಾರುಣಿಕ ಆಗಿದ್ದಾನೆ. ಈ ಪರಬ್ರಹ್ಮನು ವೇದಶಾಸ್ತ್ರದಿಂದಲೇ ತಿಳಿಯಲ್ಪಡು ತ್ತಾನೆ. ವೇದಾಂತ ವಾಕ್ಯಗಳು ಪರಬ್ರಹ್ಮನ ವಿಷಯದಲ್ಲಿ ಪ್ರಮಾಣಗಳಾಗಿವೆ. ವೇದಾಂತ ವಾಕ್ಯಗಳ ಏಕ ವಿಷಯವು ಆನಂದ ರೂಪವಾದ ಬ್ರಹ್ಮವೇ ಆಗಿದೆ. ಪರಿಮಿತ ಶಕ್ತಿಯುಳ್ಳ ಜೀವನಿಗಿಂತ ವಿಲಕ್ಷಣ, ಚತುರ, ಸರ್ವಜ್ಞ ಆದ ಪುರುಷನಿಂದ ಈ ಜಗತ್ತು ಉತ್ಪನ್ನವಾಗಿದೆ.

ಉಪನಿಷತ್ತುಗಳಲ್ಲಿ ಬ್ರಹ್ಮನಿಗೂ ಚೇನತಾಚೇತನಾತ್ಮಕ ಪ್ರಪಂಚಕ್ಕೂ ಅಭೇದ ವನ್ನು ಹೇಳುವ ಹಾಗೂ ಭೇದವನ್ನು ಬೋಧಿಸುವ ಶ್ರುತಿವಾಕ್ಯಗಳಿವೆ. ಇವುಗಳಿಗೆ ಪರಸ್ಪರ ವಿರೋಧವು ತೋರುವುದರಿಂದ ಎರಡನ್ನೂ ಸಮಪ್ರಧಾನವಾಗಿ ಕಾಣಲು ಸಾಧ್ಯವಿಲ್ಲವೆಂದು ತಿಳಿದು, ಅಭೇದವನ್ನು ಪ್ರತಿಪಾದಿಸುವ ಶ್ರುತಿವಾಕ್ಯಗಳಿಗೇ ಪ್ರಾಧಾನ್ಯ ನೀಡಿದ ಕೆಲವರು ಅದ್ವೈತವೇ ಪರಮತತ್ತ್ವವೆಂದರು ; ಭೇದವನ್ನು ಪ್ರತಿಪಾದಿಸುವ ಶ್ರುತಿವಾಕ್ಯಗಳಿಗೇ ಮನ್ನಣೆ ನೀಡಿದ ಇನ್ನು ಕೆಲವರು ದ್ವೈತವೇ ಪರಮತತ್ತ್ವವೆಂದರು.

ತತ್ತ್ವವನ್ನು ಪ್ರತಿಪಾದಿಸಲು ಹೊರಟಿರುವ ಪರಮ ಪ್ರಮಾಣವಾದ ಉಪನಿಷತ್ತಿನ ವಾಕ್ಯಗಳಲ್ಲಿ ಎಲ್ಲಕ್ಕೂ ಸ್ಥಾನವಿರಬೇಕೇ ಹೊರತು ಕೆಲವು ಮುಖ್ಯ, ಕೆಲವು ಗೌಣ ಎಂದು ಹೇಳುವುದು ಯುಕ್ತವಲ್ಲ. ವಿರೋಧವಿರುವಂತೆ ತೋರುವ ವಾಕ್ಯಗಳಿದ್ದರೂ, ಒಂದಕ್ಕೊಂದು ವಿರುದ್ಧವಾಗಿರಲು ಸಾಧ್ಯವಿಲ್ಲ. ಈ ಭೇದಾಭೇಧ ವಾಕ್ಯಗಳಲ್ಲಿ ಸಮನ್ವಯ—ಸಾಮಂಜಸ್ಯ ತೋರಿಸುವ ಸಲುವಾಗಿಯೇ ಘಟಕ ಶ್ರುತಿ ವಾಕ್ಯಗಳಿವೆ. ಈ ಘಟಕ ಶ್ರುತಿವಾಕ್ಯಗಳ ಸಹಾಯದಿಂದ, ಭೇದಪರ ಹಾಗೂ ಅಭೇದಪರ ವಾಕ್ಯಗಳಿಗೆ ವಿರೋಧವಿಲ್ಲದಂತೆ ಸಾಮರಸ್ಯ–ಐಕಮತ್ಯವನ್ನು ಕಲ್ಪಿಸಿ, ಉಪನಿಷತ್ತಿನ ಎಲ್ಲ ವಾಕ್ಯಗಳಿಗೂ ಮುಖ್ಯ ಸ್ಥಾನವನ್ನೇ ಕೊಟ್ಟು ಪರಮಪ್ರಾಮಾಣ್ಯ ವನ್ನು ಉಳಿಸಿಕೊಳ್ಳಬೇಕು.

ವಿಚಿತ್ರವಾದ ಚೇತನಾಚೇತನ ಜಗದ್ರೂಪವುಳ್ಳ ಹಾಗೂ ನಾನು ಬಹುವಾಗು ವೆನು ಎಂಬ ಈಕ್ಷಣ ಶಕ್ತಿಯುಳ್ಳ ಪುರುಷೋತ್ತಮನೇ ಜಿಜ್ಞಾಸೆಗೆ ಅರ್ಹನು. ನಿಖಿಲ ದೋಷರಹಿತ, ನಿರತಿಶಯಾನಂದ ಆದ ಪರಬ್ರಹ್ಮನು, ಪ್ರಕೃತಿ ಸಂಬಂಧ ದಿಂದ ನಾನಾ ವಿಧವಾದ ಅನಂತ ದು:ಖಸಾಗರದಲ್ಲಿ ಮುಳುಗಿರುವ ಕರ್ಮವಶ್ಯನಾದ ಜೀವನಿಗಿಂತ ಭಿನ್ನನು. ಪರಮಾತ್ಮನಿಗಿಂತ ಭಿನ್ನವಾದ ಚೇತನ–ಅಚೇತನ ವಸ್ತು ಸಮೂಹವೆಲ್ಲವೂ ಅವನ ಶರೀರವಾಗಿರುವುದರಿಂದ ಅವನು ಉಪಾಧಿರಹಿತನಾಗಿ ಶರೀರಾತ್ಮನು ಆಗಿದ್ದಾನೆ. ಆದುದರಿಂದ ಪರಬ್ರಹ್ಮನ ವಿಷಯವಾಗಿ ಪ್ರವೃತ್ತವಾದ ಶಾಸ್ತ್ರವು ಶಾರೀರಕ ಎನಿಸಿದೆ. ಪರಮಾತ್ಮನನ್ನು ಅವನ ಸ್ವಸ್ವರೂಪದಲ್ಲಿ, ಜೀವ ವರ್ಗವನ್ನು ಹಾಗೂ ಭೋಗ್ಯ ಭೋಗೋಪಕರಣಗಳನ್ನು ಶರೀರವಾಗಿ ಪಡೆದಿರುವ ನೆಂದು, ಅನುಸಂಧಾನ ಅಥವಾ ಉಪಾಸನೆ ಮಾಡಬಹುದು. ಸಮಸ್ತ ಜಗತ್ತು

ಪರಬ್ರಹ್ಮನಿಗೆ ಶರೀರವಾಗಿ ಇರುವುದರಿಂದಲೂ, ಅವನು ಅದಕ್ಕೆ ಆತ್ಮನಾಗಿ ಇರುವುದರಿಂದಲೂ, ಈ ಜಗತ್ತೆಲ್ಲವೂ ಪರಬ್ರಹ್ಮನೇ ಆಗಿದೆ. ಜೀವನು ಉಪಾಸಕನು, ಪರಬ್ರಹ್ಮನು ಉಪಾಸ್ಯನು, ಎಂಬುದಾಗಿ ಸ್ಮೃತಿಗಳು ತಿಳಿಸುತ್ತವೆ.

ಪಾಪರಹಿತನಾದ ಪರಮಾತ್ಮನಿಗೆ ಕರ್ಮವಶತ್ವವು ಸಂಭವಿಸುವುದಿಲ್ಲ. ಜೀವಿಯ ಸ್ವರೂಪವು ಅನಾದಿಕರ್ಮರೂಪವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟಿದೆ. ಈ ಅವಿದ್ಯೆಯು ನಾಶವಾದಾಗಲೇ ಜೀವನಿಗೆ ಸ್ವಾಭಾವಿಕವಾದ ಪರಮಾತ್ಮಾನುಭವ ಎಂಬ ಮೋಕ್ಷವು ಸಿದ್ಧಿಸುತ್ತದೆ. ಸರ್ವಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವವನು ಪರಮಾತ್ಮನೇ .ಜೀವನು ಪರಮಾತ್ಮನಿಂದ ನಿಯಮ್ಯನು.

ಉಪಾಸಕನ ಅಭಿವ್ಯಕ್ತಿಗಾಗಿ ಅಥವಾ ಬುದ್ಧಿಯ ಸೌಕರ್ಯಕ್ಕಾಗಿ ಅಪರಿಚ್ಛಿನ್ನನಾದ ಪರಮಾತ್ಮನಿಗೆ ತಲೆ, ಕಣ್ಣು, ಹೃದಯ, ಪಾದ ಆದಿ ಅವಯವಗಳನ್ನು ಕಲ್ಪಿಸಿ, ಪರಿಚ್ಛಿನ್ನ ರೂಪವನ್ನು ಹೇಳಿದೆ. ಕರ್ಮಫಲವನ್ನು ಭುಜಿಸದಿರುವ ಪರಬ್ರಹ್ಮನೇ ಸರ್ವಾಧಾರ, ಪರಮಕಾರಣ, ಭೂಮ ವಿಶಿಷ್ಟ ಆಗಿದ್ದಾನೆ. ಅವನೇ ಶಾಸನ, ಆಜ್ಞೆ ಮಾಡುವ ಅಕ್ಷರನು. ಅವನೇ ದಹರಾಕಾಶನು. ಮುಕ್ತಾವಸ್ಥೆಯಲ್ಲಿ ಪರಬ್ರಹ್ಮನೊಂದಿಗೆ ಪರಮ ಸಾಮ್ಯವನ್ನು ಹೊಂದಿದ ಜೀವರುಗಳು ಸೃಷ್ಟಿಯ ಕಾಲದಲ್ಲಿ ಹುಟ್ಟುವುದಿಲ್ಲ, ಪ್ರಲಯ ಕಾಲದಲ್ಲಿ ದುಃಖಿಸುವುದಿಲ್ಲ.

ಉಪಾಸಕರ ಅಂಗುಷ್ಠ ಪ್ರಮಾಣದ ಹೃದಯದಲ್ಲಿ, ಶರೀರದ ಮಧ್ಯದಲ್ಲಿ ಉಪಾಸನೆಗಾಗಿ ಇರುವ ಪರಮಾತ್ಮನು ಅಂಗುಷ್ಠ ಮಾತ್ರನೆನಿಸಿದ್ದಾನೆ. ಆದಿತ್ಯ, ಚಕ್ಷುಸ್ಸುಗಳಲ್ಲಿ ಅಂತರ್ಯಾಮಿಯಾಗಿರುವವನು, ಆಕಾಶ, ಪ್ರಾಣ, ಶರೀರಗಳಲ್ಲಿರುವ ಜ್ಯೋತಿ, ಎಲ್ಲ ಬ್ರಹ್ಮನೇ. ಬ್ರಹ್ಮನನ್ನು ಹೃದಯದಲ್ಲಿ ಧ್ಯಾನಿಸಲು ಸಾಧ್ಯವಿದೆ. ಆತನನ್ನು ಪಂಚಭೂತ ಹಾಗೂ ಪ್ರತಿಮೆಗಳ ಮೂಲಕವೂ ಪೂಜಿಸಬಹುದು.

ಬ್ರಹ್ಮಸ್ವರೂಪ, ಉಪಾಸನೆಯ ಪ್ರಕಾರಗಳು, ಉಪಾಸನೆಯ ಅಂಗಗಳಾದ ಅಧ್ಯಯನ, ಯಜ್ಞಾದಿಗಳು, ಇವುಗಳನ್ನು ಅರಿಯದ ಅಸಮರ್ಥರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಶ್ರುತಿ–ಸ್ಮೃತಿಗಳು ತಿಳಿಸುತ್ತವೆ. ಶ್ರವಣ ಮಾಡಲಾರದವನಿಗೆ ಅದರ ಅಧ್ಯಯನ, ಅರ್ಥಜ್ಞಾನ. ಅನುಷ್ಠಾನಗಳು ಸಂಭವಿಸುವುದಿಲ್ಲ.

ಕಾರ್ಯಾನುಗುಣವಾಗಿ ಪರಿಣಮಿಸುವಂತೆ ಮಾಡುವುದರಿಂದ ನಿಮಿತ್ತ, ಪ್ರಪಂಚರೂಪವಾಗಿ ಪರಿಣಮಿಸುವುದರಿಂದ ಉಪಾದಾನ, ಆಗಿ, ಬ್ರಹ್ಮವು ಜಗತ್ತಿಗೆ ನಿಮಿತ್ತ ಕಾರಣ, ಉಪಾದಾನಕಾರಣ ಎರಡೂ ಆಗಿದೆ. ಹೀಗೆ ವಿಶೇಷ್ಯವಾದ ಬ್ರಹ್ಮ ರೂಪಾಂಶದಿಂದ ನಿಮಿತ್ತತ್ವವೂ, ವಿಶೇಷಣವಾದ ಪ್ರಕೃತ್ಯಂಶದಿಂದ ಪರಿಣಾಮವನ್ನು ಹೊಂದುವುದರ ಮೂಲಕ ಉಪಾದಾನತ್ವವೂ, ಸಿದ್ಧವಾಗುತ್ತದೆ. ಪರಬ್ರಹ್ಮನೇ ಜಗತ್ಕಾರಣ (ಕರ್ತೃ) ಹಾಗೂ ಜಗತ್ತು (ಕರ್ಮ) ಆಗಿದ್ದಾನೆ. ಬ್ರಹ್ಮ ಕಾರ್ಯವಾದ ಜಗತ್ತು ಕಾರಣನಾದ ಬ್ರಹ್ಮನಿಗಿಂತ ಬೇರೆ ಅಲ್ಲ. ಚಿದಚಿದ್ವಸ್ತು ಶರೀರಕನಾದ ಪರಬ್ರಹ್ಮನು ಉಪಾದಾನ ಕಾರಣನಾಗಿದ್ದರೂ, ಚಿದಚಿದ್ವಸ್ತುಗಳು

ವಿಕಾರ, ನಾಶವನ್ನು ಹೊಂದುತ್ತವೆಯೇ ಹೊರತು, ಬ್ರಹ್ಮವು ನಿರ್ವಿಕಾರ ಹಾಗೂ ನಾಶವಿಲ್ಲದ್ದು ಆಗಿರುತ್ತದೆ.

ಸೃಷ್ಟಿಮಾಡಲು ಬ್ರಹ್ಮನಿಗೆ ಬಾಹ್ಯಸಾಧನಗಳ ಅವಶ್ಯಕತೆಯಿಲ್ಲ. ಆತನು ಹಾಲಿನಂತೆ ಪರಿಣಾಮಹೊಂದಲು ಶಕ್ತನಾಗಿದ್ದಾನೆ. ಸೃಷ್ಟಿಗೆ ಅವಶ್ಯವಾದ ಧರ್ಮಗಳೆಲ್ಲ ಅವನಲ್ಲಿ ಹೊಂದುತ್ತವೆ. ಪ್ರಾಣಿಗಳ ಧರ್ಮ-ಅಧರ್ಮ, ಪುಣ್ಯ-ಪಾಪ, ಇವುಗಳಿಗೆ ಅನುಸಾರವಾಗಿಯೇ ಸೃಷ್ಟಿ ಉಂಟಾಗುತ್ತದೆ.

## ಎರಡನೆಯ ಅಧ್ಯಾಯ

ಚೇತನ–ಅಚೇತನ ವಸ್ತುಗಳಿಗಿಂತ ಭಿನ್ನ, ಸಮಸ್ತ ದೋಷರಹಿತ, ನಿಖಿಲ ಕಲ್ಯಾಣಗುಣ ಪರಿಪೂರ್ಣ, ಜಗದೇಕಕಾರಣ, ಸರ್ವಾಂತರಾತ್ಮಭೂತ ಆದ ಪರ ಬ್ರಹ್ಮನೇ ವೇದಾಂತವೇದ್ಯನೆಂಬ ಅಭಿಪ್ರಾಯವನ್ನು ಖಂಡಿಸಲು ಯಾವ ವಾದಗಳಿಂದಲೂ ಸಾಧ್ಯವಿಲ್ಲ ಎಂಬುದು ಈ ಅಧ್ಯಾಯದಲ್ಲಿ ತೋರಿಸಲ್ಪಟ್ಟಿದೆ.

ಪರಮಪುರುಷನ ಆರಾಧನೆಯೇ ಸಮಸ್ತ ಕರ್ಮಗಳ ಉದ್ದೇಶ ಎಂಬುದನ್ನು ಸ್ಮೃತಿಗಳು ವಿಧಿಸಿವೆ. ಪರಬ್ರಹ್ಮನಿಂದ ವಿಲಕ್ಷಣವಾದ ಜಗತ್ತು ಅವನ ಕಾರ್ಯವೇ ಆಗಿದೆ.

ಪರಮಾತ್ಮನು ಕರ್ಮರಹಿತನಾಗಿರುವುದರಿಂದ ಅವನಿಗೆ ಭೋಗಕ್ಕಾಗಿ ಶರೀರದ ಆವಶ್ಯಕತೆ ಇರುವುದಿಲ್ಲ. ಶರೀರಗತವಾದ ದೋಷಗಳು ಪರಬ್ರಹ್ಮನಿಗೆ ಇರುವುದಿಲ್ಲ. ಶರೀರಕ್ಕೆ ಸಂಬಂಧಿಸಿದ ಬಾಲ್ಯ, ಯೌವನ, ವಾರ್ಧಿಕ್ಯಗಳು ಆತ್ಮನಿಗೂ, ಆತ್ಮಗತವಾದ ಜ್ಞಾನಸುಖಿಗಳು ಶರೀರಕ್ಕೂ ಸಂಬಂಧಿಸಿರುವುದಿಲ್ಲ. ಚಿದಚಿದ್ರೂಪವಾದ ಜಗತ್ತು ಸ್ಥೂಲ, ಸೂಕ್ಷ್ಮ ಅವಸ್ಥೆಗಳೆರಡರಲ್ಲಿಯೂ ಶರೀರಭಾವದಿಂದ ಇರುತ್ತದೆ.

ಸಂಕಲ್ಪ ಮಾತ್ರದಿಂದ ಪರಮಾತ್ಮನು ತನಗೆ ಪ್ರಿಯವಾದ ಅನೇಕ ಶರೀರಗಳನ್ನು ಪರಿಗ್ರಹಿಸಬಲ್ಲ. ಯಾವ ಜನ್ಮವನ್ನು ತಾಳಿದರೂ ಅವನ ಅಸಾಧಾರಣ ಸ್ವಭಾವಕ್ಕೆ ಚ್ಯುತಿಯಿರುವುದಿಲ್ಲ, ಅವನ ಸರ್ವಜ್ಞತೆ, ಸರ್ವಶಕ್ತತೆಗಳಿಗೆ ಹಾನಿಯಾಗುವುದಿಲ್ಲ, ಅವನ ಮಹತ್ವಕ್ಕೆ ಕುಂದುಂಟಾಗುವುದಿಲ್ಲ. ಆದಕಾರಣ ಸ್ವ ಇಚ್ಛೆಯಿಂದ ಪರಮಾತ್ಮನು ಶರೀರವುಳ್ಳವನಾಗುವುದು ಅನುಚಿತವಾಗಲಾರದು.

ಭಗವಂತನ ದಿವ್ಯಮಂಗಳ ಮೂರ್ತಿಯನ್ನು ಕಾಣದೆ ಬದುಕಲಾರೆ ಎಂಬ ಸ್ಥಿತಿಯನ್ನು ತಳೆದು, ಅವನ ದರ್ಶನಕ್ಕಾಗಿ ಹಾತೊರೆಯುತ್ತಿರುವ ಚೇತನರಿಗೆ ಅವರ ಕೋರಿಕೆಯನ್ನು ಈಡೇರಿಸಲು, ಅವನ ಉಪಾಸಕರಿಗೆ ತೊಂದರೆ ಹಿಂಸೆಗಳನ್ನುಂಟು ಮಾಡುವ ದುಷ್ಕೃತ್ಯದಲ್ಲಿ ತೊಡಗಿದವರನ್ನು ನಾಶಗೊಳಿಸಲು, ಅವನಲ್ಲಿ ಗಾಢವಾದ ಭಕ್ತಿ ಭಾವವನ್ನುಂಟುಮಾಡುವ ಧರ್ಮವನ್ನು ವೃದ್ಧಿಯಲ್ಲಿ ಸ್ಥಿರಗೊಳಿಸಲು,

ಭಗವಂತನು ಶರೀರವನ್ನು ಧರಿಸುತ್ತಾನೆ. ಆದುದರಿಂದ ಅವನ ಶರೀರಕ್ಕೆ ಪ್ರಯೋಜನ ವುಂಟು. ಕಾರಾಗೃಹದಲ್ಲಿ ಅಪರಾಧಿಗಳಿಗೆ ಕಷ್ಟವಾದರೂ, ಅವರನ್ನು ನೋಡಿ ಕೊಳ್ಳುವ ಅಧಿಕಾರಿಗಳಿಗೆ ಕ್ಲೇಶವಿರುವುದಿಲ್ಲ. ಹಾಗೆಯೇ ಕರ್ಮಾತೀತನಾದ ಪರ ಮಾತ್ಮನು ಸಂಸಾರಿಗಳನ್ನು ರಕ್ಷಿಸಲು ಸ್ವ‍ಇಚ್ಛೆಯಿಂದ ಶರೀರವನ್ನು ಪರಿಗ್ರಹಿಸುವುದ ರಿಂದ, ಆ ಶರೀರವು ಭಗವಂತನ ದುಃಖಕ್ಕೆ ಕಾರಣ, ಸ್ವಾತಂತ್ರ್ಯಕ್ಕೆ ಕೊರತೆ, ಆಗಲಾರದು. ಆದಕಾರಣ ಪರಮಾತ್ಮನಿಗೆ ಶರೀರವಿರುವುದು ಅಸಮಂಜಸವಾಗು ವುದಿಲ್ಲ.

ಯಾವ ವಸ್ತುವು ತಾನಿರುವವರೆಗೂ ಚೇತನದಿಂದ ಸರ್ವಪ್ರಕಾರದಲ್ಲೂ ಧರಿ ಸಲ್ಪಟ್ಟು, ನಿಯಮಿಸಲ್ಪಟ್ಟು, ತನ್ನ ಪ್ರಯೋಜನಕ್ಕಾಗಿ ಸ್ವ‍ಇಚ್ಛೆಯಿಂದ ಉಪಯೋಗಿ ಸಲ್ಪಟ್ಟು, ಇರುವುದೋ ಅದು ಆ ಚೇತನನಿಗೆ ಶರೀರ. ಒಂದು ವಸ್ತುವನ್ನು ಯಾವುದು ಧರಿಸಿ, ನಿಯಮಿಸಿ, ಉಪಯೋಗಿಸಿಕೊಳ್ಳುವುದೋ ಅದು ಆ ವಸ್ತುವಿಗೆ ಆತ್ಮ. ಜೀವರಿಗೆ ಇರುವಂತೆ ಪರಮಾತ್ಮನಿಗೆ ಕರ್ಮನಿಮಿತ್ತವಾದ, ಪ್ರಾಕೃತವಾದ, ಅಮಂಗಳವಾದ ಶರೀರವಿಲ್ಲ. ಆತನು ತನ್ನ ಸಂಕಲ್ಪ ಮಾತ್ರದಿಂದ ಏರ್ಪಡಿಸಿಕೊಳ್ಳುವ ಅಪ್ರಾಕೃತ, ದಿವ್ಯಮಂಗಳ ಶರೀರವು ಕರ್ಮಫಲವನ್ನು ಅನುಭವಿಸಬೇಕಾದುದಿಲ್ಲ.

ಅತೀಂದ್ರಿಯ ವಿಷಯಗಳಲ್ಲಿ ಶಾಸ್ತ್ರವೇ ಪ್ರಮಾಣ, ತರ್ಕವಲ್ಲ. ಕಾರ್ಯ-ಕಾರಣಗಳಲ್ಲಿ, ಶಬ್ದ-ಭಾವನೆಗಳಲ್ಲಿ, ಭೇದವು ಕಂಡು ಬರುವುದು ಅವಸ್ಥೆಯಿಂದಲೇ ಹೊರತು, ವಸ್ತುದೃಷ್ಟಿಯಿಂದ ಅಲ್ಲ.

ಒಬ್ಬನೇ ಆದ ಪರಬ್ರಹ್ಮನು ವಿಚಿತ್ರ ಚರಾಚರಗಳಿಂದ ಕೂಡಿದ ಜಗತ್ತು ಆಗುತ್ತಾನೆ. ಅನಂತ ದುಃಖಕ್ಕೆ ಈಡಾಗಬಹುದಾದ ಜೀವನಿಗೂ, ನಿರತಿಶಯಾನಂದ ಸ್ವರೂಪ, ಸತ್ಯಸಂಕಲ್ಪ ಆದ ಪರಬ್ರಹ್ಮನಿಗೂ ಐಕ್ಯವು ಕೂಡುವುದಿಲ್ಲ. ಸ್ವಾರ್ಥ-ಪರಾರ್ಥಗಳ ಅಪೇಕ್ಷೆ ಇಲ್ಲದೆ ಬ್ರಹ್ಮನಿಗೆ ಕಾರಣತ್ವವು ಸಂಭವಿಸುತ್ತದೆ. ಸಾವಿರಾರು ಅದೃಷ್ಟ ಶಕ್ತಿಗಳನ್ನು ಹೊಂದಿರುವ ಪುರುಷೋತ್ತಮನು ತನ್ನ ಸಂಕಲ್ಪ ಮಾತ್ರ ದಿಂದಲೇ ಸಮಸ್ತ ಜಗತ್ತನ್ನು ಸೃಷ್ಟಿಸುತ್ತಾನೆ. ಪರಿಪೂರ್ಣ, ಪೂರ್ಣಕಾಮ ಆದ ಪರಬ್ರಹ್ಮನಿಗೆ ಕೇವಲ ಲೀಲೆಯನ್ನು ಬಿಟ್ಟರೆ, ಸ್ವಸಂಕಲ್ಪಾಧೀನವಾದ ಚಿದಚಿದ್ವಸ್ತು ಗಳನ್ನು ಒಳಗೊಂಡಿರುವ ಈ ಜಗತ್ತಿನ ಸೃಷ್ಟಿಗೆ ಬೇರೆ ಪ್ರಯೋಜನವಿರುವುದಿಲ್ಲ.

ಜನನ ಮರಣಗಳು ಶರೀರಕ್ಕೆ ಉಂಟಾದರೂ ಆತ್ಮನಿಗೆ ಇರುವುದಿಲ್ಲ. ಜೀವಾತ್ಮರು ಮೂರುವಿಧ. ಅವಿದ್ಯೆ, ಸ್ವಾರ್ಥಗಳಿಂದ ಈ ಸಂಸಾರದಲ್ಲಿ ಹುಟ್ಟಿ ಕರ್ಮದ ಫಲವನ್ನು ಅನುಭವಿಸುತ್ತ ಪ್ರಕೃತಿ ಸಂಬಂಧದಲ್ಲಿರುವ ಜೀವರು ಬದ್ಧರು. ಇವರಲ್ಲಿ ಕೆಲವರು ಭೋಗಾಪೇಕ್ಷೆಯುಳ್ಳವರು, ಇನ್ನು ಕೆಲವರು ಮೋಕ್ಷಾಪೇಕ್ಷೆ ಯುಳ್ಳವರು ; ಕರ್ಮಜ್ಞಾನ ಭಕ್ತಿಗಳಿಂದ ಪ್ರಕೃತಿ ಅಥವಾ ಸಂಸಾರಬಂಧನದಿಂದ ಬಿಡುಗಡೆ ಹೊಂದಿದವರು ಮುಕ್ತರು ; ಸಂಸಾರದ ಸೋಂಕೇ ಇಲ್ಲದೆ ವೈಕುಂಠದಲ್ಲಿ ಆನಂದದಿಂದ ಇರುವವರು ನಿತ್ಯರು. ಸಂಸಾರಿಗಳೆಲ್ಲ ಮೋಕ್ಷಕ್ಕೆ ಅರ್ಹರು.

ಕರ್ಮಕೃತವಾದ ಶರೀರಭೇದದ ಹೊರತು ಸ್ವರೂಪದಲ್ಲಿ ಸಕಲ ಜೀವಾತ್ಮರಲ್ಲಿ ಯಾವ ಭೇದವೂ ಇರುವುದಿಲ್ಲ. ಬದ್ಧ, ಮುಕ್ತ, ನಿತ್ಯ ಈ ಮೂರು ರೀತಿಯ ಜೀವರೂ ಪರಮಾತ್ಮನಿಗೆ ಅಧೀನರೇ ಆಗಿದ್ದಾರೆ.

ಜೀವಾತ್ಮರ ವೈಷಮ್ಯಕ್ಕೆ ಅವರವರ ಕರ್ಮವೇ ಕಾರಣ. ಸೃಷ್ಟಿ ಕರ್ಮದಲ್ಲಿ ಈಶ್ವರನು ನಿಮಿತ್ತ ಮಾತ್ರನು. ಜೀವಾತ್ಮರ ಶಕ್ತಿಗಳೇ ಅವರ ವೈವಿಧ್ಯಕ್ಕೆ ಕಾರಣ. ಅವರ ಶಕ್ತಿಯೇ ಅವರನ್ನು ವಸ್ತುತ್ವಕ್ಕೆ ಒಯ್ಯುತ್ತದೆ. ಜೀವಾತ್ಮರ ಕರ್ಮಕ್ಕನು ಗುಣವಾಗಿ ಪರಬ್ರಹ್ಮನು ವಿಚಿತ್ರ ಸೃಷ್ಟಿಯನ್ನು ಮಾಡುತ್ತಾನೆ.

ಕಾರಣತ್ವಕ್ಕೆ ಬೇಕಾದ ಧರ್ಮಗಳೆಲ್ಲವೂ ಪರಬ್ರಹ್ಮನಲ್ಲಿಯೇ ಉಪಪನ್ನವಾಗುತ್ತವೆ. ಈಶ್ವರನಿಗೆ ದೃಷ್ಟವಾದ ಕರಣಗಳಿಲ್ಲದಿದ್ದರೂ ಅಸಾಧಾರಣ ಪರಿಣಾಮ ಸಾಧ್ಯವಾಗುತ್ತದೆ. ಈಶ್ವರನ ಅಧಿಷ್ಠಿತತ್ವವಿದ್ದರೆ, ಅವನ ಸತ್ಯಸಂಕಲ್ಪತ್ವದಿಂದ ಎಲ್ಲದರ ಸೃಷ್ಟಿ-ನಾಶಗಳೆಂಬ ಅವಸ್ಥೆಗಳು ಉಂಟಾಗುತ್ತವೆ.

ಚೈತನ್ಯ ಮಾತ್ರ, ನಿಷ್ಕ್ರಿಯ, ನಿರ್ವಿಕಾರ, ನಿರ್ಮಲ, ನಿತ್ಯಮುಕ್ತ ಆದ ಪುರುಷನಿಗೆ, ಪ್ರಕೃತಿಜ್ಞಾನ ರೂಪವಾದ ಭೋಗ, ಪ್ರಕೃತಿ ವಿಯೋಗ ರೂಪವಾದ ಮೋಕ್ಷ, ಎರಡೂ ಸಂಭವಿಸುವುದಿಲ್ಲ.

ಆತ್ಮನು ದೇಹದ ಏಕದೇಶದಲ್ಲಿದ್ದರೂ, ಸಕಲದೇಹದಲ್ಲಿರುವ ವೇದನೆಗಳನ್ನೆಲ್ಲ ಅನುಭವಿಸುತ್ತಾನೆ. ಹೃದಯದಲ್ಲಿರುವ ಆತ್ಮನ ಜ್ಞಾನವು ದೇಹವನ್ನೆಲ್ಲ ವ್ಯಾಪಿಸಿ ಕೊಂಡಿರುತ್ತದೆ. ಜ್ಞಾನವು ಆತ್ಮನ ಧರ್ಮ. ಜ್ಞಾತೃತ್ವವೇ ಜೀವಾತ್ಮನ ಸ್ವರೂಪ. ಈ ಆತ್ಮನು ಅಣು ಪರಿಮಾಣವುಳ್ಳವನು. ಆತ್ಮನಿಗೆ ಪ್ರಾಪಂಚಿಕ ವಿಷಯ ಜ್ಞಾನವು ಶರೀರವಿದ್ದಾಗಲೇ ಉಂಟಾಗುತ್ತದೆ. ಆತ್ಮನೇ ಕರ್ತೃ. ಜೀವನ ಕರ್ತೃತ್ವ, ಪ್ರವರ್ತನೆ, ಪರಮಾತ್ಮನಿಂದಲೇ ಉಂಟಾಗಿದೆ. ಜೀವನು ಬ್ರಹ್ಮಾಂಶ. ತನ್ನ ಅಂಶವಾದ ಜೀವನಿಗಿಂತ ಅಂಶಿಯಾದ ಪರಮಾತ್ಮನು ಬೇರೆಯವನಾಗಿರುತ್ತಾನೆ. ಜೀವರೆಲ್ಲ ಬ್ರಹ್ಮಾಂಶರಾಗಿದ್ದರೂ, ಪರಸ್ಪರ ಭಿನ್ನರಾಗಿ, ಶುಚಿ-ಅಶುಚಿ ದೇಹದ ಸಂಬಂಧದಿಂದ ವಿಧಿ-ನಿಷೇಧ, ಗ್ರಾಹ್ಯ-ತ್ಯಾಜ್ಯಗಳು ಸಾಧ್ಯವಾಗುತ್ತವೆ.

ಭೂತ-ಇಂದ್ರಿಯಗಳ ಸಮಷ್ಟಿಸೃಷ್ಟಿ ಪರಮಾತ್ಮನಿಂದಲೇ ಆಗುತ್ತದೆ. ಸೃಷ್ಟಿಗೆ ಮುನ್ನ ಪ್ರಾಣಗಳು ಇದ್ದವೆಂದು ಹೇಳಲಾಗುವುದಿಲ್ಲ. ಪಂಚಪ್ರಕಾರವುಳ್ಳ ಪ್ರಾಣವು ಶರೀರೇಂದ್ರಿಯಗಳ ಧಾರಣದಿಂದ ಕರಣವಾಗಿ ಜೀವನಿಗೆ ಉಪಕಾರ ಮಾಡುತ್ತದೆ.

## ಮೂರನೆಯ ಅಧ್ಯಾಯ

ಶರೀರವನ್ನು ತ್ಯಜಿಸಿದಾಗ ಜೀವನು ಮತ್ತೆ ದೇಹಪ್ರಾಪ್ತಿಗೆ ಬೇಕಾದ ಭೂತ ಸೂಕ್ಷ್ಮಗಳೊಂದಿಗೆ ಸ್ಥೂಲ ದೇಹವನ್ನು ಬಿಟ್ಟು ಹೋಗುತ್ತಾನೆ.

ಆಚಾರವಂತನಿಗೆ ಪುಣ್ಯಕರ್ಮದಲ್ಲಿ ಅಧಿಕಾರವಿರುವುದರಿಂದ ಆಚಾರವು ವ್ಯರ್ಥವಾಗುವುದಿಲ್ಲ.

ವಿಹಿತ ಕರ್ಮವನ್ನು ಮಾಡದೆ, ನಿಷಿದ್ಧ ಕರ್ಮವನ್ನು ಮಾಡುವ ಅನಿಷ್ಟಾಧಿಕಾರಿಗಳಿಗೆ ವಿದ್ಯೆಯಿಲ್ಲದುದರಿಂದ ದೇವಯಾನದಲ್ಲಿ, ದಾನಾದಿ ಪುಣ್ಯ ಕರ್ಮಗಳನ್ನು ಮಾಡದುದರಿಂದ ಪಿತೃಯಾನದಲ್ಲಿ, ಗಮನ ಇರುವುದಿಲ್ಲ. ಜೀವಾತ್ಮರು ಮನುಷ್ಯ ಭಾವವನ್ನು ಹೊಂದುವುದು ಸುಖದುಃಖಗಳನ್ನು ಭೋಗಿಸುವುದಕ್ಕಾಗಿ. ಅತಿಶಯವಾದ ಅಭ್ಯುದಯಕ್ಕೆ ಕಾರಣವಾದ ಕರ್ಮವು, ಸ್ವಲ್ಪ ದುಃಖವನ್ನುಂಟು ಮಾಡುವುದಾದರೂ, ರಕ್ಷಣೆಯೇ ಹೊರತು ಹಿಂಸೆಯಲ್ಲ. ಯೋನಿಯನ್ನು ಪಡೆದ ನಂತರವೇ ಶರೀರ ಪ್ರಾಪ್ತಿಯಾಗಿ ಅದರಲ್ಲಿ ಸುಖದುಃಖಗಳ ಉಪಭೋಗವಾಗುತ್ತದೆ.

ವಾಕ್ಯಾರ್ಥ ಜ್ಞಾನ ಮಾತ್ರದಿಂದ ಬ್ರಹ್ಮ ಸ್ವರೂಪದ ಬಗ್ಗೆ ಭೇದ, ಅವಿದ್ಯೆ ಹೋಗಿ ಮೋಕ್ಷ ಸಿಗಲಾರದು. ಬ್ರಹ್ಮೋಪಾಸನಾರೂಪವಾದ ಜ್ಞಾನವೇ ಮೋಕ್ಷಕ್ಕೆ ಸಾಧನ. ಮತ್ತೆ ಮತ್ತೆ ಮಾಡುವ ಉಪಾಸನೆಯೇ ಸ್ಮರಣೆ, ಭಕ್ತಿ, ಧ್ರುವಾನುಸ್ಮೃತಿ ಎನಿಸುತ್ತದೆ. ಈ ಧ್ರುವಾನುಸ್ಮೃತಿಗೆ ಶರೀರ ಇರುವ ತನಕ ಯಜ್ಞಾದಿ ಕರ್ಮಗಳು, ವರ್ಣಾಶ್ರಮವಿಹಿತ ಕರ್ಮಗಳ ಅನುಷ್ಠಾನ ಅವಶ್ಯಕ, ಜ್ಞಾನೋತ್ಪತ್ತಿಗೆ ಪ್ರತಿಬಂಧಕಗಳಾದ ಪುಣ್ಯ ಪಾಪ ಕರ್ಮಗಳನ್ನು ಕಳೆದು ಶುದ್ಧನಾಗಲು, ಫಲಾಭಿ ಸಂಧಿಯಿಲ್ಲದೆ, ಭಗವದಾರಾಧನೆಯ ಭಾವದಿಂದ, ಶಾಸ್ತ್ರೀಯ ಕರ್ಮಗಳನ್ನು, ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವ ಕ್ರಮದಲ್ಲಿ ಅನುಷ್ಠಿಸಬೇಕು.

ಸಾಮಾನ್ಯ ಜ್ಞಾನವಿದ್ದರೂ ಭಗವದನುಗ್ರಹವಿಲ್ಲದಿದ್ದರೆ ವೇದಾಂತ ಶಾಸ್ತ್ರದ ನಿಜವಾದ ಅರ್ಥವನ್ನು ಗ್ರಹಿಸಲು ಸಾಧ್ಯವಿಲ್ಲ. ಸಮ್ಯಕ್ ಪ್ರೀತಿಯಲ್ಲಿ ಅಂದರೆ ಭಕ್ತಿರೂಪಾಪನ್ನವಾದ ಧ್ಯಾನದಲ್ಲಿ ಮಾತ್ರ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಪರಮಾತ್ಮನು ಯಾವನನ್ನು ಅರಸಿ, ಆರಿಸುತ್ತಾನೋ, ಆಯ್ಕೆಗೊಂಡ ಅವನಿಂದಲೇ ಪರಮಾತ್ಮನು ಲಭ್ಯನು. ಈ ಉಪಾಸಕನಿಗೆ ಪರಮಾತ್ಮನು ತನ್ನ ಸ್ವರೂಪವನ್ನು ಪ್ರಕಾಶಪಡಿಸುತ್ತಾನೆ. ಅನಂತ ಕಲ್ಯಾಣಗುಣ ವಿಶಿಷ್ಟನಾದ ಪರಬ್ರಹ್ಮನ ರೂಪ ಗುಣಗಳಲ್ಲಿ ಭೇದಗಳಿಲ್ಲ. ಬ್ರಹ್ಮನ ಪ್ರಕಾಶವು ಉಪಾಸನಾ ಕರ್ಮದ ಅಭ್ಯಾಸದಿಂದ ಸಾಕ್ಷಾತ್ಕರಿಸಲ್ಪಡುತ್ತದೆ.

ಪ್ರಪಂಚವು ಪರಬ್ರಹ್ಮನ ರೂಪ. ಬ್ರಹ್ಮನಿಗೂ ಪ್ರಪಂಚಕ್ಕೂ ಇರುವ ಸಂಬಂಧವು ಜೀವನಿಗೂ ಬ್ರಹ್ಮನಿಗೂ ಇದ್ದಂತೆ. ಜೀವ–ಪರಮಾತ್ಮರಿಗೆ ವಿಶೇಷಣ–ವಿಶೇಷ್ಯ, ಅಂಶ–ಅಂಶಿಭಾವ ಇರುತ್ತದೆ. ಚಿದಚಿದ್ವಸ್ತುಗಳ ಸೂಕ್ಷ್ಮಾವಸ್ಥೆಯಲ್ಲಿ ವಿಶಿಷ್ಟನಾದ ಬ್ರಹ್ಮನು ಅವುಗಳ ಕಾರಣನು, ಅವುಗಳ ಸ್ಥೂಲಾವಸ್ಥೆಯಲ್ಲಿ ಅವನು ಕಾರ್ಯನು. ಈ ಜಗತ್ತಿನಲ್ಲಿ ಕಂಡು ಬರುವುದು, ಕೇಳಿ ಬರುವುದು. ಎಲ್ಲವೂ ಒಳಗೆ–ಹೊರಗೆ ನಾರಾಯಣನಿಂದ ವ್ಯಾಪ್ತವಾಗಿದೆ. ಚರಾಚರಾತ್ಮಕ ಜಗತ್ತನ್ನು ಸೃಷ್ಟಿಸಿ, ಪಾಲಿಸಿ, ಸಂಹರಿಸುವ ಕಾರಣ ಭೂತವಸ್ತು ಶ್ರೀಪತಿಯಾದ ನಾರಾಯಣ.

ಸ್ವರೂಪ–ಸ್ವಭಾವಗಳಿಂದ ಬೃಹತ್ತಾದ ಇವನೇ ಪುರುಷೋತ್ತಮ. ಸರ್ವ ವ್ಯಾಪಿಯಾದ ನಾರಾಯಣನೇ ವಿಷ್ಣುವೆನಿಸುತ್ತಾನೆ. ಶುದ್ಧ ಜ್ಞಾನಸ್ವರೂಪನಾದ ಬ್ರಹ್ಮನಲ್ಲಿ ಅವಿದ್ಯೆ ಇರಲು ಅವಕಾಶವಿಲ್ಲ. ಪ್ರಕಾಶ ಸ್ವರೂಪವಾದ ಬ್ರಹ್ಮಕ್ಕೆ ಅವಿದ್ಯೆ ಯಿಂದ ಮರೆ, ನಾಶ ಇರುವುದಿಲ್ಲ. ಅತ್ಯಂತ ಶ್ರೇಷ್ಠ, ಕರ್ಮಕೃತರೂಪವಿಲ್ಲದವ, ಕ್ಲೇಶರಹಿತ, ಯಾವ ದೋಷ ಸಂಪರ್ಕವಿಲ್ಲದವ, ಅನಂತ ಕಲ್ಯಾಣ ಗುಣ ಪೂರ್ಣ, ಸರ್ವೇಶ್ವರ, ಬ್ರಹ್ಮವಾಚ್ಯ ಆದ ನಾರಾಯಣನ ವಿಚಾರವನ್ನೇ ಮಾಡಿದರೆ, ಉಪಾಸಿಸಿ ದರೆ, ತಾಪತ್ರಯ ಪೀಡಿತರಾದವರು, ಮೋಕ್ಷ ಅಥವಾ ಅಮೃತತ್ವವನ್ನು ಪಡೆಯು ತ್ತಾರೆ. ಯಾಗ, ದಾನ, ಹೋಮ, ಉಪಾಸನೆಗಳ ರೂಪವಾದ ಧರ್ಮವೇ ಫಲ ಕೊಡುತ್ತದೆ. ಸರ್ವಜ್ಞ, ಸರ್ವಶಕ್ತ, ಮಹೋದಾರಿ ಆದ ಪರಮಪುರುಷನು ಐಹಿಕಾ ಮುಷ್ಮಿಕ ಭೋಗ ಸಮೂಹ, ಸ್ವಸ್ವರೂಪವಾದ ಮೋಕ್ಷ, ಎರಡನ್ನೂ ಉಪಾಸಕರಿಗೆ ಕೊಡಲು ಸಮರ್ಥನಾಗಿದ್ದಾನೆ.

ದೇಹವನ್ನು ಬಿಡುವ ಕಾಲದಲ್ಲಿ ಬ್ರಹ್ಮಪ್ರಾಪ್ತಿಯೊಂದನ್ನು ಬಿಟ್ಟು ಜ್ಞಾನಿಯ ಸುಕೃತ-ದುಷ್ಕೃತಗಳು, ಅವುಗಳಿಂದಾದ ಸುಖದುಃಖ, ಎಲ್ಲವೂ ನಿಶ್ಶೇಷವಾಗಿ ಹೋಗು ತ್ತವೆ. ಜೀವನು ಸೂಕ್ಷ್ಮ ಶರೀರದೊಂದಿಗೆ ದೇವಯಾನದಲ್ಲಿ ಹೋಗುತ್ತಾನೆ. ಬ್ರಹ್ಮ ವಿದ್ಯೋಪಾಸಕರಿಗೆಲ್ಲ ಅರ್ಚಿರಾದಿ ಗತಿಯುಂಟು. ಅಸ್ಥೂಲತ್ವಾದಿ ಗುಣಗಳಿಂದ ಕೂಡಿದ ಜ್ಞಾನಾನಂದಾದಿ ಗುಣಗಳುಳ್ಳ ಪರಬ್ರಹ್ಮನನ್ನು ಎಲ್ಲ ಬ್ರಹ್ಮವಿದ್ಯೆಗಳಲ್ಲಿಯೂ ಅನುಸಂಧಾನ ಮಾಡಬೇಕು. ಸಮಸ್ತ ವಿದ್ಯೆಗಳಲ್ಲೂ ಉಪಾಸ್ಯನಾಗಿರುವ ಪರಬ್ರಹ್ಮನೇ ನಾರಾಯಣ.

ಕೆಲವು ವಿಷಯಗಳಲ್ಲಿ ಹೊರತು, ಉಳಿದ ವಿಷಯಗಳಲ್ಲಿ ಜೀವಾತ್ಮ-ಪರಮಾತ್ಮ ರಲ್ಲಿ ಅತ್ಯಂತ ಸಾಮ್ಯವಿರುತ್ತದೆ. ಪರಮಾತ್ಮ ಸಾಮ್ಯ ಪಡೆವುದೇ ಪ್ರತಿಜೀವಾತ್ಮನ ಗುರಿ, ಪರಮಪುರುಷಾರ್ಥ. ಇದರ ಪ್ರಾಪ್ತಿಗೆ ಭಗವಂತನ ಅನುಗ್ರಹವೇ ಕಾರಣ ವಾಗಿರುವುದರಿಂದ, ಅವನಲ್ಲಿ ಭಕ್ತಿ-ಪ್ರಪತ್ತಿಗಳನ್ನು ಮಾಡಬೇಕು. ಪರಮಪ್ರೇಮ ದಿಂದ ಭಗವಂತನನ್ನು ನಿರಂತರವಾಗಿ ಧ್ಯಾನಿಸುವುದೇ ಭಕ್ತಿ. ಅವನಲ್ಲಿ ಸಂಪೂರ್ಣ ವಾಗಿ ಶರಣಾಗತಿ ಮಾಡುವುದೇ ಪ್ರಪತ್ತಿ.

ಸರ್ವಬಂಧ ನಿರ್ಮುಕ್ತನಾದ ಜೀವನು ತನ್ನ ನಿಜವಾದ ಸ್ವರೂಪದ ಆವಿರ್ಭಾವ ವನ್ನು ಪಡೆದು ಪರಬ್ರಹ್ಮನ ಸಾನ್ನಿಧ್ಯವನ್ನು ಹೊಂದುವುದರಿಂದ ಸರ್ವಲೋಕಗಳಲ್ಲೂ ಸಂಚರಿಸಲು ಶಕ್ತನಾಗುತ್ತಾನೆ.

ಉಪಾಸನೆಯು ಕ್ರತುವಿಗೆ ಆವಶ್ಯಕ. ಉಪಾಸನೆಯು ಕರ್ಮಾಂಗವಾಗಿದೆ. ಉಪಾಸನಾ ರೂಪವಾದ ಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುತ್ತದೆ. ಉಪಾಸನೆಗೆ ಅನುಕೂಲವಾದ ಕರ್ಮವನ್ನು ಬದುಕಿರುವವರೆಗೆ ಮಾಡಬೇಕು. ಉಪನಿಷತ್ತುಗಳಲ್ಲಿ ಬಂದಿರುವ ಆಖ್ಯಾನ ಶ್ರುತಿಗಳೆಲ್ಲ ಉಪಾಸನಾ ವಿಧಿಗಾಗಿಯೇ ಬಂದಿವೆ.

ಯಜ್ಞಾದಿ ಕರ್ಮಗಳು ಅಂತಃಕರಣವನ್ನು ಶುದ್ಧಿ ಮಾಡುತ್ತವೆ. ಅಂತಃಕರಣ

ಶುದ್ಧಿಯಿಂದ ಜ್ಞಾನವು ಮನಸ್ಸಿನಲ್ಲಿ ಹೆಚ್ಚು ಪ್ರಕಾಶದಿಂದ ಉತ್ಪನ್ನವಾಗುತ್ತದೆ. ಉಪಾಸನೆಯಲ್ಲಿ ಸಮಸ್ತ ಆಶ್ರಮದವರಿಗೂ ಅಧಿಕಾರವಿದೆ. ಸರಳವಾದ ಬಾಲ ಸ್ವಭಾವವನ್ನು ಜ್ಞಾನಿಯಾದವನು ತನ್ನದಾಗಿಸಿಕೊಳ್ಳಬೇಕು.

## ನಾಲ್ಕನೆಯ ಅಧ್ಯಾಯ

ಪರಬ್ರಹ್ಮನನ್ನು ಚಿದಚಿದ್ವಿಲಕ್ಷಣನೆಂದೂ, ಉಪಾಸಕನ ಆತ್ಮನೆಂದೂ, ಧ್ಯಾನಿಸಬೇಕು, ಧ್ಯಾನವನ್ನು ಮತ್ತೆ ಮತ್ತೆ ಮಾಡಬೇಕು. ಧ್ಯಾನವನ್ನು ಕುಳಿತುಕೊಂಡೇ ಮಾಡಬೇಕು, ಒಂದೇ ಒಂದು ವಸ್ತುವನ್ನು ಏಕಾಗ್ರಚಿತ್ತತೆಯಿಂದ ಚಿಂತಿಸುವುದೇ ಧ್ಯಾನ. ಧ್ಯಾನವು ಸ್ಮರಣೆ, ಉಪಾಸನೆ ಎಂದು ಎರಡು ವಿಧ. ಸ್ಮರಣೆಯನ್ನು ಸರ್ವದಾ ಮಾಡಬಹುದು. ಆದರೆ ಉಪಾಸನೆಯನ್ನು ಕುಳಿತುಕೊಂಡು ಮಾಡಿದಾಗ ಮಾತ್ರ ಅಚಲತ್ವ ಸಂಭವಿಸುತ್ತದೆ. ಉಪಾಸನೆಯನ್ನು ಮರಣ ಪರ್ಯಂತ ಯಾವ ಜೀಜವವೂ ಮಾಡಬೇಕು.

ಜ್ಞಾನಪ್ರಾಪ್ತಿಯಾದಾಗ ಹಿಂದಿನ-ಮುಂದಿನ ಪಾಪಗಳೆಲ್ಲದರ ನಿರ್ಲೇಪನವಾಗುತ್ತದೆ. ಜ್ಞಾನೋತ್ಪತ್ತಿಗೆ ಸಹಾಯಕಗಳಾದ ಆಶ್ರಮ ಕರ್ಮಗಳನ್ನು ಪ್ರತಿನಿತ್ಯವೂ ಮಾಡಬೇಕು. ವಿದುಷನಾದ ಜೀವನು ದೇವಯಾನ ಪಥದ ಮೂಲಕ ಪರಬ್ರಹ್ಮನನ್ನು ಸೇರುವವರೆಗೂ ಪ್ರಾಣಗಳು ಅವನನ್ನು ಬಿಡುವುದಿಲ್ಲ. ಜ್ಞಾನಿಯಾದವನು, ಹೃದಯದ ನೂರೊಂದು ನಾಡಿಗಳಲ್ಲಿ ಪರಮಪುರುಷನ ಅನುಗ್ರಹದಿಂದ ನೆತ್ತಿಯ ನಾಡಿಯ ಮೂಲಕ ಸೂರ್ಯನನ್ನು ಭೇದಿಸಿಕೊಂಡು ಬ್ರಹ್ಮಲೋಕವನ್ನು ಅತಿಕ್ರಮಿಸಿ ಪರಾಗತಿಯನ್ನು ಹೊಂದುತ್ತಾನೆ. ಉತ್ತರಾಯಣ ಶುಕ್ಲಪಕ್ಷ ದಿವಾ ಮರಣ, ದಕ್ಷಿಣಾಯನ ಕೃಷ್ಣಪಕ್ಷ ನಿಶಾಮರಣ, ಎರಡರಲ್ಲೂ ಬ್ರಹ್ಮಪ್ರಾಪ್ತಿಯಾಗುತ್ತದೆ. ಪರಮಪುರುಷನಿಂದ ನಿಯುಕ್ತರಾದ ಅತಿವಾಹಕ ಗಣಗಳು ಹಾಗೂ ದೇವತಾ ವಿಶೇಷಗಳು—ಅರ್ಚಿರಾದಿಗಳು—ಉಪಾಸಕರನ್ನು ಮಾರ್ಗದ ಹಂತಗಳಲ್ಲಿ ಒಯ್ಯುತ್ತಾರೆ. ಪರಬ್ರಹ್ಮೋಪಾಸಕರನ್ನೂ, ಪ್ರಕೃತಿವಿಯುಕ್ತನಾದ ಜೀವನು ಬ್ರಹ್ಮಾತ್ಮಕನೆಂದು ಉಪಾಸಿಸುವರನ್ನೂ, ಅರ್ಚಿರಾದಿಗಣವು ಒಯ್ಯುತ್ತದೆ. ಅರ್ಚಿರಾದಿಯಲ್ಲಿ ಹೋಗುವವನು ಹಿರಣ್ಯಗರ್ಭನ ಸಮೀಪಕ್ಕೆ ಹೋಗುತ್ತಾನೆ.

ಪ್ರಕೃತಿ ಸಂಬಂಧವನ್ನು ಬಿಡಿಸಿಕೊಂಡ ಮುಕ್ತಜೀವನು, ಪರಮಾತ್ಮನೇ ತನ್ನ ಆತ್ಮ, ತಾನು ಅವನ ಶರೀರ, ತಾನು ಪರಬ್ರಹ್ಮನಿಂದ ಬೇರೆಯಲ್ಲ, ಎಂದು ಭಾವಿಸುತ್ತಾನೆ. ಪರಮಪುರುಷನಿಂದ ಸೃಷ್ಟಿಸಲ್ಪಟ್ಟ ಉಪಕರಣಗಳಿಂದ ಮುಕ್ತನು ಸುಖವನ್ನು ಅನುಭವಿಸಬಹುದು.

ಪ್ರಕೃತಿ ಸಂಬಂಧದಲ್ಲಿರುವ ಬದ್ಧಜೀವನ ಜ್ಞಾನವು ಕರ್ಮದಿಂದ ಸಂಕುಚಿತ

ವಾಗಿರುವುದರಿಂದ ಅವನಿಗೆ ದೇಹಾಂತರಗಳಲ್ಲಿ ವ್ಯಾಪ್ತಿಯು ಸಂಭವಿಸುವುದಿಲ್ಲ. ಆದರೆ ಮುಕ್ತಜೀವನ ಜ್ಞಾನವು ಸಂಕುಚಿತವಾಗದಿರುವುದರಿಂದ ಅವನಿಗೆ ದೇಹಾಂತರಗಳಲ್ಲಿ ವ್ಯಾಪ್ತಿಯುಂಟು. ಬ್ರಹ್ಮಾನುಭವವೇ ಮುಕ್ತನ ಸಂಪತ್ತು.

ಹಸಿವು, ಬಾಯಾರಿಕೆ, ಮುಪ್ಪು, ರೋಗಗಳಿಲ್ಲದ ನಿತ್ಯವಿಭೂತಿಯೆಂದು ಹೇಳುವ ವೈಕುಂಠದಲ್ಲಿ ಭಗವಂತನ ಅನುಭವವೇ ಮೋಕ್ಷ. ಭಗವಂತನ ಉಪಾಸನೆಯಿಂದ ಹೊಂದಿದ ಮೋಕ್ಷದಲ್ಲಿ ಜೀವಾತ್ಮನು ಪರಮಾತ್ಮನ ಪರಮ ಸಾಮ್ಯವನ್ನು ಹೊಂದಿ ಬ್ರಹ್ಮಾನಂದವನ್ನು ಅನುಭವಿಸುವನೇ ಹೊರತು ಬ್ರಹ್ಮವೇ ಆಗುವುದಿಲ್ಲ. ಮುಕ್ತನಿಗೂ, ಪರಮ ಪುರುಷನಿಗೂ ಸತ್ಯಸಂಕಲ್ಪತ್ವಾದಿಗಳು, ಬ್ರಹ್ಮಸ್ವರೂಪಾನುಭವರೂಪವಾದ ಭೋಗ, ಸಾಮಾನ್ಯವಾಗಿದ್ದರೂ, ಜಗದ್ವ್ಯಾಪಾರಗಳು ಮುಕ್ತನಿಗೆ ಸೇರಿದುದಲ್ಲ. ಆನಂದಮಯವಾದ ಭಗವಲ್ಲೋಕದಲ್ಲಿ ಭಗವಂತನೊಂದಿಗೆ ಅನಂತಕಾಲ ಬ್ರಹ್ಮಾನಂದವನ್ನು ಅನುಭವಿಸುತ್ತಿರುವ ಮುಕ್ತನು ಸುಖದುಃಖಾನುಭವಕ್ಕಾಗಿ ಮತ್ತೆ ಈ ಸಂಸಾರ ಮಂಡಲಕ್ಕೆ ಬರುವ ಸಂದರ್ಭ ಬಹು ಕಡಿಮೆ.

ನಿಖಿಲ ಹೇಯ ಪ್ರತ್ಯನೀಕ, ದೋಷಗಂಧದೂರ, ಕಲ್ಯಾಣಗುಣಾಕರ, ಜಗಜ್ಜನ್ಮಾದಿಕಾರಣ, ಸಮಸ್ತ ವಸ್ತು ವಿಲಕ್ಷಣ, ಸರ್ವಜ್ಞ, ಸತ್ಯಸಂಕಲ್ಪ, ಸತ್ಯಕಾಮ ಸರ್ವಶಕ್ತ, ಕರ್ಮಾಧ್ಯಕ್ಷ, ಆಶ್ರಿತವಾತ್ಸಲ್ಯೈಕ ಜಲಧಿ, ಪರಮಕಾರುಣಿಕ, ನಿಃಸಮಾಭ್ಯಧಿಕ, ದಿವ್ಯಮಂಗಳ ವಿಗ್ರಹವುಳ್ಳವ, ಪರಬ್ರಹ್ಮ ಆದ ಪರಮ ಪುರುಷನು ಇದ್ದಾನೆ. ವರ್ಣಾಶ್ರಮ ಧರ್ಮಗಳಿಂದ ಅನುಗೃಹೀತವಾದ ನಿತ್ಯೋಪಾಸನೆಯಿಂದ ಪ್ರೀತನಾದ ಅವನು ಅನಾದಿಕಾಲ ಪ್ರವೃತ್ತ, ಅನಂತದುಸ್ತರ, ಕರ್ಮಸಂಚಯ ಆದ ಅವಿದ್ಯೆಯಿಂದ ಉಪಾಸಕರನ್ನು ಬಿಡಿಸಿ, ಸ್ವಯಾಥಾತ್ಮ್ಯಾನುಭವರೂಪವಾದ ಅನವಧಿಕಾತಿಶಯಾನಂದವನ್ನು ಅವರು ಹೊಂದುವಂತೆ ಮಾಡಿ, ಅವರ ಪುನರ್ಜನ್ಮವನ್ನು ನಿಲ್ಲಿಸುತ್ತಾನೆ. ಕರ್ಮಬಂಧನದಿಂದ ಬಿಡಿಸಿಕೊಂಡ, ಸಂಕುಚಿತವಲ್ಲದ ಜ್ಞಾನವುಳ್ಳ, ಪರಬ್ರಹ್ಮಾನುಭವವೇ ಸ್ವಭಾವವಾಗಿರುವ ಮುಕ್ತನು, ಭಗವಂತನಲ್ಲಿರುವ ಪ್ರೀತ್ಯತಿಶಯದಿಂದ ಅವನಿಗೆ ತಾನಾಗಿಯೇ ಬಗೆಬಗೆಯ ಕೈಂಕರ್ಯಗಳನ್ನು ಮಾಡಿ ಆನಂದಿಸುತ್ತಾನೆಯೇ ಹೊರತು ಮತ್ತೇನನ್ನೂ ಅಪೇಕ್ಷಿಸುವುದಿಲ್ಲ. ಆದುದರಿಂದ ಮುಕ್ತನಿಗೆ ಪುನರ್ಜನ್ಮದ ಭೀತಿಯಿಲ್ಲ. ಅವನು ಮತ್ತೆ ಸಂಸಾರಕ್ಕೆ ಹಿಂದಿರುಗುವುದಿಲ್ಲ.

— ೦ —

# ಮಹರ್ಷಿಗಳ ಸಂಸ್ಕೃತ ಸಾಹಿತ್ಯ

## 1. ವೇದಗಳು

ವೇದ ಎಂದರೆ ಜ್ಞಾನ ಪ್ರತಿಪಾದಕವಾದ ಗ್ರಂಥ. ಮಂತ್ರ, ಬ್ರಾಹ್ಮಣ ಆರಣ್ಯಕ, ಉಪನಿಷತ್ತುಗಳ ಶಬ್ದ ರಾಶಿಯ ಸಮುದಾಯ ಎಂದರ್ಥ. ವೇದವು ಮಾನವ ಬುದ್ಧಿಯ ಯಾವ ಸಾಧನೆಯಿಂದಲೂ ಪಡೆಯಲಾಗದ, ಭಗವಂತನಿಂದ ನೇರವಾಗಿ ಗೋಚರವಾದ, ಪರಮಸತ್ಯವನ್ನು ಒಳಗೊಂಡಿದೆಯಾದಕಾರಣ ಅದು ಅಪೌರುಷೇಯ ಎಂದು ಭಾವಿಸಲ್ಪಟ್ಟಿದೆ. ವೇದವು ಸಂಸಾರವೆಂಬ ಜನನ ಮರಣಗಳ ಚಕ್ರಪರಿವರ್ತನೆಯ ಅನಿಷ್ಟವನ್ನು ಪರಿಹರಿಸುವ ಅಲೌಕಿಕ ಸಾಧನವಾಗಿ, ಪರಬ್ರಹ್ಮ ಪ್ರಾಪ್ತಿ ಎಂಬ ಮನೋಭೀಷ್ಟವನ್ನು ಪಡೆಯಲು ಮಾನವ ಕೋಟಿಯು ಅನುಸರಿಸಲೇ ಬೇಕಾದ ಪರಮೋತ್ಕೃಷ್ಟ ವಿಧಾನವನ್ನು ತಿಳಿಸುವ ಗ್ರಂಥವಾಗಿದೆ. ಆದುದರಿಂದ ವೇದವು ಬ್ರಹ್ಮಜ್ಞಾನ ಪ್ರತಿಪಾದಕವಾದುದು. ಇದರಲ್ಲಿ ಗೂಢವಾಗಿ ಅಡಗಿರುವ ವಿಧಿವಿಧಾನಗಳಿಂದ ಹಾಗೂ ಬ್ರಹ್ಮಜ್ಞಾನದಿಂದ ಎಲ್ಲ ಸತ್ಯವಿದ್ಯೆಗಳೂ ದೊರೆತು ಬ್ರಹ್ಮಸಾಕ್ಷಾತ್ಕಾರವಾಗುತ್ತದೆಂಬುದು ವಿದ್ವಾಂಸರ ಅಭಿಪ್ರಾಯ.

ಮಾನವನ ಮಸ್ತಿಷ್ಕದ ಹಾಗೂ ಮನಸ್ಸಿನ ಕತ್ತಲೆಯನ್ನು ನಾಶಪಡಿಸಿ, ಅವನ ಸರ್ವಾಂಗೀಣ ಹಾಗೂ ಪೂರ್ಣವಿಕಾಸವನ್ನು ಸಾಧಿಸುವ ಸಲುವಾಗಿ ಅವನಿಗೆ ಮಾರ್ಗ ದರ್ಶನ ಮಾಡಲೋಸುಗ, ಬೇರೆ ಬೇರೆ ಋಷಿಗಳಿಗೆ ಬೇರೆ ಬೇರೆ ಕಾಲಗಳಲ್ಲಿ ಪೂರ್ವ ಸಂಚಿತ ಪುಣ್ಯದಿಂದ ಸಮಸ್ತವಿದ್ಯೆಗಳ ಜ್ಞಾನವು ಗೋಚರವಾಯಿತು. ಅಂದರೆ ಪುರಾತನರಾದ ಋಷಿಗಳು ದಿವ್ಯದೃಷ್ಟಿಯಿಂದ, ತಪಶ್ಶಕ್ತಿಯಿಂದ, ಅಲೌಕಿಕ ಸಮಾಧಿ ಯಲ್ಲಿ ತಾವು ಸಾಕ್ಷಾತ್ಕರಿಸಿಕೊಂಡ ದೈವಿಕ ಸತ್ಯ, ನಿಗೂಢಜ್ಞಾನ, ಮತ್ತು ಅನುಭವಕ್ಕೆ ಬಂದ ತತ್ತ್ವಗಳನ್ನು ತಾವು ನಿತ್ಯವ್ಯವಹಾರದಲ್ಲಿ ಬಳಸುತ್ತಿದ್ದ ವೈದಿಕ ಸಂಸ್ಕೃತ ಭಾಷೆಯ ಮಂತ್ರಗಳ ರಾಶಿಯಲ್ಲಿ ಅಡಗಿಸಿಟ್ಟು ಮಹೋಪಕಾರ ಮಾಡಿದ್ದಾರೆ. ಸರ್ವ ಮಾನವರೂ ಸರ್ವ ಪ್ರಥಮವಾಗಿ ಪಡೆದ ಭಾಷೆಯೇ ವೇದಭಾಷೆ.

ಅಂತರಿಕ್ಷದಲ್ಲಿ ಆಕಾಶವತ್ ಸಮರಸವಾಗಿದ್ದ, ಅವ್ಯಕ್ತಕಾರಣರೂಪವಾದ ಪರಾವಾಕ್ಕನ್ನು, ಅಂತರ್ಬೋಧೆಯುಳ್ಳ ಯೋಗಿ-ತಪಸ್ವಿಗಳು ಗ್ರಹಿಸಿ, ಆಲೋಚಿಸಿ, ಅದಕ್ಕೆ ಶಬ್ದರೂಪವನ್ನು ಕೊಟ್ಟರು ಹಾಗೂ ದೈವೀವಾಣಿಯ ಆಧಾರದ ಮೇಲೆ ನಿಂತ, ಸಂಸ್ಕರಿಸಿದ ಮಾನುಷೀವಾಣಿಯಲ್ಲಿ ವ್ಯವಹರಿಸುತ್ತಿದ್ದರು. ಶಾಶ್ವತ ಜ್ಞಾನ

ವನ್ನು ಸಾಕ್ಷಾತ್ಕರಿಸಿಕೊಂಡ ಬಳಿಕ ವೈಜ್ಞಾನಿಕ ಮನೋವೃತ್ತಿಯ ಋಷಿಗಳ ಬಾಯಿಂದ ವಿವಿಧ ದೇಶಕಾಲ ಪರಿಸ್ಥಿತಿಯಲ್ಲಿ ವೇದಮಂತ್ರಗಳ ಉಚ್ಚಾರಣೆ ಉಂಟಾಯಿತು. ಈ ಋಷಿಗಳು ವೇದಮಂತ್ರಗಳ ಕರ್ತೃಗಳಲ್ಲ. ಅವರು ಮಂತ್ರದ್ರಷ್ಟಾರರು ಹಾಗೂ ನಿಮಿತ್ತಮಾತ್ರ ರಚನಾಕಾರರು. ವಿಶ್ವದ ಇತರ ಭಾಗಗಳಲ್ಲಿ ನಾಗರಿಕತೆಯ ಉದಯ ಆಗುವುದಕ್ಕೂ ಮುಂಚೆಯೇ ನಮ್ಮ ಭಾರತದ ಋಷಿಗಳು ಎಂತಹ ಭವ್ಯವಾದ ಜೀವನ ದರ್ಶನವನ್ನು ಕಂಡಿದ್ದರೆಂಬುದು ಈ ವೇದ ಸೂಕ್ತಗಳಿಂದ ತಿಳಿದು ಬರುತ್ತದೆ.

ಪವಿತ್ರವಾದ ವೇದ ಸೂಕ್ತಗಳನ್ನು ಬರೆದು ಇಡದೆ ಗುರುಗಳ ಬಾಯಿನಿಂದ ಶಿಷ್ಯರ ಕಿವಿಗಳ ಮೂಲಕ ಸಾಗಿಸುತ್ತಿದ್ದುದರಿಂದ ಹಾಗೂ ಭಗವಂತನಿಂದ ಸಾಕ್ಷಾತ್ತಾಗಿ ಶ್ರವಣದ ಮೂಲಕ ಲಭ್ಯವಾದುದರಿಂದ ಇವುಗಳಿಗೆ ಶ್ರುತಿ ಎಂಬ ಹೆಸರು ಬಂದಿದೆ. ಬದಲಾಯಿಸಲು ಸಾಧ್ಯವಿಲ್ಲದ ಸಾರ್ವಕಾಲೀನ, ಸಾರ್ವತ್ರಿಕ, ಸತ್ಯ ಜ್ಞಾನವನ್ನು ಹೊಂದಿರುವ ಈ ವೇದಗಳು ಸಾಹಿತ್ಯದ ನಿಯಮಗಳಿಗೆ ಅನುಸಾರವಾಗಿ ದೇವ ದೇವತೆಗಳನ್ನು ಪ್ರಾರ್ಥಿಸುವ ಸ್ತೋತ್ರ ಗೀತೆಗಳಾಗಿವೆ. ಮೋಕ್ಷಪ್ರಾಪ್ತಿಯ ಸಾಧನಗಳಾದ ಕರ್ಮ, ಜ್ಞಾನ, ಉಪಾಸನೆ, ವಿಜ್ಞಾನ ಈ ನಾಲ್ಕೂ ಅಂಶಗಳು ವೇದಗಳಲ್ಲಿ ವರ್ಣಿಸಲ್ಪಟ್ಟಿವೆ. ತತ್ತ್ವಶಾಸ್ತ್ರದ ಹಿಮಾಲಯ ಪರ್ವತ ಪಂಕ್ತಿಗಳೆನಿಸಿದ ವೇದಗಳು ಆರ್ಯರಿಗೆ ಪವಿತ್ರವಾದ ಪ್ರಮಾಣ ಗ್ರಂಥಗಳು. ಆರ್ಯರ ಮುಖ್ಯ ಪ್ರಾಚೀನ ಧರ್ಮಸಾಹಿತ್ಯವೆನಿಸಿದ ವೇದಗಳು ಹಿಂದೂ ಧರ್ಮದ ಸರ್ವಸ್ವವಾಗಿವೆ. ವಿಶ್ವದಲ್ಲಿ ಅತ್ಯಂತ ಪ್ರಾಚೀನವಾದ ನಾಗರಿಕತೆಯನ್ನು ಹೊಂದಿದ್ದ ಆರ್ಯ ಜನಾಂಗದ ಅತ್ಯಂತ ಪ್ರಾಚೀನ ಇತಿಹಾಸವು ವೇದಗಳಲ್ಲಿ ಅಡಗಿದೆ. ಇವು ವಿಶ್ವದ ಅತ್ಯಂತ ಪುರಾತನ ಶಾಸ್ತ್ರಗಳಲ್ಲಿ ಒಂದಾಗಿವೆ.

ಸೃಷ್ಟಿಯ ಮೂಲಗ್ರಂಥವಾದ ವೇದಗಳು ಭೌತಿಕ ಜ್ಞಾನದ ಮೂಲವೂ ಆಗಿವೆ. ಇವುಗಳ ನಿರಂತರ ಅಧ್ಯಯನ, ಅಧ್ಯಾಪನ, ಅನುಸರಣಗಳಿಂದ ಮಾತ್ರ ವಿನಾಶಕಾರೀ ವಿಚಾರಗಳೆಲ್ಲ ನಾಶವಾಗಿ, ಮಾನವ ಸಮುದಾಯಕ್ಕೆ ಸರ್ವತೋಮುಖವಾದ ಶ್ರೇಯಸ್ಸು ಸದಾ ದೊರಕುತ್ತದೆ.

ವೇದಶಬ್ದಗಳು ಉತ್ಪತ್ತಿ, ವೃದ್ಧಿ, ಕ್ಷಯ, ವಿಕಾರ, ಲಯ ಆದಿ ದೋಷಗಳಿಂದ ಮುಕ್ತವಾಗಿವೆ. ವೇದಗಳಲ್ಲಿ ಪಕ್ಷಪಾತಕ್ಕೆ, ರಾಗದ್ವೇಷಗಳಿಗೆ, ಸ್ವ-ಪರ, ಸ್ತ್ರೀ-ಪುರುಷ, ಮೇಲು-ಕೀಳು, ಬಿಳಿ-ಕಪ್ಪು, ವರ್ಣ, ಜಾತಿ ಮುಂತಾದ ಭೇದಗಳಿಗೆ, ಅಜ್ಞಾನ, ಕುರುಡುನಂಬಿಕೆಗಳಿಗೆ ಎಡೆಯಿಲ್ಲ. ವೇದಗಳು ಪ್ರತಿಯೊಬ್ಬ ಮಾನವನ ಪರಿಪೂರ್ಣ ವಿಕಾಸಕ್ಕೆ ಪಥ ಪ್ರದರ್ಶನ ಮಾಡುವ, ಸರ್ವೋನ್ನತಿಯ, ಸನ್ಮಾರ್ಗದ ಜ್ಯೋತಿಸ್ತಂಭಗಳಾಗಿ ವಿರಾಜಿಸುವ, ಭ್ರಾಂತಿರಹಿತವಾದ ಸಮಸ್ತ ಸತ್ಯ, ನಿತ್ಯ ವಿದ್ಯಾ ಪರಿಪ್ಲುತವಾದ ಸಾರ್ವಕಾಲಿಕ ಸಾರ್ವಭೌಮ ಪವಿತ್ರ ಶಾಸ್ತ್ರಗಳಾಗಿವೆ. ಅಲೌಕಿಕ ಶ್ರೇಯಸ್ಸಾಧನಗಳನ್ನು, ಅರಿಯಬೇಕಾದ ಸಕಲ ಅರ್ಥಗಳನ್ನು, ತಿಳಿಯಪಡಿಸುವ

ವಿದ್ಯೆಯಾದ ವೇದಗಳು, ಪ್ರಪಂಚದ ಎಲ್ಲ ವಸ್ತುಗಳ ಜ್ಞಾನವನ್ನು ಪ್ರಕಾಶಪಡಿಸಿ, ಸತ್ಯಾರ್ಥಗಳನ್ನು ಪ್ರಕಟಿಸುತ್ತವೆ. ಸರ್ವ ವಿದ್ಯೆ, ಕಲೆ, ಶಾಸ್ತ್ರಗಳ ಜನನಿ, ಭಗವದ್ವಾಣಿ ಆದ ವೇದಗಳು ಎಲ್ಲರನ್ನೂ ತನ್ನವರೆಂದು ಬಗೆವ ಹೃದಯ ವೈಶಾಲ್ಯ, ಪಾರಮಾರ್ಥಿಕ ಸಾಂಸಾರಿಕ ಸತ್ಯ ಜ್ಞಾನ ಗಳಿಗೆ ತವರುಮನೆಯಾಗಿವೆ. ಅದ್ವಿತೀಯ, ಸ್ವತಃ ಪ್ರಮಾಣ, ಆದ ವೇದಗಳ ಆಧಾರದಿಂದಲೇ ಅನೇಕ ಶಾಸ್ತ್ರ ಗ್ರಂಥಗಳು ರಚಿಸಲ್ಪಟ್ಟು ಜ್ಞಾನವು ವಿಸ್ತಾರಗೊಂಡಿದೆ. ವೇದವು ನಿತ್ಯ ನಿರ್ದೋಷ, ಸ್ವತಃ ಪ್ರಮಾಣ, ಸರ್ವಶಾಸ್ತ್ರಮೂಲ, ಸರ್ವ ಆದರಣೀಯ ಆಗಿದೆ. ಸ್ಮೃತಿ ಎನಿಸುವ ಧರ್ಮ ಶಾಸ್ತ್ರಗಳಲ್ಲಿ ವೇದಗಳ ಸಾರಾಂಶ, ಕರ್ಮ, ನೀತಿ, ಆಚಾರ ಸಂಹಿತೆಗಳು ಸರಳವಾಗಿ ತಿಳಿಸಲ್ಪಟ್ಟಿವೆ.

ಎಲ್ಲ ದೇವದೇವತೆಗಳೂ ಒಬ್ಬ ಪರಬ್ರಹ್ಮನ ವಿವಿಧ ರೂಪಗಳು ಹಾಗೂ ಬೇರೆ ಬೇರೆ ಅಂಶಗಳು. ಎಲ್ಲರೂ ಕೂಡಿ ಒಮ್ಮನಸ್ಸಿನಿಂದ ಬಾಳೋಣ, ಕೆಲಸ ಮಾಡೋಣ-ಊಟ ಮಾಡೋಣ, ಉಡಿಗೆ ತೊಟ್ಟುಕೊಳ್ಳೋಣ, ನೀತಿ ಧರ್ಮಗಳನ್ನು ಮೀರದಿರೋಣ—ಇದೇ ವೇದಗಳ ಸಾರ.

## (1) ವೇದಸಂಹಿತೆ

ಪ್ರಾರ್ಥನೆ, ಯಜ್ಞಯಾಗಾದಿ ಕರ್ಮಗಳ ವಿವರಣೆ, ಜ್ಞಾನದ ಬಗ್ಗೆ ಗುರು ಶಿಷ್ಯರು ನಡೆಸುವ ಚರ್ಚೆ—ಇವು ವೇದಗಳಲ್ಲಿ ಕಾಣಬರುವ ಮುಖ್ಯ ಅಂಶಗಳು. ಮೊದಲು ಒಂದೇ ಆಗಿದ್ದ ವೇದವನ್ನು ವೇದವ್ಯಾಸರು ನಾಲ್ಕು ಭಾಗಗಳಾಗಿ ವಿಂಗಡಿಸಿದರೆಂದು ಹೇಳಲಾಗುತ್ತದೆ. ಯಜ್ಞಕ್ಕೆ ಬೇಕಾಗುವ ನಾಲ್ಕು ಜನ ಋತ್ವಿಜರ ಆವಶ್ಯಕತೆಯ ದೃಷ್ಟಿಯಿಂದ ಈ ವೇದ ಸಂಹಿತೆಗಳ ಸಂಕಲನ ಆಯಿತು. ಯಜ್ಞದ ಸಮಯದಲ್ಲಿ ವಿಶಿಷ್ಟ ದೇವತೆಗಳನ್ನು ಪ್ರಶಂಸಾತ್ಮಕವಾದ ಮಂತ್ರಗಳಿಂದ ಆಹ್ವಾನಿಸುವುದು ಹೋತೃ ಎಂಬ ಋತ್ವಿಜನ ಕರ್ತವ್ಯ. ಅದಕ್ಕೆ ಅವಶ್ಯವಾದ ಮಂತ್ರಗಳನ್ನು ಹೊಂದಿರುವುದು ಋಕ್ ಸಂಹಿತೆ ಅಥವಾ ಋಗ್ವೇದ ; ವಿಧಿವತ್ತಾಗಿ ಯಜ್ಞವನ್ನು ಮಾಡುವುದು ಅಧ್ವರ್ಯು ಎಂಬ ಋತ್ವಿಜನ ಕರ್ತವ್ಯ. ಅವನಿಗೆ ಅವಶ್ಯವಾದ ಮಂತ್ರಗಳ ಸಮುದಾಯವು ಯಜುರ್ವೇದ ; ಯಜ್ಞದಲ್ಲಿ ಉಚ್ಚ ಸ್ವರದಲ್ಲಿ ಗಾನ ಮಾಡುವ ಉದ್ಗಾತಾ ಎಂಬ ಋತ್ವಿಜನಿಗಾಗಿ ಸಂಕಲಿತವಾದುದು ಸಾಮವೇದ ; ಅಥರ್ವ ಎಂಬ ವಿಶಿಷ್ಟ ವೇದವನ್ನು ತಿಳಿದುಕೊಂಡಿದ್ದು ಯಾವ ವಿಧವಾದ ಲೋಪವೂ ಬರದಂತೆ ಯಜ್ಞವನ್ನು ನಿರೀಕ್ಷಿಸುವುದು ಬ್ರಹ್ಮ ಎಂಬ ಋತ್ವಿಜನ ಕರ್ತವ್ಯ. ಇದೇ ಅಥರ್ವಣವೇದ. ನಾಲ್ಕು ವೇದಗಳಿಗೂ ಸಮಾನ ಸ್ಥಾನ ನೀಡಲಾಗಿದೆ. ಒಟ್ಟಿನಲ್ಲಿ ಛಂದೋಬದ್ಧವಾದ ಮಂತ್ರಗಳು ಋಕ್. ಈ ಋಕ್ಕುಗಳ ಗಾಯನವೇ ಸಾಮ. ಇವೆರಡರಿಂದ ಭಿನ್ನವಾದ ಗದ್ಯಾತ್ಮಕ ವಾಕ್ಯಗಳು ಯಜುಸ್.

ಈ ಮೂರೇ ಪ್ರಧಾನವಾದುದರಿಂದ ವೇದಗಳನ್ನು ತ್ರಯಿ ಎಂದು ಕರೆಯುವ ವಾಡಿಕೆ ಇದೆ.

ಋಗ್ವೇದವು ಅಗ್ನಿ ಋಷಿಯು, ಯಜುರ್ವೇದವು ವಾಯು ಋಷಿಯು, ಸಾಮ ವೇದವು ಸೂರ್ಯ ಋಷಿಯ, ಅಥರ್ವ ವೇದವು ಅಂಗಿರಾ ಋಷಿಯು, ಅಂತರಂಗ ದಲ್ಲಿ ಸ್ಫೂರ್ತಿ ರೂಪದಲ್ಲಿ ಲಭಿಸಿ ಪ್ರಕಟವಾಗಿವೆ. ವೇದವನ್ನು ವರ್ಗೀಕರಿಸಿ, ವೇದಾಧ್ಯಯನವನ್ನು ಪುನರುಜ್ಜೀವನಗೊಳಿಸಿದ ವ್ಯಾಸರು, ಅದರ ಅಧ್ಯಯನವು ಸತತವಾಗಿ ಬೆಳೆಯುವಂತಾಗಲು ಅದನ್ನು ತಮ್ಮ ಶಿಷ್ಯರಾದ ಪೈಲನಿಗೆ ಋಗ್ವೇದ, ವೈಶಂಪಾಯನನಿಗೆ ಯಜುರ್ವೇದ, ಜೈಮಿನಿಗೆ ಸಾಮವೇದ, ಸುಮಂತುವಿಗೆ ಅಥರ್ವ ವೇದವನ್ನು ಉಪದೇಶಿಸಿದರು. ವೇದಗಳಲ್ಲಿ ಒಟ್ಟು 20240 ಮಂತ್ರ ಗಳಿವೆ ಎನ್ನಲಾಗಿದೆ.

ಜ್ಞಾನಪ್ರಧಾನವಾದ ಋಗ್ವೇದದಲ್ಲಿ 85 ಅನುವಾಕಗಳು, 1028 ಸೂಕ್ತಗಳು. 10580 ಋಕ್ಕುಗಳು, 153826 ಶಬ್ದಗಳು, 432000 ಅಕ್ಷರಗಳು ಇವೆ. ವೇದ ಗಳಲ್ಲಿ ಪ್ರಾಚೀನವಾದ ಇದರಲ್ಲಿ ಸಮಸ್ತ ಪದಾರ್ಥಗಳ ಉತ್ಪತ್ತಿ ಹಾಗೂ ಗುಣ ಧರ್ಮಗಳ, ಪ್ರಕೃತಿಯ, ಭೂತಗಳ, ಸೃಷ್ಟಿಯ, ವರ್ಣನೆ ವಿವರಣೆಗಳು ಇದ್ದು, ಈ ಜ್ಞಾನವೇ ಎಲ್ಲ ಸಂಸ್ಕಾರ ಪ್ರವೃತ್ತಿಗಳಿಗೆ ಕಾರಣವಾಗಿದೆ. ವೀರ, ಕರುಣ, ಭಕ್ತಿ ರಸಗಳಿಂದ ತುಂಬಿದ ಕಾವ್ಯ ಗುಣವನ್ನು ಈ ಮಂತ್ರಗಳಲ್ಲಿ ಕಾಣಬಹುದು.

ಕರ್ಮ ಪ್ರಧಾನವಾದ ಯಜುರ್ವೇದದಲ್ಲಿ 44 ಅಧ್ಯಾಯಗಳು, 303 ಅನುವಾಕ ಗಳು, 1925 ಮಂತ್ರಗಳು, 29625 ಶಬ್ದಗಳು, 88875 ಅಕ್ಷರಗಳು ಇವೆ. ಯಜ್ಞಯಾಗಾದಿಗಳ ಜ್ಞಾನ, ಕರ್ಮ, ಫಲ, ನ್ಯಾಯ ಮಾರ್ಗದಲ್ಲಿ ನಡೆಯಲು ಬೇಕಾದ ಉಪದೇಶ, ವಿವಿಧ ವಿದ್ಯೆಗಳು, ವ್ಯವಹಾರಕ್ಕೆ ಬೇಕಾದ ಸೂತ್ರಗಳು ಇದ ರಲ್ಲಿ ಇವೆ, ಮುಖ್ಯವಾಗಿ ಕರ್ಮಕಾಂಡ ಪ್ರತಿಪಾದ್ಯ ವಿಷಯವಾಗಿದೆ.

ಭಕ್ತಿ ಪ್ರಧಾನವಾದ ಸಾಮವೇದದಲ್ಲಿ 21 ಅಧ್ಯಾಯಗಳು, 1875 ಮಂತ್ರ ಗಳು ಇವೆ. ಇದರಲ್ಲಿ ಅಗ್ನಿ, ಇಂದ್ರ ಆದಿದೇವತೆಗಳ ಉಪಾಸನೆ, ಪ್ರಧಾನ ಪ್ರತಿ ಪಾದ್ಯ ವಿಷಯ, ಆನಂದವನ್ನು ಗಳಿಸುವ ಉಪಾಯ, ಇದೆ.

ವಿಜ್ಞಾನ ಪ್ರಧಾನವಾದ ಅಥರ್ವ ವೇದದಲ್ಲಿ 731 ಸೂಕ್ತಗಳು, 5987 ಮಂತ್ರಗಳು ಇವೆ. ದೈನಂದಿನ ಧರ್ಮ ಕರ್ಮಗಳ ವಿಶೇಷ ಜ್ಞಾನ ಇದರಲ್ಲಿದೆ. ವರ ಹಾಗೂ ಶಾಪಗಳನ್ನು ತರುವ ಮಂತ್ರಗಳು ಇದರಲ್ಲಿವೆ. ಅಂದರೆ ಪ್ರೇಮ, ಸುಖ ಜೀವನ, ಆರೋಗ್ಯ ಆಯುಸ್ಸುಗಳ ಅಭಿವೃದ್ಧಿ, ಪ್ರವಾಸದಲ್ಲಿ ರಕ್ಷಣೆ, ಜೂಜಿನಲ್ಲಿ ಗೆಲುವು ಮುಂತಾದುವನ್ನು ಹೊಂದುವ ಉಪಾಯಗಳು ಇಲ್ಲಿ ಹೇಳಲ್ಪಟ್ಟಿವೆ. ಜೊತೆಗೆ ಶತ್ರು, ರಾಕ್ಷಸ, ಮಾಂತ್ರಿಕ, ದುಷ್ಟ ಪ್ರಾಣಿ, ರೋಗ ಮುಂತಾದುವುಗಳ ನಿವಾರಣೋಪಾಯಗಳು ಇದರಲ್ಲಿವೆ. ಮಾರಣ, ಮೋಹನ, ಉಚ್ಚಾಟನ ಮೊದ ಲಾದ ಅಭಿಚಾರಿಕ ಕ್ರಿಯೆಗಳ ವಿಶೇಷ ವರ್ಣನೆ ಇದರಲ್ಲಿದೆ.

ಮುಖ್ಯವಾಗಿ ಒಂದೊಂದು ವೇದಕ್ಕೂ ತನ್ನದೇ ಆದ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಎಂಬ ನಾಲ್ಕು ಸ್ಕಂಧಗಳಿವೆ. ಕ್ರಮಬದ್ಧವಾಗಿ ಕ್ರೋಢೀಕರಿಸಲ್ಪಟ್ಟ ಪದ್ಯರೂಪದ ಮಂತ್ರಗಳೇ ಸಂಹಿತೆ ; ಸಂಹಿತೆಯ ಮಂತ್ರಗಳನ್ನು ಯಜ್ಞಗಳಲ್ಲಿ ಉಪಯೋಗಿಸುವ ವಿಧಾನವನ್ನು ತಿಳಿಸುವುದು ಅಂದರೆ ವೇದ ಮಂತ್ರಗಳ ಅರ್ಥವಿವರಣೆಗಾಗಿ ಬರೆಯಲ್ಪಟ್ಟ ಗದ್ಯರೂಪದ ಗ್ರಂಥಗಳೇ ಬ್ರಾಹ್ಮಣಗಳು ; ಅರಣ್ಯದಲ್ಲಿ ಅಧ್ಯಯನಮಾಡಬೇಕಾದ ಗೂಢಾರ್ಥ ಚಿಂತನೆಯ ಅಂಶಗಳನ್ನು ವಿವೇಚಿಸುವುದು ಅಂದರೆ ಧಾರ್ಮಿಕ ಸಿದ್ಧಾಂತಗಳನ್ನು ಚರ್ಚಿಸುವುದು ಆರಣ್ಯಕ ; ಆರಣ್ಯಕಗಳ ಕೊನೆಯ ಭಾಗಗಳೆನಿಸಿ, ಆಧ್ಯಾತ್ಮ ತತ್ತ್ವಗಳನ್ನು ವಿವರಿಸುವುದು ಉಪನಿಷತ್ತು.

## (2) ಬ್ರಾಹ್ಮಣಗಳು

ವೇದಮಂತ್ರಗಳ ಅರ್ಥ, ಉಪಯೋಗಗಳನ್ನು ತಿಳಿಸಲು ಮಹರ್ಷಿಗಳು ಮಾಡಿದ ವ್ಯಾಖ್ಯಾನ, ಯಜ್ಞ ಕ್ರಿಯೆಗಳ ವಿಸ್ತಾರ ವಿವರಣೆ ಇಲ್ಲಿದೆ. ವೇದದಲ್ಲಿರುವ ಬ್ರಹ್ಮದ ವ್ಯಾಖ್ಯಾನ ಬ್ರಾಹ್ಮಣ ಎನಿಸುತ್ತದೆ. ಇತಿಹಾಸ, ಪುರಾಣ, ವಿದ್ಯಾ, ಉಪನಿಷತ್, ಶ್ಲೋಕ, ಸೂತ್ರ, ವ್ಯಾಖ್ಯಾನ, ಅನುವ್ಯಾಖ್ಯಾನ ಎಂಬೀ ಎಂಟು ಭೇದಗಳು ಬ್ರಾಹ್ಮಣಗಳಲ್ಲಿ ಇವೆ. ದೇವತೆಗಳು, ಅಸುರರು, ವಿದ್ವಾಂಸರು, ಮೂರ್ಖರುಗಳ ಮಧ್ಯೆ ನಡೆದ ಯುದ್ಧ-ಕತೆಗಳು ಇತಿಹಾಸ ಎನಿಸಿದರೆ, ಜಗತ್ತಿನ ಪೂರ್ವಾವಸ್ಥೆಯ ವರ್ಣನೆಯು ಪುರಾಣ ಎನಿಸುತ್ತದೆ.

ಋಗ್ವೇದದ ಬ್ರಾಹ್ಮಣಗಳಾದ ಶತಪಥ, ತೈತ್ತಿರೀಯ, ಶ್ವೇತಾಶ್ವತರ, ಮೈತ್ರಾಯಿಣಿ, ಜಾಬಾಲ, ಕಾಠಕ, ಖಾಂಡಿಕೇಯ, ಔತೇಯ, ಹಾರಿದ್ರವಿತ, ಆಹ್ವರಕ, ಕಂಕತಿ, ಗಾಲಿವಗಳು ಪ್ರಸಿದ್ಧಯಾಜ್ಞಿಕ ಕ್ರಿಯೆಗಳ ಜ್ಞಾನಕ್ಕೆ ಸರ್ವಶ್ರೇಷ್ಠ ಗ್ರಂಥಗಳಾಗಿವೆ ; ಸಾಮವೇದದ ಬ್ರಾಹ್ಮಣಗಳಲ್ಲಿ ತಾಂಡ್ಯ, ಷಡ್ವಿಂಶ, ಜೈಮಿನಿ ಮುಖ್ಯವಾದುವು. ಓಂ ಎಂಬ ಪ್ರಣವಮಂತ್ರ, ಗಾಯಿತ್ರಿ ಮಂತ್ರಗಳ ವಿಶ್ಲೇಷಣೆ, ಅಭಿಚಾರಕರ್ಮ, ತಂತ್ರ ಪ್ರಕ್ರಿಯೆಗಳ ವಿಶೇಷ ವರ್ಣನೆ, ಅರಣ್ಯಗಾನ, ಗ್ರಾಮಗೇಯಗಾನಗಳ ಉಲ್ಲೇಖ-ವಿವರಣೆ ಇವೆ. ಸೋಮಯಾಗದ ವರ್ಣನೆ, ಯಾಗಕ್ಕೆ ಸಂಬಂಧಿಸಿದ ಉಲ್ಲೇಖ ಇಲ್ಲಿವೆ ; ಅಥರ್ವವೇದೀಯ ಬ್ರಾಹ್ಮಣಗಳಲ್ಲಿ ಗೋಪಥ ಮುಖ್ಯವಾದುದು. ಬ್ರಾಹ್ಮಣ ಗ್ರಂಥಗಳ ಅಧ್ಯಯನವಿಲ್ಲದೆ ವೇದಗಳ ಅರ್ಥವು ಸುಲಭಗ್ರಾಹ್ಯವಲ್ಲ.

## (3) ಅರಣ್ಯಕಗಳು

ಸಾಧಾರಣ ಜನತೆಯಿಂದ ದೂರವಾಗಿ ಅರಣ್ಯಗಳಲ್ಲಿ ಅಧ್ಯಯನ ಮಾಡುವ ಗ್ರಂಥಗಳಿಗೆ ಆರಣ್ಯಕ ಎಂದು ಹೆಸರು. ವೇದಮಂತ್ರಗಳ ಗೂಢರಹಸ್ಯಗಳ ಚರ್ಚೆಯು

ಅರಣ್ಯಗಳಲ್ಲಿಯೇ ನಡೆಯುತ್ತಿದ್ದುದರಿಂದ ಅದನ್ನು ವಿವರಿಸುವ ಇವು ಆರಣ್ಯಕ ಗ್ರಂಥಗಳೆನಿಸಿದುವು. ಮೊಸರಿನಿಂದ ಬೆಣ್ಣೆ, ಮಲಯ ಪರ್ವತದಿಂದ ಚಂದನ, ಔಷಧಿಗಳಿಂದ ಅಮೃತಗಳನ್ನು ತೆಗೆಯುವಂತೆ ಋಷಿಗಳು ವೇದಗಳಿಂದ ಆರಣ್ಯಕಗಳನ್ನು ತೆಗೆದು ಸಿದ್ಧಪಡಿಸಿದ್ದಾರೆ. ಅನೇಕ ಆರಣ್ಯಕಗಳು ಬ್ರಾಹ್ಮಣ ಗ್ರಂಥಗಳ ಭಾಗಗಳೇ ಆಗಿವೆ. ಯಜ್ಞಗಳ ಆಧ್ಯಾತ್ಮಿಕ ರೂಪದ ವಿವೇಚನೆ ಇಲ್ಲಿದೆ. ಬ್ರಾಹ್ಮಣ ಗ್ರಂಥಗಳು ಗೃಹಸ್ಥರಿಗೆ ಉಪಾದೇಯ ಗ್ರಂಥಗಳಾದರೆ, ಆರಣ್ಯಕಗಳು ವಾನಪ್ರಸ್ಥ ಆಶ್ರಮದಲ್ಲಿ ಜೀವನ ನಡೆಸುವವರಿಗೆ ಉಪಾದೇಯವಾಗಿವೆ.

ಇವುಗಳಲ್ಲಿ ಋಗ್ವೇದದ ಐತರೇಯ, ಕೌಷೀತಕಿ, ಯಜುರ್ವೇದದ ತೈತ್ತಿರೀಯ, ಬೃಹದಾರಣ್ಯಯ, ಮೈತ್ರಾಯಣಿ, ಸಾಮವೇದದ ತಲವಕಾರ, ಮುಖ್ಯವಾದುವು.

## (4) ಉಪನಿಷತ್ತುಗಳು

ಇವು ಆರಣ್ಯಕಗಳ ಕೊನೆಯ ಭಾಗವೆಂದು ಹೇಳಲಾಗುತ್ತಿದೆ. ಪೂರ್ಣ ವೇದಜ್ಞನಾದ ಗುರುವಿನ ಸಮೀಪದಲ್ಲಿ ಕುಳಿತು ಕಲಿಯುವ ರಹಸ್ಯಮಯ ವಿದ್ಯೆಯು ಉಪನಿಷತ್ ಎನಿಸಿಕೊಳ್ಳುತ್ತದೆ. ವಿವಿಧ ವೇದಗಳಿಂದ ಹುಟ್ಟಿದ 200 ಉಪನಿಷತ್ತುಗಳಿವೆ ಎಂದು ಪ್ರತೀತಿ. ಇವುಗಳಲ್ಲಿ ಋಗ್ವೇದದ ಐತರೇಯ, ಯಜುರ್ವೇದದ ಕಠ, ತೈತ್ತಿರೀಯ, ಶ್ವೇತಾಶ್ವತರ, ಈಶ, ಬೃಹದಾರಣ್ಯಕ, ಸಾಮವೇದದ ಕೇನ, ಛಾಂದೋಗ್ಯ, ಅಥರ್ವವೇದದ ಪ್ರಶ್ನ, ಮುಂಡಕ, ಮಾಂಡೂಕ್ಯ ಎಂಬ ಹನ್ನೊಂದು ಮುಖ್ಯವಾದುವು. ಶಂಕರಾಚಾರ್ಯರ ಅಭಿಪ್ರಾಯದಲ್ಲಿ ಋಗ್ವೇದದ ಕೌಷೀತಕಿ, ಯಜುರ್ವೇದದ ಕೈವಲ್ಯ, ಮಹಾನಾರಾಯಣ, ಜಾಬಾಲ, ಅಥರ್ವವೇದದ ನೃಸಿಂಹತಾಪಿನೀ ಉಪನಿಷತ್ತುಗಳೂ ಮುಖ್ಯವಾದುವು. ಈ ಉಪನಿಷತ್ತುಗಳಲ್ಲಿ ರೋಚಕವಾದ ಸಂವಾದ ರೂಪದಲ್ಲಿ ಬ್ರಹ್ಮ ವಿದ್ಯೆಯ ವರ್ಣನೆ ಇದೆ.

ಉಪನಿಷತ್ತುಗಳು ವೇದಸಾಹಿತ್ಯದ ಉತ್ತುಂಗ ಶಿಖರವಾಗಿದ್ದು, ಭಾರತೀಯ ತತ್ತ್ವಜ್ಞಾನ ಹಾಗೂ ಧರ್ಮಸಿದ್ಧಾಂತಗಳ ಮೂಲ, ಭಾರತೀಯ ಸಂಸ್ಕೃತಿಯ ಪ್ರಕಾಶಸ್ತಂಭ, ಆಗಿವೆ. ವೈದಿಕ ಧರ್ಮದ ನಿವೃತ್ತಿಮಾರ್ಗ ಸ್ವರೂಪವು ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳಲ್ಲಿ ಪ್ರಕಟವಾಗಿದ್ದರೆ, ಉಪನಿಷತ್ತಿನ ಸಾರವಾದ ಭಗವದ್ಗೀತೆಯಲ್ಲಿ ಪ್ರವೃತ್ತಿಪರಸ್ವರೂಪವು ಪ್ರಕಟವಾಗಿದೆ. ಹೀಗೆ ಪ್ರಸ್ಥಾನತ್ರಯಗಳಲ್ಲಿ ಮುಖ್ಯವಾದ ಉಪನಿಷತ್ತುಗಳನ್ನು ಬ್ರಹ್ಮಸೂತ್ರ, ಭಗವದ್ಗೀತೆಗಳು ಆಶ್ರಯಿಸಿವೆ. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ಎಂಬ ಆರು ಭಾರತೀಯ ದರ್ಶನಗಳಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಉಪನಿಷತ್ತುಗಳೇ ಆಧಾರ, ಸಾರಸರ್ವಸ್ವ ಹಾಗೂ ಪರಮ ಪ್ರಮಾಣ.

ಪ್ರಕೃತಿ, ಪುರುಷ, ಪರಮಾತ್ಮ ಇವುಗಳ ಸ್ವರೂಪ ಸಂಬಂಧವನ್ನು ವಿವೇಚಿಸುವ ಉನ್ನತ ವಿಚಾರಧಾರೆಯನ್ನು ಸರಳ, ಮಾರ್ಮಿಕ ಆದ ಶೈಲಿಯಲ್ಲಿ ಸಮಗ್ರವಾಗಿ ಪ್ರತಿಪಾದಿಸುವುದು ಉಪನಿಷತ್ತುಗಳ ವೈಶಿಷ್ಟ್ಯ. ಬ್ರಹ್ಮ-ಆತ್ಮಗಳ ವಿಚಾರವು ಸವಿಸ್ತಾರವಾಗಿ ಉದಾಹರಣ ಪೂರ್ವಕವಾಗಿ ತಿಳಿಸಲ್ಪಟ್ಟಿದೆ. ಉಪನಿಷತ್ತುಗಳು ಮಾನವನು ಮರ್ತ್ಯಲೋಕದಿಂದ ಅಮೃತತತ್ತ್ವಕ್ಕೆ ಏರಲು ನಿರ್ಮಿಸಿದ ಏಣಿಯಂತಿವೆ. ಬ್ರಾಹ್ಮಣಗಳು ಕರ್ಮಕಾಂಡವೆನಿಸಿದರೆ, ಹಲವು ಸಿದ್ಧಾಂತಗಳ ತೌರುಮನೆಯಾದ ಉಪನಿಷತ್ತುಗಳು ಜ್ಞಾನಕಾಂಡವೆನಿಸಿವೆ. ಅಂದರೆ ಉಪನಿಷತ್ತುಗಳು ಕರ್ಮಕ್ಕೆ ಬದಲಾಗಿ ಜ್ಞಾನಮಾರ್ಗವನ್ನು ತೋರಿ ಬೆಳೆಸಿವೆ. ಅನೇಕ ದೇವತೋಪಾಸನೆಯಿಂದ ಏಕದೇವತೋಪಾಸನೆಯ ಕಡೆಗೆ ಇದರ ವಿಚಾರ ಮಾರ್ಗ ಸಾಗಿದೆ.

ಪ್ರಕೃತಿ, ಪುರುಷರಿಗಿಂತ ವಿಲಕ್ಷಣವಾದ ಪರಮಾತ್ಮ ತತ್ತ್ವವನ್ನು ಉಪನಿಷತ್ತುಗಳು ಯಶಸ್ವಿಯಾಗಿ ಪ್ರತಿಪಾದಿಸುತ್ತವೆ. ಭಗವತ್ತತ್ತ್ವವು ಬ್ರಹ್ಮ, ಆತ್ಮ, ಸತ್ಯ ಎಂದು ಹೇಳುತ್ತದೆ. ಈ ಬ್ರಹ್ಮ ತತ್ತ್ವವು ಜಗತ್ತಿಗೆ ಸರ್ವಕಾರಣ, ಏಕಮೇವಾದ್ವಿತೀಯ ಆಗಿ ಜಗತ್ತಿನಲ್ಲಿ ಓತಪ್ರೋತವಾಗಿದೆ ಎನ್ನುತ್ತದೆ. ಈ ದರ್ಶನದ ಸಮಗ್ರವಾದ ಪ್ರತಿಪಾದನೆಗೆ ಬ್ರಹ್ಮಸೂತ್ರಗಳು ಮೀಸಲಾಗಿವೆ.

ಈ ಪ್ರಪಂಚವೆಂಬುದು ಏನು, ನಾವು ಯಾರು, ಮರಣದ ನಂತರ ನಮ್ಮ ಸ್ಥಿತಿ ಏನಾಗುತ್ತದೆ, ಎಂಬೀ ಪ್ರಶ್ನೆಗಳಿಗೆ ನಿರ್ದಿಷ್ಟವಾದ ಉತ್ತರ ಉಪನಿಷತ್ತಿನಲ್ಲಿದೆ.

"ಈ ಪ್ರಪಂಚದಲ್ಲಿ ನಡೆಯುವುದೆಲ್ಲವೂ ಒಂದು ಘನ ಉದ್ದೇಶದಿಂದ, ನಿರ್ದೇಶಿತ ರೀತಿಯಲ್ಲಿ, ಭೌತಿಕ, ಆಧ್ಯಾತ್ಮಿಕ ಎಂಬೆರಡು ಶಾಶ್ವತ ನಿಯಮಗಳಿಗೆ ಒಳಪಟ್ಟು ನಡೆಯುತ್ತದೆ. ಪ್ರಪಂಚದಲ್ಲಿ ಒಳಿತು-ಕೆಡಕುಗಳೆರಡೂ ಇದ್ದರೂ, ಅಂತ್ಯದಲ್ಲಿ ಸದ್ಗುಣವು ಮಾತ್ರ ಸುಖವನ್ನು ತರಬಲ್ಲುದು. ದುಷ್ಟರು ತಮ್ಮ ತಪ್ಪನ್ನು ಅರಿತು ತಿದ್ದಿಕೊಳ್ಳದಿದ್ದರೆ, ಪ್ರಾಮಾಣಿಕತೆಯಿಂದ ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟು ಪರಮಾತ್ಮನ ಕ್ಷಮೆಯನ್ನು ಬೇಡದಿದ್ದರೆ, ಎಲ್ಲವನ್ನೂ ನೋಡಬಲ್ಲ ಹಾಗೂ ಪುಣ್ಯವನ್ನು ಪ್ರೀತಿಸಿ ಪಾಪವನ್ನು ದ್ವೇಷಿಸುವ ಭಗವಂತನು, ಕೆಟ್ಟವರನ್ನು ಹಾಗೂ ತಪ್ಪಿತಸ್ಥರನ್ನು ತಪ್ಪದೆ ಶಿಕ್ಷಿಸುತ್ತಾನೆ. ಎಲ್ಲಕ್ಕೂ ಮಿಗಿಲಾದ, ಎಲ್ಲಕ್ಕೂ ಕಾರಣನಾದ, ವಿಶ್ವವನ್ನೆಲ್ಲ ಆಕ್ರಮಿಸಿ ಎಲ್ಲರ ಮನಸ್ಸಿನಲ್ಲೂ ಪ್ರಕಾಶಿಸುವ, ಆ ಪರಬ್ರಹ್ಮನನ್ನು ಅರಿತರೆ ಆ ಜ್ಞಾನದಿಂದ ನಿರ್ಭಯತೆ, ಅಮರತ್ವ, ಆನಂದಗಳನ್ನು ಪಡೆಯಬಹುದು" ಎಂಬ ಭಾವನೆಗಳು ವಿವರವಾಗಿ, ಗಂಭೀರವಾದ ಶೈಲಿಯಲ್ಲಿ, ವಿಚಾರ ಪ್ರಧಾನವಾದ ಉಪನಿಷತ್ತುಗಳಲ್ಲಿ ನಿರೂಪಿಸಲ್ಪಟ್ಟು, ಸರ್ವಜನ ಸಮ್ಮತವಾಗಲು ಯೋಗ್ಯವೆನಿಸಿಕೊಂಡಿವೆ.

ಅನುಪಮ, ನೂತನ, ಭಾವನೆ-ಉಪಮಾನಗಳಿಂದ ಕೂಡಿರುವ, ವೇದ ಸೂಕ್ತಗಳು ಉತ್ತಮ ಕಾವ್ಯಗಳು. ವೇದಋಷಿಗಳ ಕಲ್ಪನೆಯು ಪಲ್ಲವಿಸಿರುವ ಇವುಗಳ ಅಧ್ಯಯನದಿಂದ ಕಾವ್ಯಾನಂದದ ಲಾಭ ಆಗುತ್ತದೆ.

ವೇದಗಳನ್ನು ಸಂಗ್ರಹಿಸಿದ ಋಷಿಗಳು ಈ ಸೂಕ್ತಗಳ ಮೂಲಕ ಪ್ರಕೃತಿಯ ನಾನಾ ಮುಖ-ಶಕ್ತಿಗಳನ್ನು ದೇವತೆಗಳೆಂದೇ ಸ್ತುತಿಸಿದ್ದಾರೆ. ಪ್ರಕೃತಿಯಲ್ಲಿ ತಾವು ಕಂಡ ಬೆಡಗನ್ನು ಈ ಸೂಕ್ತಿಗಳಲ್ಲಿ ವರ್ಣಿಸಿದ್ದಾರೆ. ಅಗ್ನಿ, ಸೂರ್ಯ, ವರುಣ, ವಾಯು, ಉಷಸ್ಸು, ರಾತ್ರಿ, ಮಿತ್ರ, ದ್ಯೌ, ಆಪಃ, ಪೃಥ್ವಿ, ಸೋಮ ಮುಂತಾದ ದೇವತೆಗಳು ಪ್ರಕೃತಿಯ ಹಲವಾರು ರೂಪಗಳನ್ನು ಪ್ರತಿನಿಧಿಸುತ್ತಾರೆ. ಇಲ್ಲಿ ಪ್ರಕೃತಿಯ ಉಪಾಸನೆಯಿಂದಲೇ ದೇವತಾ ಕಲ್ಪನೆಯು ಆರಂಭವಾಗಿದೆ.

ಬಹು ಮುಖವಾದ ಪ್ರಾಧಾನ್ಯ ಹೊಂದಿರುವ ಈ ಸೂಕ್ತಿಗಳು ಆಕಾಲದ ಜನಜೀವನದ ಬಗ್ಗೆಯೂ ಬೆಳಕು ಚೆಲ್ಲುತ್ತವೆ. ಪ್ರಾಚೀನ ಕಾಲದ ಮತಧರ್ಮ, ಆಧ್ಯಾತ್ಮಿಕ ತತ್ತ್ವ, ನಾಗರಿಕತೆ, ಸಂಸ್ಕೃತಿ, ಆಚಾರ-ವಿಚಾರ, ಮನೋಭಾವ, ನಂಬಿಕೆ, ಆದರ್ಶ, ಐತಿಹಾಸಿಕ ಪರಿಸ್ಥಿತಿ, ಸಮಾಜ ವ್ಯವಸ್ಥೆ, ಆಡಳಿತ ಕ್ರಮ, ಇವುಗಳೆಲ್ಲದರ ಪರಿಚಯ ಮಾಡಿಕೊಳ್ಳಲು ವೇದಗಳ ಅಧ್ಯಯನ ಅನಿವಾರ್ಯವಾದುದು. ವೇದಗಳ ನಿತ್ಯತ್ವ ಹಾಗೂ ಪೌರುಷೇಯತ್ವಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ, ಅವುಗಳಲ್ಲಿ ಅಡಗಿರುವ ವಿಚಾರದ ಮಹತ್ವದ ಬಗ್ಗೆ ಭಿನ್ನಾಭಿಪ್ರಾಯವಿಲ್ಲ.

ವೇದದಲ್ಲಿ ಇರುವ ಇತರ ವಿಚಾರಗಳೆಲ್ಲದರ ಹಿನ್ನೆಲೆಯಲ್ಲಿ ಪ್ರಧಾನವಾಗಿರುವುದು ಆಧ್ಯಾತ್ಮಿಕ ಮನೋಭಾವ. ವೈವಿಧ್ಯಪೂರ್ಣವಾಗಿರುವ ಈ ಜಗತ್ತು ಆತ್ಮನಲ್ಲಿ ಏಕತಾನವಾಗಿದೆ ಎಂಬುದನ್ನು ಋಷಿಗಳು ತಮ್ಮ ಅಂತಃಸತ್ವದ ಪ್ರಭಾವದಿಂದ ಸಾಕ್ಷಾತ್ಕರಿಸಿಕೊಂಡಿದ್ದು ಅದನ್ನೇ ಮಂತ್ರಗಳಲ್ಲಿ ಹೇಳಿದ್ದಾರೆ. ಮಹಾ ಪ್ರಕೃತಿಯಲ್ಲಿ ನಿತ್ಯವಾಗಿರುವ ಶಬ್ದವನ್ನು ತಮ್ಮ ಧ್ಯಾನದಿಂದ ಪಡೆದು, ಸಮಾಧಿಯಲ್ಲಿ ಆ ಸೂಕ್ಷ್ಮರೂಪವನ್ನು ಸಾಕ್ಷಾತ್ಕರಿಸಿಕೊಂಡು, ಆ ದಿವ್ಯಜ್ಞಾನವನ್ನು ಗೂಢವಾಗಿ ಮಂತ್ರಗಳಲ್ಲಿ ಅಡಗಿಸಿದ್ದಾರೆ. ಆದುದರಿಂದಲೇ ವೇದಕ್ಕೆ ಉಳಿದೆಲ್ಲ ಅರ್ಥವೃತ್ತಿಗಳಿಗಿಂತ ಆಧ್ಯಾತ್ಮಿಕ ಅರ್ಥವೃತ್ತಿಯೇ ಹೆಚ್ಚು ಪ್ರಧಾನ, ವ್ಯಾಪಕ ಆಗಿದೆ. ವೇದದ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಇವೆಲ್ಲವೂ ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದು, ಕರ್ಮಜ್ಞಾನ ಭಕ್ತಿಗಳನ್ನು ಪ್ರತಿಪಾದಿಸುತ್ತವೆ. ವೇದದ ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕ ಭಾಗಗಳು ವೇದದ ಪೂರ್ವಭಾಗ, ಉಪನಿಷತ್ತುಗಳು ವೇದದ ಉತ್ತರ ಭಾಗ ಎಂದು ವಿಷಯದ ದೃಷ್ಟಿಯಿಂದ ಬಹು ಹಿಂದೆಯೇ ವೇದವನ್ನು ಎರಡು ಭಾಗವೆಂದು ಪರಿಗಣಿಸಲಾಯಿತು. ವೇದದಲ್ಲಿ ಕರ್ಮಕಾಂಡವೆನಿಸಿದ ಪೂರ್ವಭಾಗದಲ್ಲಿ ವರ್ಣಾಶ್ರಮಾಚಾರ ಯಜ್ಞದಾನ ತಪೋರೂಪವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನೂ, ಭಗವದಾರಾಧನ ಕ್ರಮವನ್ನೂ ವಿವರಿಸಲಾಗಿದೆ ; ಜ್ಞಾನಕಾಂಡವೆನಿಸಿದ ಉತ್ತರ ಭಾಗವು ಕರ್ಮಗಳಿಂದ ಆರಾಧ್ಯನಾದ ಭಗವಂತನ ಸ್ವರೂಪ, ರೂಪ, ವಿಭವ, ಕಾರ್ಯಗಳನ್ನು ತಿಳಿಸುತ್ತದೆ. ಆರಾಧನ ಸ್ವರೂಪವಾದ ಕರ್ಮಗಳಿಂದ ಪರಂಪರೆಯಾಗಿ ಭಗವಂತನನ್ನು ತಿಳಿಸುವ ಪೂರ್ವ ಭಾಗಕ್ಕಿಂತಲೂ, ಸಾಕ್ಷಾತ್ತಾಗಿ ಭಗವಂತನನ್ನೇ ಪ್ರತಿಪಾದಿಸುವ ಉತ್ತರಭಾಗವೇ ಶ್ರೇಷ್ಠವೆಂದು ಗಣಿಸಲ್ಪಟ್ಟುದರಿಂದ, ಉಪನಿಷತ್ತುಗಳ

ಅರ್ಥ ಜ್ಞಾನವನ್ನು ಪಡೆಯಲು ಪ್ರಯತ್ನಿಸಿ, ಸಂಹಿತೆ, ಬ್ರಾಹ್ಮಣ, ಅರಣ್ಯಕಗಳ ಅರ್ಥವಿಚಾರ—ಅಧ್ಯಯನಗಳಿಗೆ ಗಮನ ನೀಡದೆ ಉದಾಸೀನ ಮಾಡಲಾಗಿದೆ.

ವೇದಗಳಲ್ಲಿರುವ ಅನಿರ್ವಚನೀಯವಾದ ಶಕ್ತಿಯು ಓದುಗರಲ್ಲಿ ಮಹತ್ತಾದ ಪರಿಣಾಮವನ್ನು ಉಂಟುಮಾಡಬಲ್ಲುದು. ಅದು ಜೀವನದಲ್ಲಿ ಆದರ್ಶವನ್ನು ನಮಗೆ ರೂಪಿಸಿಕೊಡುತ್ತದೆ. ಅನೇಕ ಜನ್ಮಗಳ ಪುಣ್ಯಫಲದಂತೆ ಇರುವ ಐಹಿಕವನ್ನು ತೆಗಳದೆ, ಅದನ್ನು ನಮಗೂ ನಮ್ಮ ಸುತ್ತಮುತ್ತಲಿನವರಿಗೂ ಒಪ್ಪುವಂತೆ ಹಸನಾಗಿಸಿ, ಹದಗೊಳಿಸಿ, ಅದರ ಆಧಾರದ ಮೇಲೆ ಆತ್ಮ ಸಾಕ್ಷಾತ್ಕಾರವನ್ನು ಸಾಧಿಸಿಕೊಳ್ಳುವ ಮಾರ್ಗವನ್ನು ವೇದಾಧ್ಯಯನದಿಂದ ನಾವು ಅರಿತುಕೊಳ್ಳಬಹುದು. ಐಹಿಕದೊಡನೆ ಆಧ್ಯಾತ್ಮಿಕ ಜೀವನದ ಮೌಲ್ಯವನ್ನು ಸ್ಥಾಪಿಸುವ, ಲೌಕಿಕ ವಿಚಾರದ ಆಧಾರದ ಮೇಲೆ ಧಾರ್ಮಿಕ ಮಹತ್ವಗಳ ಸಾಧನೆಯ ಉದ್ದೇಶವಿರುವ, ವೇದಗಳು ಪರಮೋಪಕಾರಿ ಆಗಿವೆ.

ವೇದಾಧ್ಯಯನವಿಲ್ಲದೆ ಭಾರತೀಯರ ಆಧ್ಯಾತ್ಮಿಕ ದೃಷ್ಟಿಯ ಪರಿಚಯ ಮಾಡಿಕೊಳ್ಳಲು ಸಾಧ್ಯವಿಲ್ಲ. ನಮ್ಮ ಪ್ರಾಚೀನ ಋಷಿಗಳ ಸಂಪ್ರದಾಯಗಳ ಗೂಢಾರ್ಥವನ್ನೆಲ್ಲ ಸಮಂಜಸವಾಗಿ ತಿಳಿದುಕೊಂಡು, ಆಧುನಿಕ ಕಾಲದ ವಿಮರ್ಶನ ಪದ್ಧತಿಯನ್ನು ಅಳವಡಿಸಿಕೊಂಡರೆ, ಪವಿತ್ರವಾದ ವೇದಗಳಿಗೆ ನಿಖರ, ನಿರ್ದುಷ್ಟ, ಸರ್ವಸಮ್ಮತ ಆದ ಅರ್ಥವೃತ್ತಿಯನ್ನು ಯೋಜಿಸಲು ನಾವು ಸಮರ್ಥರಾಗುತ್ತೇವೆ.

## (5) ವೇದರಕ್ಷಣೆ

ಎಲ್ಲ ಜ್ಞಾನದ ಮೂಲವಾದ ವೇದಗಳ ಸ್ಥಾನ ಅತ್ಯಂತ ಗೌರವಯುತವಾದುದು. ಯಾವನೊಬ್ಬ ಪುರುಷನಿಂದಲೂ ರಚಿಸಲ್ಪಡದೆ, ಭಗವಂತನಂತೆಯೇ ಸ್ವಯಂ ವ್ಯಕ್ತ, ಅನಾದಿ, ಅವಿಚ್ಛಿನ್ನ ಪರಂಪರಾಪ್ರಾಪ್ತ ಆಗಿರುವುದರಿಂದ, ವೇದಗಳು ಯಾವ ತಪ್ಪನ್ನೂ ಹೊಂದಿರದೆ ಹಿಂದೂಗಳಿಗೆ ಪರಮಪ್ರಮಾಣವಾಗಿದೆ. ಭಾರತೀಯರ ಆಚಾರ ವಿಚಾರ, ಧರ್ಮ ಕರ್ಮ, ಬಾಳು ಬದುಕು, ಇವನ್ನೆಲ್ಲ ಅರಿಯಲು ವೇದಗಳ ತಿಳಿವಳಿಕೆ ಅವಶ್ಯಕ. ಭಾರತೀಯ ಧರ್ಮದರ್ಶನಗಳ ರಸಘಟ್ಟಿಯಾದ ವೇದವನ್ನು ಅಧ್ಯಯನ ಮಾಡಿ, ಅದರ ಅರ್ಥವನ್ನು ತಿಳಿದು, ಅದನ್ನು ನಡವಳಿಕೆಯಲ್ಲಿ ತಂದು, ಆತ್ಮೋದ್ಧಾರ ಮಾಡಿಕೊಳ್ಳಬೇಕು ಎಂದು ನಮ್ಮ ಋಷಿಗಳು ಆಜ್ಞಾಪಿಸಿದ್ದಾರೆ.

ಪ್ರತ್ಯಕ್ಷ, ಅನುಮಾನ, ಪ್ರಮಾಣಗಳಿಗೆ ಅಗೋಚರವಾದ ಅಲೌಕಿಕ ಉಪಾಯವನ್ನು ತಿಳಿಸುವ ವೇದಗಳನ್ನು ನಮ್ಮ ಜನ ಬಹಳ ಹಿಂದಿನ ಕಾಲದಿಂದಲೂ ಬಹು ಎಚ್ಚರಿಕೆಯಿಂದ ರಕ್ಷಿಸಿಕೊಂಡು ಬಂದಿದ್ದಾರೆ. ವೇದದ ರಕ್ಷಣೆ ಅದರ ಸರಿಯಾದ ಅಧ್ಯಯನದಿಂದಲೇ ಸಾಧ್ಯ ಎಂಬುದನ್ನು ಅರಿತಿದ್ದ ನಮ್ಮ ಋಷಿಗಳು ಅದರ ಸತತ ಅಧ್ಯಯನಕ್ಕೆ ತುಂಬಾ ಪ್ರಾಶಸ್ತ್ಯ ನೀಡಿದ್ದಾರೆ.

ಅಪಾರವಾದ ವೇದ ಸಾಹಿತ್ಯವನ್ನು ಸ್ವರವರ್ಣ ವಿಶಿಷ್ಟವಾಗಿ ಕಾಪಾಡುವ ಸಲುವಾಗಿ ನಮ್ಮ ವೈದಿಕ ಬ್ರಾಹ್ಮಣರು ಮತ್ತು ಪ್ರಾಚೀನ ಋಷಿಗಳು ಬಹುವಾಗಿ ಶ್ರಮಿಸಿದ್ದಾರೆ. ಬಹು ಕಠಿಣ ತಪಸ್ಸು, ಪ್ರಯತ್ನ, ತ್ಯಾಗ, ಬಲಿದಾನ ಮಾಡಿದ್ದಾರೆ. ಧನ, ಮಾನ ಆದಿ ಲೌಕಿಕ ಸುಖವನ್ನು ತ್ಯಜಿಸಿ ಪ್ರಾಚೀನ ಕಾಲದಲ್ಲಿ ಶ್ರೇಷ್ಠ ದರ್ಜೆಯ ವೇದಜ್ಞ ಬ್ರಾಹ್ಮಣ ಸಮುದಾಯವು ನಾಲ್ಕು ವೇದಗಳನ್ನು ಕಂಠ ಪಾಠ ಮಾಡಿಕೊಂಡಿದ್ದಿತು. ವೇದಗಳನ್ನು ಗುರುಗಳ ಬಾಯಿಂದ ಶುದ್ಧ ಉಚ್ಚಾರಣೆ ಸಹಿತ ಕೇಳಿದುದನ್ನು ಅಪೇ ರೀತಿಯಾಗಿ ಸ್ವರವರ್ಣ ಸಹಿತ ಕಂಠಪಾಠ ಮಾಡದಿದ್ದರೆ ಅಂತಹ ಪಾಠವು ವ್ಯರ್ಥ, ಪಾಪಕರ ಎಂಬ ಭಾವನೆ ಇದ್ದುದರಿಂದ, ಸಂಪ್ರದಾಯಾನುಸಾರ ವಾಗಿ ಅಧ್ಯಯನ ಮಾಡಿರುವ ವೇದಜ್ಞರಿಂದ ಆಯಾ ವೇದದ ಪೂರ್ಣ ಪಾಠವನ್ನು ಪುಸ್ತಕಗಳ ಸಹಾಯವಿಲ್ಲದೆ ತಿಳಿದುಕೊಳ್ಳಬಹುದು.

ಪವಿತ್ರವಾದ ಜ್ಞಾನ ಭಂಡಾರವೆನಿಸಿದ ವೇದಗಳ ಪಾರಿಶುದ್ಧ್ಯ, ಮಹತ್ವ, ವೀರ್ಯಗಳಿಗೆ ಭಂಗ ಬರದಂತೆ ಇರಲು ಅದರಿಂದ ಬರವಣಿಗೆಯನ್ನು ದೂರ ಮಾಡಿದ್ದರು. ಬರೆದುದನ್ನು ಓದುವ ಲಿಖಿತ ಪಾಠಕನನ್ನು ಪಾಠಕಾಧಮ ಎಂದು ಕರೆಯಲಾಗುತ್ತಿತ್ತು. ಆದ ಕಾರಣ ಲೇಖನ ಕಲೆಯ ಉತ್ಕೃಷ್ಟ ಜ್ಞಾನವಿದ್ದರೂ, ಲಿಪಿ-ಗ್ರಂಥಗಳ ಪರಿಚಯವಿದ್ದರೂ, ಈ ಪವಿತ್ರವಾದ ಅಪಾರಜ್ಞಾನ ರಾಶಿಯು ಒಬ್ಬರ ಹೃದಯದಿಂದ ಮತ್ತೊಬ್ಬರ ಹೃದಯಕ್ಕೆ ಧಾರೆ ಎರೆಯಲ್ಪಡುತ್ತಿದ್ದಿತು. ಅಖಂಡ ವೇದಾಧ್ಯಯನಕ್ಕೆ ಲೇಖನದ ಸಹಾಯ ಅನಾವಶ್ಯಕವೆಂದು ತಿಳಿದಿದ್ದ ಋಷಿಗಳು, ಶ್ರುತಿಗಳನ್ನು ಬರವಣಿಗೆಗೆ ಒಳಪಡಿಸಕೂಡದು ಎಂದು ಕಟ್ಟಾಜ್ಞೆ ಮಾಡಿದ್ದರು. ಕೇವಲ ಸ್ಮರಣ ಶಕ್ತಿಯಿಂದಲೇ ನಮ್ಮವರು ಈ ಜ್ಞಾನ ರಾಶಿಯನ್ನು ತಪ್ಪಿಲ್ಲದೆ ರಕ್ಷಿಸಿಕೊಂಡು ಬಂದಿರುವುದು ಆಶ್ಚರ್ಯವಾದ ವಿಷಯ. ಈ ಕಾರಣದಿಂದ ಸಂಪೂರ್ಣ ವೇದದಲ್ಲಿ ಒಂದೇ ಒಂದು ಪಾಠ ಭಿನ್ನತೆ, ಉದಾತ್ತ ಅನುದಾತ್ತ ಸ್ವರಭೇದಗಳು ಉಂಟಾಗಲಿಲ್ಲ. ಇಷ್ಟು ದೀರ್ಘಕಾಲದ ನಂತರವೂ ವೇದದ ಒಂದು ಅಕ್ಷರವೂ ಸ್ಖಲಿತವಾಗದೆ, ಚ್ಯುತವಾಗದೆ, ಶುದ್ಧವಾದ ಪಾಠದಲ್ಲಿ ಇಂದೂ ಉಪಲಬ್ಧವಾಗಿದೆ.

ಪ್ರಾಚೀನ ಋಷಿಗಳು ಯೋಜಿಸಿದ ವಿಕೃತಿಗಳ ಫಲವಾಗಿ ವೇದಗಳ ರೂಪ ಜ್ಞಾನದಲ್ಲಿ ಯಾವ ರೀತಿಯ ತ್ರುಟಿಯೂ ಉಂಟಾಗದೆ ಸ್ವರಶುದ್ಧವಾಗಿ ಉಳಿದಿದೆ. ಮೂಲವೇದದ ವರ್ಣಮಾತ್ರದಲ್ಲಿಯೂ ಯಾವುದೇ ರೀತಿಯ ವ್ಯತ್ಯಾಸವಾಗದಿರಲೆಂದು ವೇದಪಠನಕ್ಕೆ ಹಲವು ಪದ್ಧತಿಯನ್ನು ನಿರೂಪಿಸಿಕೊಂಡಿದ್ದರು. ಸಂಹಿತೆ, ಪದ, ಕ್ರಮ, ಜಟೆ, ಮಾಲಾ, ಶಿಖಾ, ರೇಖಾ, ಧ್ವಜ, ದಂಡ, ರಥ, ಘನ. ಇವು ವಿಕೃತಿಗಳು. ಸಂಹಿತೆಯನ್ನು ಭಗವಂತ, ಪದವನ್ನು ರಾವಣ, ಕ್ರಮವನ್ನು ಬಾಭ್ರವ್ಯ, ಜಟೆಯನ್ನು ವ್ಯಾಡಿ, ಮಾಲಾವನ್ನು ವಸಿಷ್ಠ, ಶಿಖಾವನ್ನು ಭೃಗು, ರೇಖಾವನ್ನು ಅಷ್ಟಾವಕ್ರ, ಧ್ವಜವನ್ನು ವಿಶ್ವಾಮಿತ್ರ, ದಂಡವನ್ನು ಪರಾಶರ,

ರಥವನ್ನು ಕಶ್ಯಪ, ಘನವನ್ನು ಅತ್ರಿ ಎಂಬ ಋಷಿಗಳು ಪ್ರಚಾರ ಮಾಡಿದರು. ಪ್ರತಿಯೊಂದು ವೇದಮಂತ್ರವನ್ನೂ ಹೀಗೆ ಹನ್ನೊಂದು ವಿಧಗಳಲ್ಲಿ ಹಿಂದೆ, ಮುಂದೆ, ಮುಂದೆ, ಹಿಂದೆ, ಆರೋಹ ಅವರೋಹ ಮಾಡಿ, ಅನೇಕ ರೀತಿಯ ವ್ಯಾಯಾಮಗಳ ಹಾಗೆ ಮಾಡುತ್ತ ಕಲಿತು ಕಲಿಸಿದುದರಿಂದ ಪದಗಳ ಆವೃತ್ತಿ ಅನೇಕ ಬಾರಿ ಆಗಿ, ಪದಗಳ ರೂಪ ಸ್ವರಗಳು ಸ್ಖಲಿತವಾಗದೆ ಪರಿಶುದ್ಧವಾಗಿ ಉಳಿದಿವೆ. ಹೀಗೆ ವೇದ ಪಾಠದ ರಕ್ಷಣೆಗಾಗಿ ಅಭೇದ್ಯವಾದ ದುರ್ಗವೊಂದು ರಚಿತವಾಗಿದ್ದುದರ ಪರಿಣಾಮವಾಗಿ ಪ್ರಾಚೀನ ಕಾಲದ ಶುದ್ಧ, ಪ್ರಾಮಾಣಿಕ ಆದ ಪಾಠದಲ್ಲಿಯೇ ಇಂದೂ ವೇದಗಳು ಉಪಲಬ್ಧವಾಗಿವೆ. ಇದು ಪ್ರಪಂಚದ ಇತಿಹಾಸದಲ್ಲಿಯೇ ಅತ್ಯಾಶ್ಚರ್ಯಕರವಾದ ವಿಷಯ. ಈಗ ಸಂಹಿತಾ, ಪದ, ಕ್ರಮ, ಜಟಾ, ಘನ ಎಂಬ ಐದು ವಿಕೃತಿಗಳ ಮೂಲಕ ವೇದವನ್ನು ಕಂಠಗತ ಮಾಡಿ ಯಾವಜ್ಜೀವವೂ ನೆನಪಿನಲ್ಲಿಡಲು ಪ್ರಯತ್ನ ಮಾಡಲಾಗುತ್ತಿದೆ.

## (6) ವೇದಗಳ ಸಂದೇಶ

ವೇದಗಳ ಮೇಲೆ ನಿಂತ ಆರ್ಯ ಧರ್ಮವು ಇಹ-ಪರಗಳ ಸರ್ವೋಚ್ಚ ಹಾಗೂ ಪವಿತ್ರ ಜೀವನವನ್ನು ಸಾಧಿಸಲು ನೆರವಾಗುತ್ತದೆ ಎಂದು ಪೌರಸ್ತ್ಯ-ಪಾಶ್ಚಾತ್ಯ ವಿದ್ವಾಂಸರೆಲ್ಲರೂ ಹೇಳಿದ್ದಾರೆ. ವಿಶ್ವದ ಅತಿ ಪ್ರಾಚೀನ, ಪವಿತ್ರ, ಧಾರ್ಮಿಕ ಗ್ರಂಥವಾದ ವೇದವು ಇಂದೂ ಭಾರತೀಯ ವಿಚಾರ-ಜೀವನಗಳ ಮೇಲೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಪ್ರಭಾವ ಬೀರುತ್ತಿದೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ರಾಜಾರಾಮ ಮೋಹನರಾಯ, ಸ್ವಾಮಿ ದಯಾನಂದ ಸರಸ್ವತಿ ಇಬ್ಬರೂ ವೇದಗಳ ಆಧಾರದಿಂದಲೇ ಭಾರತದ ಧರ್ಮ ಸಮಾಜಗಳನ್ನು ಸುಧಾರಿಸಲು ಯತ್ನಿಸಿದ್ದಾರೆ. ಅರ್ಥವನ್ನು ತಿಳಿದುಕೊಳ್ಳದೆ, ವೇದಗಳನ್ನು ಕಲಿಯುವ ಹಾಗೂ ವೈದಿಕ ಕರ್ಮಗಳನ್ನು ಮಾಡುವ ಅಭ್ಯಾಸ ಬಹುಜನರಲ್ಲಿ ಬೆಳೆದು ಬಂದಿದ್ದರೂ, ಆಧುನಿಕ ವಿದ್ಯಾವಂತ ಯುವಜನರು ವೇದದ ಅರ್ಥ ಹಾಗೂ ವೇದ-ಜೀವನಗಳಲ್ಲಿ ಇರುವ ಸಂಬಂಧ, ವೇದಗಳಿಂದ ಆಗುವ ಪ್ರಯೋಜನ, ಇವುಗಳನ್ನೆಲ್ಲ ತಿಳಿಯಲು ಉತ್ಸುಕರಾಗಿರುವುದು ಸಂತಸದ ವಿಷಯ. ಸಾಯಣರು ವೇದಗಳಿಗೆ ಭಾಷ್ಯ ರಚಿಸಿ ಸಹಾಯ ಮಾಡಿದ್ದಾರೆ.

ವೇದಗಳಲ್ಲಿ ತತ್ತ್ವ-ವ್ಯವಹಾರ ಎರಡೂ ಇದೆ. ಪ್ರಪಂಚ, ಜೀವಾತ್ಮ, ಪರಮಾತ್ಮ ಈ ಮೂರರ ಬಗ್ಗೆ ಹಾಗೂ ಇವುಗಳ ಮಧ್ಯೆ ಇರುವ ಸಂಬಂಧಗಳ ಬಗ್ಗೆ, ಮೋಕ್ಷ ಪಡೆಯುವ ಉಪಾಯದ ಬಗ್ಗೆ, ವೇದಗಳ ತತ್ತ್ವಭಾಗವಾದ ಜ್ಞಾನಕಾಂಡದಿಂದ ತಿಳಿದು ಬರುತ್ತದೆ. ಹಾಗೆಯೇ ಅಭಿವೃದ್ಧಿ ಹೊಂದಲು ಬೇಕಾದ ವೈದಿಕ ಕರ್ಮಗಳ ಬಗ್ಗೆ ವ್ಯಾವಹಾರಿಕ ಭಾಗವಾದ ಕರ್ಮಕಾಂಡದಿಂದ ತಿಳಿಯಬಹುದು. ಮಾನವರ ವೈಯುಕ್ತಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಸಹಾನುಭೂತಿಯಿಂದ

ಅರ್ಥಮಾಡಿಕೊಂಡು, ಅವುಗಳಿಗೆ ಪರಿಹಾರ ಸೂಚಿಸಿ, ಒಳ್ಳೆಯ ಜೀವನ ನಡೆಸೇ ಬೇಕಾದ ಯೋಜನೆ ವೇದದಲ್ಲಿದೆ. ಮಾತು-ಮನಸ್ಸುಗಳಿಗೆ ಅಗೋಚರನಾ ಭಗವಂತನು ಮಾನವನ ಬುದ್ಧಿಗೆ ನಿಲುಕುವಂತೆ ಮಾಡಿ, ಅವನನ್ನು ಸುಪ್ರೀತನಾ ಸಲು ಮಾಡುವ ಕರ್ಮವೂ ಮಾನವನಿಗೆ ಎಟುಕುವಂತೆ ಮಾಡಲಾಗಿದೆ.

ಹೀಗೆ ವಿಶ್ವ ಸಂಸ್ಕೃತಿಯ ಮೂಲಾಧಾರ, ಸರ್ವಮಾನವರಿಗೂ ಅನ್ವಯಿಸು ಸರ್ವ ಶ್ರೇಷ್ಠ ಜ್ಞಾನ ರಾಶಿ ಆದ ವೇದಜ್ಞಾನವು ಅಚ್ಚುಕಟ್ಟಾದ ಮಾನವ ಜೀವನ ಅತ್ಯವಶ್ಯಕವಾದುದು. ವ್ಯಕ್ತಿಯ ಆತ್ಮೋನ್ನತಿಗೆ, ಆಧ್ಯಾತ್ಮಿಕ ಉತ್ಕರ್ಷಕ್ಕೆ ಮತ್ತು ಅಭ್ಯುದಯ ಜೀವನಕ್ಕೆ ಉಪಯುಕ್ತವಾದುದು. ಗರ್ಭಾಧಾನದಿಂದ ಹಿಡಿದ ಅಂತ್ಯಕ್ರಿಯೆಯವರೆಗೆ ಇಡೀ ಮಾನವನ ಜೀವನವು ವೈದಿಕ ಮಂತ್ರಗಳ ಪಠಣದಿಂ ಪೂತವಾಗಬೇಕಾಗಿದೆ. ವೇದದ ನೀತಿಯನ್ನು ಅನುಸರಿಸುತ್ತಿದ್ದಾಗ ಆರ್ಯರ ಜಗತ್ತಿನ ಗುರುಗಳಾಗಿದ್ದರು. ನಾಡಿನಲ್ಲಿ ಸುಖಶಾಂತಿ ಸಮೃದ್ಧಿ ಇದ್ದಿತು. ಇಹಪ ಗಳ ಕಲ್ಯಾಣಕಾರಕವಾಗಿರುವ ವೇದಜ್ಞಾನವು ವಿಜ್ಞಾನಕ್ಕೆ ಪೂರಕವಾಗಿದೆ. ವೇ ಗಳಲ್ಲಿ ಮಾನವರಿಗೆಲ್ಲ ಅನ್ವಯಿಸುವ ಆಚಾರ, ವಿಚಾರ, ಆಹಾರ, ವಿಹಾರ, ವ್ಯವಹಾ ಎಲ್ಲದರ ಸಮತೋಲನದ ತಾಳಮೇಳದ ಸತ್ಯಜ್ಞಾನ ಭಂಡಾರವನ್ನು ಕಾಣಬಹುದು ಸಮಸ್ತ ಸತ್ಯ ವಿದ್ಯೆಗಳ ಸಾರಸಂಗ್ರಹವಾಗಿರುವ ಈ ವೇದಗಳನ್ನು ಓದಿ, ಓದಿಸಿ ಶ್ರವಣ ಮಾಡಿ, ಶ್ರವಣಮಾಡಿಸಿ, ಪುಣ್ಯ ಸಂಪಾದನೆ ಮಾಡಬೇಕು ಎಂಬುದು ಬಹ ಜನರ ಆಸೆ.

೧

ಪರಮಾತ್ಮನ ಪ್ರಧಾನವಾದ ಹೆಸರು ಓಂ. ಸಕಲ ಜೀವರಿಗೂ ನಿವಾಸಸ್ಥಾ ವಾಗಿರುವ ಕಾರಣ ನಾರಾಯಣ, ಸರ್ವ ಜಗತ್ತನ್ನೂ ರಚಿಸಿರುವುದರಿಂದ ಬ್ರಹ್ಮ, ಸರ್ವತ್ರ ವ್ಯಾಪಿಸಿರುವುದರಿಂದ ವಿಷ್ಣು, ದುಷ್ಟರನ್ನು ದಂಡಿಸಿ ಅಳಿಸುವುದರಿಂದ ರುದ್ರ, ಸಮರ್ಥನಾದುದರಿಂದ ಈಶ್ವರ, ಎಂದು ಅವನನ್ನು ವಿವಿಧ ಹೆಸರಿನಿಂದ ಕರೆಯಲಾಗುತ್ತದೆ.

ಸಮಸ್ತಲೋಕಗಳ ವ್ಯವಹಾರವೆಲ್ಲ ಬ್ರಹ್ಮ ವಸ್ತುವಿಗೆ ಅಧೀನವಾಗಿ ಅದರಿಂದ ಸೃಷ್ಟಿ ಸ್ಥಿತಿ ಲಯಗಳು ನಡೆಯುತ್ತವೆ. ಸರ್ವಕ್ಕೂ ಕಾರಣನಾದ ಈ ಪರಮಾತ್ಮನು ಸರ್ವವನ್ನೂ ಅತಿಶಯಿಸಿದವ, ನಿಸ್ಸೀಮಾಭ್ಯಧಿಕ, ಸರ್ವಶಕ್ತ, ಮಹತ್ತಿಗಿಂತ ಮಹತ್ತು, ಅಣುವಿಗಿಂತ ಅಣು ಆಗಿದ್ದಾನೆ. ಸರ್ವವನ್ನೂ ವ್ಯಾಪಿಸಿ ಸರ್ವಭೂತ ಗಳಿಗೂ ಅಂತರಾತ್ಮನಾಗಿದ್ದಾನೆ. ಎಲ್ಲರ ಹೃದಯ ಗುಹೆಯನ್ನು ಪ್ರವೇಶಿಸುವ ಇವನು ದುರ್ದರ್ಶನಾಗಿದ್ದಾನೆ. ಇವನಿಗೆ ಶರೀರವಾಗಿರುವ ಸರ್ವಭೂತಗಳೊಳಗೇ ಅಂತರ್ಯಾಮಿಯಾಗಿದ್ದರೂ ಅವು ಇವನನ್ನು ಅರಿಯವು. ಹಸಿವು, ಬಾಯಾರಿಕೆ, ಶೋಕ, ಪಾಪ, ಮುಪ್ಪು, ಸಾವುಗಳಿಂದ ದೂರನಾದ ಇವನು ಪೂರ್ಣಕಾಮ,

ಸತ್ಯಸಂಕಲ್ಪ, ಶಾಶ್ವತ, ಮಂಗಳಕರ, ಚ್ಯುತಿಯಿಲ್ಲದವ, ಸತ್ಯಜ್ಞಾನ ವಿಜ್ಞಾನ ಸ್ವರೂಪಿ, ಅನಂತ, ಆನಂದ, ನಿಷ್ಕ್ರಿಯ, ನಿಷ್ಕಲ, ನಿರ್ವಿಕಾರ, ನಿರವದ್ಯ,ನಿರಂಜನ, ಶಾಂತ ಆಗಿದ್ದಾನೆ. ಎಲ್ಲ ಆತ್ಮರುಗಳಿಗೂ ಈಶ್ವರ, ದೇವತೆಗಳಿಗೆ ಪರಮದೇವ, ವಿಶ್ವಕ್ಕೆ ಪತಿ ಆಗಿದ್ದಾನೆ. ಸರ್ವವೂ ಇವನ ವಶದಲ್ಲಿದ್ದು ಇವನು ಎಲ್ಲರನ್ನೂ ಆಳುತ್ತಾನೆ. ಇವನಿಗೆ ಒಡೆಯರು ಯಾರೂ ಇಲ್ಲ. ಈ ಪರಮಾತ್ಮನಲ್ಲಿ ಎಲ್ಲ ಭೂತ, ದೇವತೆ, ಆತ್ಮ, ಲೋಕಗಳು ಅಡಕವಾಗಿವೆ. ಇವನ ಆಜ್ಞೆಯಿಂದಲೇ ಸೂರ್ಯ, ಚಂದ್ರ, ಲೋಕ, ಕಾಲವಿಶೇಷ, ನದಿ ನಿಂತಿವೆ, ಕಾರ್ಯ ಮಾಡುತ್ತವೆ. ತನ್ನನ್ನು ಭಜಿಸುವ ಭಕ್ತರಿಗೆ ಪರಮಫಲವನ್ನು ದೊರಕಿಸಿ ಕೊಡುವ ಸೇತು ಆಗಿದ್ದಾನೆ.

ಇವನು ಪ್ರೇರಕ, ಪ್ರೇಕ್ಷನೇ ಹೊರತು ಕರ್ಮಕಾರಿ ಅಲ್ಲ. ಕರ್ಮಫಲಭೋಕ್ತನಲ್ಲ. ಅನ್ಯಾಯ, ಪಾಪಕೆಲಸ ಮಾಡದವ. ಜನನ ಮರಣಗಳಚಕ್ರ ಸೋಂಕದವ. ಜೀವ ಪ್ರಕೃತಿಗಳ ಮೇಲೆ ಅಧಿಕಾರ ಉಳ್ಳವ. ಎಲ್ಲ ರೀತಿಯ ಗುಣಶಕ್ತಿಗಳ ಕಾರಣಕರ್ತ.

ಇಂತಹವನ ಉಪಾಸನೆ, ಧ್ಯಾನ, ಪೂಜೆ ಮಾಡುವುದು ಯೋಗ್ಯವಾದುದು. ಭೂಮಿಯ ಮೇಲೆ ಇದ್ದ, ಇರುವ, ಇರಬಲ್ಲ ಅತ್ಯಂತ ಮಹಿಮೆಯ ದೈವವೇ ಮಾನವ. ಮಾನವನಾಗಿ ಗೋಚರಿಸುವ ಆತ್ಮದ ಪರಮ ಮಹಿಮೆ ವೈಭವಗಳನ್ನು ಗ್ರಂಥಗಳಾಗಲಿ, ವಿಜ್ಞಾನ ಶಾಸ್ತ್ರಗಳಾಗಲಿ ಧರ್ಮಗ್ರಂಥಗಳಾಗಲಿ ಊಹಿಸಲು ಅಸಮರ್ಥವಾಗಿವೆ.

೨

ಜೀವಾತ್ಮನು ಅಲ್ಪಜ್ಞ. ಕರ್ಮಸ್ವತಂತ್ರ್ಯ, ಕರ್ಮಫಲಭೋಕ್ತ, ದೇಹಧಾರಿ ಚೇತನ. ಪಕ್ಷಪಾತ, ಅನ್ಯಾಯ, ಪಾಪಕಾರ್ಯ ಮಾಡುವವ. ರಾಗದ್ವೇಷಯುಕ್ತ, ಜನನ ಮರಣ ಚಕ್ರದಲ್ಲಿ ತಿರುಗುತ್ತಿರುವವ.

ಮನಸ್ಸಿನಲ್ಲಿ ಅನ್ಯರಿಗೆ ಕೇಡು ಬಗೆಯುವ ವಿಚಾರ ಹಾಗೂ ಆತ್ಮನ ಮೇಲೆಬಿದ್ದ ಪಾಪಸಂಸ್ಕಾರಗಳು ಮಲ; ಹಗಲು ರಾತ್ರಿ ನಿರಂತರವಾಗಿ ವಿಷಯಗಳ ಚಿಂತನ ಮಾಡುವುದು ಹಾಗೂ ಮನಸ್ಸಿನ ಧೈರ್ಯಹೀನತೆಗಳು ವಿಕ್ಷೇಪ; ಪ್ರಪಂಚದ ನಶ್ವರ ವಸ್ತುಗಳ ಮೇಲಿನ ಅಭಿಮಾನದ ತೆರೆಯು ಮನಸ್ಸಿನ ಮೇಲೆ ಬಿದ್ದಿರುವುದು ಆವರಣ. ಅನುಭವದಿಂದ ಪರಮಾತ್ಮನನ್ನು ತಿಳಿದುಕೊಳ್ಳಲು ಮಾನವನು ತನ್ನ ಮನಸ್ಸಿನಲ್ಲಿರುವ ಈ ಮಲ, ವಿಕ್ಷೇಪ, ಆವರಣ ಎಂಬ ಮೂರು ಬಗೆಯ ದೋಷಗಳನ್ನು ದೂರೀಕರಿಸಬೇಕು. ಈ ದೋಷಗಳನ್ನು ಹೋಗಲಾಡಿಸಿಕೊಳ್ಳಲು ಜ್ಞಾನ, ಕರ್ಮ, ಉಪಾಸನೆ ಎಂಬ ಮೂರು ಸಾಧನಗಳಿವೆ.

ಯಾವುದೇ ವಿಷಯದ ಬಗ್ಗೆ ಇದ್ದುದನ್ನು ಇದ್ದಂತೆ ತಿಳಿದುಕೊಳ್ಳುವುದು ಜ್ಞಾನ; ಶರೀರ-ಆತ್ಮಗಳ ಉನ್ನತಿಗಾಗಿ ಹಾಗೂ ಉನ್ನತಿ ಸಾಧಕವಾದ ಸಾಧನಗಳ ಪ್ರಾಪ್ತಿಗಾಗಿ ಯತ್ನಿಸುವುದು ಕರ್ಮ; ಪರಮಾತ್ಮನ ಕಲ್ಯಾಣಗುಣಗಳಿಂದ ಜೀವಾತ್ಮನ

ದೋಷಗಳನ್ನು ನಿವಾರಿಸಿಕೊಳ್ಳುವುದು ಉಪಾಸನೆ. ಹೀಗೆ ಜ್ಞಾನದಿಂದ ಮ
ಕರ್ಮದಿಂದ ವಿಕ್ಷೇಪ, ಉಪಾಸನೆಯಿಂದ ಆವರಣ ದೋಷಗಳು ದೂರವಾಗುತ್ತ
ದೋಷ ದೂರವಾದಾಗ ಜೀವಾತ್ಮನು ಪರಮಾತ್ಮನ ದರ್ಶನ ಅನುಗ್ರಹಗಳಿಗೆ ಯೋ
ನಾಗುತ್ತಾನೆ. ಜ್ಞಾನ, ಕರ್ಮ, ಉಪಾಸನೆ ಸರಿಯಾಗಿದ್ದಲ್ಲಿ ನೀತಿ, ಧರ್ಮ, ಗೆಲು
ಇರುತ್ತದೆ.

೩

ಅನ್ಯರಿಗೆ ಹಾನಿ ಬಗೆಯಲು, ಆರೋಗ್ಯ ಸಂಪತ್ತು ಕೀರ್ತಿಗಳಿಸಲು, ಭಗವಂ
ಪೂಜೆ ಮಾಡಿದರೆ, ಆತ್ಮೋದ್ಧಾರ ಹಾಗೂ ಪರಮಾತ್ಮನ ಸಾಕ್ಷಾತ್ಕಾರ ಆಗಲಾರದ
ತ್ರಿಕರಣ ಶುದ್ಧ ಮನಸ್ಕನಾಗಿ, ಸ್ವಾರ್ಥರಹಿತ ನಿಷ್ಕಾಮ ಭಾವದಿಂದ ಮಾಡ
ಉಪಾಸನೆ, ಪೂಜೆ, ಸ್ತುತಿ, ಪ್ರಾರ್ಥನೆಗಳಿಂದ ಮಾತ್ರ ಆತ್ಮೋನ್ನತಿ, ಭಗವಂ
ಸಾಕ್ಷಾತ್ಕಾರ ಆಗುತ್ತದೆ.

ಜಗತ್ತಿನ ಜಡ ಪದಾರ್ಥಗಳಿಂದ ಚೇತನ ಸ್ವರೂಪಿಯಾದ ಜೀವಾತ್ಮನ ಉ
ಆಗಲಾರದು. ಪರಮಾತ್ಮನೇ ಸುಖ, ಆನಂದಗಳ ಭಂಡಾರ. ಜೀವಾತ್ಮನ ಕ್ರಿ
ಶೀಲತೆ, ಪ್ರಯತ್ನಗಳನ್ನು ಸಾರ್ಥಕಗೊಳಿಸುವ ತತ್ತ್ವವೇ ಸಚ್ಚಿದಾನಂದ ಸ್ವರ
ನಾದ ಭಗವಂತ. ಅವನನ್ನು ಮಾತ್ರ ಉಪಾಸಿಸಬೇಕು.

ಒಬ್ಬನೇ ಆದ ಭಗವಂತನು ಎಲ್ಲ ಜೀವಿಗಳಲ್ಲಿಯೂ ಇರುವುದರಿಂದ,
ಜೀವಿಗಳಿಗೂ ಒಪ್ಪಿಗೆ, ಹಿತ, ಸುಖ ಆಗುವುದನ್ನು ಮಾತ್ರ ಮಾಡಲು ಯತ್ನಿಸಬೇ
ಇದರಿಂದ ಪೂರ್ಣ ಆನಂದ ಸಿಗುತ್ತದೆ. ಜಗತ್ತಿನ ಜನರ ಶಾರೀರಕ, ಬೌದ್ಧಿ
ಸಾಮಾಜಿಕ ಉನ್ನತಿಯನ್ನು ಸಾಧಿಸುವ ಸಲುವಾಗಿ ಶಕ್ತಿಮೀರಿ ದುಡಿದು, ಆ ಮೂ
ಭಗವಂತನ ಸಾಕ್ಷಾತ್ಕಾರ ಪಡೆಯಲು ಯತ್ನಿಸಬೇಕು.

ದೇವನಲೀಲೆ, ಮಾನವನಕ್ರಿಯೆ ಇವೆರಡಕ್ಕೂ ರಂಗಭೂಮಿಯಾದ
ಜಗತ್ತಿನ ಮೂಲಕವೇ ಪರಮಾತ್ಮನನ್ನು ಹೊಂದಲು ಯತ್ನಿಸಬೇಕು. ಏಕೆಂ
ಸಂಸಾರವು ನಮಗೆ ನೀಡುವ ಅನುಭವದ ಮೂಲಕವೇ ವಿದ್ಯೆ ಅಥವಾ ತಿಳಿ
ಬಂದು ಅದರಿಂದ ಆತ್ಮೋದ್ಧಾರ, ಲೋಕಕಲ್ಯಾಣ ಎರಡನ್ನೂ ಸಾಧಿಸಬಹುದು.

ಪ್ರಪಂಚವೆಲ್ಲ ದೇವರು ಎಂದು ತಿಳಿದು ಪ್ರಪಂಚವನ್ನು ಅನುಭ
ಆಸ್ವಾದಿಸಿ, ನಾವೂ ಶಾಂತಿಯನ್ನು ಅನುಭವಿಸಿ, ಸುತ್ತಲೂ ಇರುವವರಿಗೂ ಶಾ
ಯನ್ನು ದೊರಕಿಸಿಕೊಟ್ಟು, ದೇವರಿಂದ ನಮಗೆ ದೊರೆತುದರಲ್ಲಿ ಇತರರಿಗೂ ಸ್
ಕೊಟ್ಟು, ತ್ಯಾಗ ಮಾಡಿ ಅನುಭವಿಸಿ ಆನಂದಿಸಬೇಕು.

ತಾನೂ ಬದುಕಿ ಇತರರನ್ನೂ ಬದುಕಗೊಡುವುದೇ ಧರ್ಮ. ದೈವ
ಮಾನವನ ರಕ್ತಮಾಂಸಗಳಲ್ಲಿಯೇ ಅಡಗಿದೆ. ದೈವೇಚ್ಛೆ ಇಲ್ಲದೆ ಯಾವುದೂ ನಡೆ
ವುದಿಲ್ಲ. ದೈವಪ್ರೇರಣೆಯಂತೆಯೇ ನಾವು ಕೆಲಸಮಾಡಬೇಕು. ಜ್ಞಾನ, ಪ್ರ

ಇಚ್ಛಾಶಕ್ತಿ ಹಾಗೂ ದೈವಾನುಗ್ರಹ ಹೊಂದಿದ ಮಾನವ ಪ್ರಯತ್ನ ಇಹಜೀವನದಲ್ಲಿ ಮುಖ್ಯವಾದುದು. ಮಾನವ ಜೀವನವನ್ನು ನಿಕೃಷ್ಟವಾಗಿ ಕಾಣಬಾರದು. ದೃಢ ಕಾಯರಾಗಿ, ಧೀರರಾಗಿ, ಸಾಹಸದಿಂದ ಬಾಳಬೇಕು.

ಜೀವಾತ್ಮ, ಪ್ರಕೃತಿಗಳಲ್ಲಿ ಸಮನ್ವಯ ಅನುಬಂಧಗಳಿರುವುದು ಸಫಲ ಮಾನವ ಜೀವನಕ್ಕೆ ಅವಶ್ಯಕ. ಎಲ್ಲ ನೋವು, ದುಃಖಗಳಿಂದಲೂ ಬಿಡುಗಡೆಹೊಂದಲು ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಬೇಕು. ಸಮಾಜದ ಉಳಿವು, ಸ್ಥಿರತೆಗಳಿಗೆ ಈ ಆಧ್ಯಾತ್ಮಿಕ ಜ್ಞಾನ ಅವಶ್ಯಕ.

ನಮ್ಮ ವಿಚಾರ, ಮಾತು, ಕೃತಿ ಎಲ್ಲವೂ ಒಳ್ಳೆಯದಾಗಿರಬೇಕು. ಪ್ರಪಂಚ ವನ್ನು ಕಣ್ಣು, ಕಿವಿಗಳ ಜೊತೆಗೆ ವಿಚಾರಶಕ್ತಿಯಿಂದಲೂ ವಿಮರ್ಶಿಸಿ ಅಧ್ಯಯನ ಮಾಡಿ, ಬುದ್ಧಿವಂತಿಕೆಯಿಂದ ಉತ್ತಮ ಜೀವನ ನಡೆಸಬೇಕು. ಅಧ್ಯಯನ, ಪ್ರವಚನ ಗಳೆರಡೂ ಯಾವಾಗಲೂ ಒಟ್ಟಿಗೆ ಹೋಗುತ್ತಿರಬೇಕು. ಎಲ್ಲ ಅಭಿವೃದ್ಧಿಯ ಮೂಲ, ಸರಿ, ಆಳ, ಸ್ಥಿರ, ಪರಿಶುದ್ಧ, ಸರ್ವವ್ಯಾಪಿ ಆದ ಜ್ಞಾನ ಬರಲು ಪರಮಾತ್ಮನ ಅನುಗ್ರಹ ಅವಶ್ಯಕ.

ಬೆಟ್ಟ-ಕಣಿವೆ, ಮೈದಾನ-ಮರುಭೂಮಿ, ಕಾಡು-ನಗರ, ಹಗಲು-ರಾತ್ರಿ, ಧೈರ್ಯ-ಭಯ, ಅಂಧಕಾರ-ಪ್ರಕಾಶ, ಸತ್ಯ-ಸುಳ್ಳು, ಸ್ಮರಣೆ-ಮರೆವು, ಬಂಧನ-ಸ್ವಾತಂತ್ರ್ಯ, ಪ್ರವೃತ್ತಿ-ನಿವೃತ್ತಿ, ಹೊಗಳಿಕೆ-ತೆಗಳಿಕೆ, ಆಸಕ್ತಿ-ವಿರಕ್ತಿ, ನಂಬಿಕೆ-ತಿರಸ್ಕಾರ, ಸುಖ-ದುಃಖ, ದಾನ-ಭೋಗ, ಯುದ್ಧ-ಶಾಂತಿ, ಬಡತನ-ಶ್ರೀಮಂತಿಕೆ, ಶುಚಿತ್ವ-ಕೊಳಕು, ಸುಂದರ-ಕುರೂಪ, ಸ್ವಾರ್ಥ-ತ್ಯಾಗ, ಪ್ರೀತಿ-ದ್ವೇಷ, ಎತ್ತರ-ಕುಳ್ಳು, ಒಡೆಯ-ಸೇವಕ, ಹೆಣ್ಣು-ಗಂಡು ಎಂಬೀ ದ್ವಂದ್ವಗಳಿಂದ ಕೂಡಿರುವ ಜೀವನದಲ್ಲಿ ಪ್ರಕೃತಿಗೆ ಹೊಂದಿಕೊಂಡು, ಯಾವುದರಿಂದಲೂ ತಪ್ಪಿಸಿಕೊಳ್ಳಲು ಯತ್ನಿಸದೆ ಎರಡನ್ನೂ ಎದುರಿಸಬೇಕು.

ಎಲ್ಲ ಮಾನವರಲ್ಲಿಯೂ ಒಗ್ಗಟ್ಟು ಇರಬೇಕು. ವಿವಿಧತೆಯಲ್ಲಿಯೂ ಏಕತೆ ಯನ್ನು ಕಾಣಲು ಯತ್ನಿಸಬೇಕು. ಎಲ್ಲರೂ ಸುಖವಾಗಿ ಇರಲಿ, ಎಲ್ಲ ಜೀವಿಗಳಿಗೂ ದೈವಾನುಗ್ರಹಸಿಗಲಿ, ಎಂದು ಆಶಿಸಿ ಪ್ರಾರ್ಥಿಸಬೇಕು. ಆತ್ಮನ ಏಕತೆಯನ್ನರಿತು ನೆರೆಹೊರೆಯವರನ್ನು ಪ್ರೀತಿಸಬೇಕು ಹಾಗೂ ಮಿತ್ರರಂತೆ ಕಾಣಬೇಕು. ಎಲ್ಲರೊಡ ನೆಯೂ ಒಳ್ಳೆಯ, ಮಧುರ, ಆಕರ್ಷಕ, ಪ್ರಿಯ ಆದ ಮಾತುಗಳನ್ನು ಆಡಬೇಕು. ವಿವಿಧ ರೀತಿಯ ಮಾನವರು ಇರುವ ಈ ವಿಶ್ವವನ್ನು ವಿವಿಧ ರೀತಿಯ ಹೂವುಗಳುಳ್ಳ ತೋಟದಂತೆ ಇರಗೊಡಬೇಕು.

ಪ್ರಜಾಪ್ರಭುತ್ವದ ಸಾಮಾಜಿಕ, ರಾಜಕೀಯ, ಆರ್ಥಿಕ ರಂಗಗಳಲ್ಲಿ ಶಿಸ್ತು ಇರಬೇಕು. ಶಿಸ್ತಿನಿಂದಲೇ ಗಾಳಿ, ನೀರು, ಹಣ್ಣು, ಹೂ, ಹಗಲು, ರಾತ್ರಿ, ಸೂರ್ಯ, ದಿನಕರು ಎಲ್ಲವೂ ಮಧುರ, ಸಿಹಿ ಆಗಿರುವುದು. ನಮಗೆ ಉಪಕಾರ

ಮಾಡುತ್ತಿರುವ ಪ್ರಕೃತಿಯು ನಾನಾ ರೂಪಗಳಾದ ಗಾಳಿ, ನೀರು, ಬೆಂಕಿ, ಭೂಮಿ, ಆಕಾಶ, ನದಿ ಮುಂತಾದುವುಗಳಿಗೆ ಕೃತಘ್ನರಾಗದೆ ಕೃತಜ್ಞರಾಗಿರಬೇಕು.

ಶಿಸ್ತಿನಿಂದ ಕೂಡಿದ ಸಚ್ಚಾರಿತ್ರ್ಯದಿಂದ ವ್ಯಕ್ತಿ–ಸಮೂಹ ಎರಡಕ್ಕೂ ಒಳಿತು ಆಗುತ್ತದೆ. ಸ್ವಸ್ಥಾನ ಪರಿಜ್ಞಾನ ಹೊಂದಿ ಸಾಮಾಜಿಕ ಪ್ರಜ್ಞೆಯನ್ನು ಹೊಂದಿರಬೇಕು. ಭೋಗದ ಬಯಕೆಯು ಬಂಧನವಾದರೆ, ಭೋಗದ ತ್ಯಾಗವೇ ಮೋಕ್ಷವಾಗುತ್ತದೆ. ಸೇವೆ, ತ್ಯಾಗ, ದುಃಖಾನುಭವ ಈ ಮೂರರ ಮೇಲೆ ಸಾಮಾಜಿಕ ಪ್ರಜ್ಞೆಯು ನಿಂತಿದೆ. ಕುಟುಂಬ ಜೀವನ, ಕುಟುಂಬ ಪ್ರಜ್ಞೆ ಇವೆರಡೂ ಸಾಮಾಜಿಕ ಪ್ರಜ್ಞೆಯ ಮೂಲವಾದುದರಿಂದ, ಮನಸ್ಸು–ಹೃದಯಗಳ ಏಕತೆ, ಗೆಳೆತನ, ಸಹಕಾರಗಳು ಕುಟುಂಬದಲ್ಲಿ ಇರುವಂತೆ ಎಲ್ಲರೂ ನೋಡಿಕೊಳ್ಳಬೇಕು.

ಎಲ್ಲರೂ ಒಟ್ಟಿಗೇ ದುಡಿದು, ಫಲವನ್ನು ಒಟ್ಟಿಗೇ ಅನುಭವಿಸಬೇಕು. ಸೇವೆ, ತ್ಯಾಗ, ದಾನ ಎಲ್ಲರ ಗುರಿ ಆಗಿರಬೇಕು. ಎಲ್ಲರೂ ತಮ್ಮಿಂದ ಸಾಧ್ಯವಾದಷ್ಟು ದುಡಿದು, ತಮಗೆ ಅವಶ್ಯವಿದ್ದಷ್ಟು ತೆಗೆದುಕೊಳ್ಳಬೇಕು.

ಪಡೆಯುವುದು ಕೊಡುವುದಕ್ಕಾಗಿ. ಕೊಡುವಾಗ ಕೀರ್ತಿ, ಯಶಸ್ಸು, ಐಶ್ವರ್ಯಗಳ ಆಸೆಯನ್ನು ತ್ಯಜಿಸಬೇಕು. ವಿಷಯ ಸುಖಗಳ ಮೋಹದ ನಿದ್ರೆಯಿಂದ ಏಳಬೇಕು.

ಸೋಮಾರಿಯಾಗದೆ, ಆಶಾವಾದಿಯಾಗಿ, ಉತ್ಸಾಹದಿಂದ ಮಾಡುವ ಎಲ್ಲ ಕೆಲಸಗಳೂ ದೇವರ ಪೂಜೆ ಎನಿಸುತ್ತದೆ. ಮನಸೆಳೆಯುವ ಹೊಳಪಿನ ವಸ್ತುಗಳಿಗೆ ಆಶಿಸದೆ, ಆತ್ಮಕಲ್ಯಾಣ ಆಗುವ ವಸ್ತುಗಳ ಕಡೆ ಗಮನಕೊಡಬೇಕು.

ಪರಮ ಪುರುಷಾರ್ಥಪ್ರಾಪ್ತಿ ಆಗದ ಐಹಿಕ ಸಂಪದಭ್ಯುದಯಗಳನ್ನು ತ್ಯಾಗ ಮಾಡಿ, ಬ್ರಹ್ಮಾನಂದವನ್ನು ಪಡೆಯಲು ಯತ್ನಿಸಬೇಕು. ಪ್ರೇಯವನ್ನು ತ್ಯಜಿಸಿ, ಶ್ರೇಯವನ್ನು ಸಾಧಿಸುವ ಯತ್ನದಲ್ಲಿ, ಐಹಿಕವನ್ನು ತ್ಯಜಿಸದೆ ಅದರ ಆಧಾರದ ಮೇಲೆ ಪಾರಮಾರ್ಥಿಕವನ್ನು ಸಾಧಿಸಬೇಕು. ಬ್ರಹ್ಮಚರ್ಯ ಪಾಲನೆಯಿಂದ ಋಷಿಋಣ, ಯಜ್ಞಯಾಗ ಮಾಡುವುದರಿಂದ ದೇವಋಣ, ಸತ್ಸಂತಾನಾಭಿವೃದ್ಧಿಯಿಂದ ಪಿತೃ ಋಣ, ಲೋಭಿ, ಜಿಪುಣ ಆಗದೆ, ಕೂಡಿಹಾಕದೆ, ದಾನಮಾಡುವುದರಿಂದ ನರಋಣ, ಇವನ್ನೆಲ್ಲ ತೀರಿಸಬೇಕು.

ಬಿ

ವ್ಯಾಪಾರ, ವಾಣಿಜ್ಯಗಳಿಗೆ ಸ್ವಾತಂತ್ರ್ಯ, ರಕ್ಷಣೆ, ಉತ್ತೇಜನಗಳನ್ನು ನೀಡಿ, ಅವುಗಳ ಮೂಲಕ ಪ್ರಪಂಚದ ಏಕತೆಯನ್ನು ಸಾಧಿಸಬೇಕು.

ಸಾಲವನ್ನು ಸಾಕ್ಷಿಗಳ ಎದುರಿಗೆ ಕೊಟ್ಟು ತೆಗೆದುಕೊಳ್ಳಬೇಕು. ಸಾಲವನ್ನು ಬಡ್ಡಿಸಮೇತ ಹಿಂದಿರುಗಿಸಬೇಕು. ಜಗಳ ಬಂದಾಗ ಸಾಕ್ಷಿಗಳು ಧೈರ್ಯದಿಂದ

ಸತ್ಯವನ್ನು ನುಡಿದು, ಸರಿಯಾದ ತೀರ್ಪುನೀಡಲು ನ್ಯಾಯಾಧೀಶರಿಗೆ ನೆರವಾಗ ಬೇಕು.

ಯಾವುದೇ ಉದ್ಯೋಗ ಮಾಡಲು ಜನ್ಮಕ್ಕಿಂತ ಶಕ್ತಿ–ಸಾಮರ್ಥ್ಯಗಳು ಮುಖ್ಯ ವೆಂದು ಪರಿಗಣಿಸಬೇಕು. ಒಂದು ಜಾಗದಲ್ಲಿ ಕುಳಿತು ಅಥವಾ ಓಡಾಡುತ್ತ, ದೈಹಿಕ ವಾಗಿ ಅಥವಾ ಮಾನಸಿಕವಾಗಿ, ಎಲ್ಲ ವರ್ಣದವರೂ ಪ್ರೀತಿ–ಸಹಕಾರಗಳಿಂದ ದುಡಿದು ಕೆಲಸಮಾಡಿ ಸಮಾಜಕ್ಕೆ ತಮ್ಮಿಂದ ಆದಷ್ಟು ಕೊಡುಗೆ ನೀಡಬೇಕು.

ಯಾವ ಕೆಲಸವೂ ಮೇಲಲ್ಲ, ಯಾವ ಕೆಲಸವೂ ಕೀಳಲ್ಲ. ಸಮಾಜವು ಸರಿ ಯಾಗಿರಲು ಎಲ್ಲವೂ, ಎಲ್ಲರೂ ಅವಶ್ಯ. ಆದುದರಿಂದ ಎಲ್ಲ ಕೆಲಸಗಾರರಿಗೂ ಸಮಾನ ಫಲ ಸಿಗುವಂತೆ ವ್ಯವಸ್ಥೆ ಮಾಡಬೇಕು.

ಮಾನವನಿಗೆ ಉಪಕಾರ ಮಾಡುವ ಭೂಮಿ, ಗೋವುಗಳನ್ನು ಶೋಷಣೆಯಿಂದ ರಕ್ಷಿಸಬೇಕು. ವ್ಯವಸಾಯಕ್ಕೆ ಹೆಚ್ಚು ಪ್ರಾಮುಖ್ಯ ನೀಡಿ, ಅದರ ಅಭಿವೃದ್ಧಿಗೆ ಎಲ್ಲ ಅನುಕೂಲಗಳನ್ನೂ ಒದಗಿಸಬೇಕು. ಹಾಲು ಕೊಡುವ ಹಸು, ಉಳುವ, ಬಂಡಿ ಎಳೆಯುವ ಹಾಗೂ ವಾಹನವಾಗಿರುವ ಎತ್ತು, ಕುದುರೆಗಳನ್ನು ಚೆನ್ನಾಗಿ ಪೋಷಿಸ ಬೇಕು. ಬೇಸಾಯಮಾಡಿ ಬೆವರು ಸುರಿಸಿ ದುಡಿದು ಗಳಿಸಬೇಕು, ಅನ್ನವನ್ನು ಹಂಚಿ ತಿನ್ನಬೇಕು.

೫

ಮಾನವ ಜೀವನವನ್ನು ಪೂರ್ಣ, ಸಫಲ ಆಗಿ ಮಾಡುವ ಹೆಂಗಸರಿಗೆ ಪ್ರಾಧಾನ್ಯ ಇರಬೇಕು. ಸ್ತ್ರೀಯು ಪೂರ್ಣ ವಿದ್ಯೆಯ ಅಧಿಕಾರಿಣಿ. ಜ್ಞಾನ, ಕರ್ಮ ಉಪಾಸನೆಗಳಲ್ಲಿ ಆವಳಿಗೂ ಪುರುಷರಿಗಿರುವಷ್ಟೇ ಹಕ್ಕು ಇರುವುದರಿಂದ, ಅವಳ ಶಿರ, ಕರ, ಹೃದಯಗಳ ಪೂರ್ಣ ಬೆಳವಣಿಗೆಗೂ ಅವಕಾಶ–ಅನುಕೂಲಗಳನ್ನು ಕಲ್ಪಿಸಬೇಕು. ಮೀಸೆ ಬೆಳೆಯುತ್ತಿರುವ ಗಂಡು, ಎದೆ ಬೆಳೆಯುತ್ತಿರುವ ಹೆಣ್ಣು, ಇಬ್ಬರೂ ಅಜ್ಞಾನ ದಿಂದ ತಪ್ಪುದಾರಿ ತುಳಿಯದಂತೆ ಮಾಡಿ, ಅವರ ಶೀಲವನ್ನು ರಕ್ಷಿಸಲು ಅವರಿಗೆ ಗುಪ್ತೇಂದ್ರಿಯಗಳ ಹಾಗೂ ಮೈಥುನಾದಿಗಳ ಲೈಂಗಿಕ ಜ್ಞಾನವನ್ನು ಒದಗಿಸಬೇಕು. ಬಾಲ್ಯವಿವಾಹ, ಸತಿಸಹಗಮನ ಪದ್ಧತಿ, ಕನ್ಯಾವಧೆ, ದೇವದಾಸಿಪದ್ಧತಿ, ಅಸ್ಪೃಶ್ಯತೆ ಸರಿಯಲ್ಲ.

ಮಹಿಳೆಯರು ಪೂಜನೀಯರು, ಪವಿತ್ರವಾಗ್ಮಿಗಳ ಆಪ್ತರು. ಧೈರ್ಯ-ಓಜಸ್ಸು ಉಳ್ಳವರು, ಗೌರವಾದರಗಳಿಗೆ ಅರ್ಹರು.

ಮಹಿಳೆಯು ಕ್ಷೇತ್ರ, ಪುರುಷನು ಬೀಜ. ಉತ್ತಮ ಬೀಜವನ್ನು ಹಸನಾದ ಉತ್ತಮ ಕ್ಷೇತ್ರದಲ್ಲಿ ಬಿತ್ತಿದರೆ, ಉತ್ತಮ ಫಲ ಸಿಗುವುದರಲ್ಲಿ ಸಂದೇಹವಿಲ್ಲ. ಪತಿ-ಪತ್ನಿ ಎಂಬ ಜೀವನ ರಥದ ಎರಡು ಚಕ್ರಗಳೂ ಸಮಾನವಾಗಿರಬೇಕೇ ಹೊರತು ಅವರಲ್ಲಿ ಭೇದಭಾವ ಸಲ್ಲದು. ಗಂಡ ಹೆಂಡತಿಯರು ಪರಸ್ಪರ ಪ್ರೀತಿ, ವಿಶ್ವಾಸ,

ನಂಬಿಕೆ, ತೆರೆದ ಮನಸ್ಸು ಹೊಂದಿರಬೇಕು. ಒಬ್ಬರು ಮತ್ತೊಬ್ಬರಿಗೆ ಪೂರಕರು. ಸ್ತ್ರೀಯೂ ಪುರುಷನಷ್ಟೇ ಸಮರ್ಥಳು. ಪತ್ನಿಗೆ ಪೂರ್ಣ ಗೌರವ, ಮನ್ನಣೆಗಳು ದೊರಕಬೇಕು.

ಸ್ತ್ರೀ-ಪುರುಷರಲ್ಲಿ ಯಾರೂ ಯಾರ ಗುಲಾಮರು, ಕೈಗೊಂಬೆ ಆಗಿರಬಾರದು. ತಾಯಿ, ತಂಗಿ, ಪತ್ನಿ, ಮಗಳು ಆಗಿರುವ, ಪ್ರಾಕೃತಿಕವಾಗಿ ದುರ್ಬಲ ಶರೀರ ರಚನೆ ಇರುವ, ಸ್ತ್ರೀಯನ್ನು ತನ್ನ ಸ್ವಾರ್ಥ, ಲಾಭಗಳಿಗೆ ಉಪಯೋಗಿಸಿಕೊಂಡು ಅವಳ ಶೋಷಣೆ ಮಾಡಬಾರದು.

ಕರ್ಮಯೋಗಿ, ತ್ಯಾಗಿ, ಆದ ಮಹಿಳೆಯರ ಕಣ್ಣುಗಳಿಂದ ಕಂಬನಿ ಸುರಿಯದಂತೆ ನೋಡಿಕೊಳ್ಳುವುದು ಪುರುಷರ ಕರ್ತವ್ಯ. ಪತ್ನಿಯು ಕಾಮದ ಬೊಂಬೆ, ಹೆರಿಗೆಯ ಯಂತ್ರ ಅಲ್ಲ. ನಾರಿಯು ಅರ್ಧಾಂಗಿ, ಭಾರ್ಯೆ, ಸಖಿ, ಸ್ವಾಮಿನಿ ಆಗಿರುವವಳು.

ಪಿತೃಕುಲವನ್ನು ಬಿಟ್ಟು ಪತಿಕುಲಕ್ಕೆ ಬಂದ ಹೆಣ್ಣುಮಗಳನ್ನು, ಅತ್ತೆ, ಮಾವ, ನಾದಿನಿ, ಮೈದುನ ಎಲ್ಲರೂ ರಾಣಿ, ಸಾಮ್ರಾಜ್ಞಿ ಎಂಬಂತೆ ಗೌರವಿಸಿ ಆದರಿಸಬೇಕು.

ಪತ್ನಿಯಾದವಳು ಸುಂದರ, ಪವಿತ್ರ ಶರೀರವನ್ನು ಧರಿಸಿ, ಶೀಲವತಿ, ಸುಖಕಾರಿಣಿ, ಮಂಗಳಕಾರಿಣಿ ಆಗಿ ಪತಿಯ ಮನೆಯನ್ನು ಬೆಳಗಿಸಬೇಕು. ಅವಳು ಜವಾಬ್ದಾರಿಯುಳ್ಳವಳಾಗಿ ಸಂಯಮ, ಮಮತಾ ಭಾವನೆಗಳಿಂದ ಮನೆಯ ಸರ್ವ ಕಾರ್ಯಗಳನ್ನೂ ತೃಪ್ತಿಕರವಾಗಿ ನಿರ್ವಹಿಸಿ ಆದರ್ಶ ಗೃಹಿಣಿ ಎನಿಸಿಕೊಳ್ಳಬೇಕು.

ಮಗುವಿಗೆ ಎದೆಹಾಲು ಕುಡಿಸಿ ಅದು ಸುಂದರ, ದೃಢಕಾಯ, ನಿರೋಗಿ ಆಗುವಂತೆ ಮಾಡಬೇಕು.

ತಪ್ಪುದಾರಿಯಲ್ಲಿ ಹೋಗುತ್ತಿರುವ ಗಂಡನನ್ನು ಹೆಂಡತಿಯು ತಿದ್ದಬೇಕು. ಜೂಜು, ಮದ್ಯಪಾನ, ಪರಸ್ತ್ರೀ-ಪರಧನಗಳಲ್ಲಿ ಆಸೆ, ಸರಿಯಾದ ಕಾರಣವಿಲ್ಲದೆ ಕೋಪಿಸಿಕೊಳ್ಳುವುದು-ಎಂಬೀ ಗಂಡಸರ ನ್ಯೂನತೆಗಳನ್ನು ಪತ್ನಿಯೇ ಹೋಗಲಾಡಿಸಿ ಸರಿಪಡಿಸಬೇಕು.

೬

ಜೀವನದ ಎಲ್ಲ ರಂಗಗಳಲ್ಲಿನ ಎಲ್ಲ ಮಾನವರ ಕಲ್ಯಾಣವೇ ಪ್ರಜಾಪ್ರಭುತ್ವದ ಗುರಿಯಾಗಿರಬೇಕು. ಸಂಸಾರದಲ್ಲಿ ಸಿಗುವ ಸರಿಯಾದ ಜ್ಞಾನಾನುಭವದ ಮೂಲಕ ಜನರ ಸಂಕಟವನ್ನು ಕಡಿಮೆ ಮಾಡಲು ಸರ್ಕಾರವನ್ನು ನಡೆಸುವವರೆಲ್ಲ ಯತ್ನಿಸಬೇಕು.

ರಾಜಕೀಯ ಶಕ್ತಿಯು ಜನರಿಗೆ ಅಧೀನವಾಗಿದ್ದು ಜನರ ಇಚ್ಛೆಯನ್ನು ಕಾರ್ಯಗತ ಮಾಡಬೇಕು. ವಾದ, ಚರ್ಚೆ ಆದನಂತರ ಜನರ ಸಭೆ, ಸಮಿತಿಗಳ ಸರ್ವಸಮ್ಮತ, ಅವಿರೋಧ ತೀರ್ಮಾನದಂತೆ, ಧರ್ಮದಿಂದ ಆಡಳಿತ ನಡೆಯಬೇಕು. ಸಭೆ ಸಮಿತಿಗಳ ಸದಸ್ಯರು ಎಲ್ಲ ವಿಷಯಗಳ ಅಧ್ಯಯನ ಮಾಡಿ, ತೆರೆದ ಮನಸ್ಸಿನಿಂದ, ಪೂರ್ವ

ನಿಯೋಜಿತ ಭಾವನೆಗಳಿಲ್ಲದೆ ಬಂದು, ಸಕ್ರಿಯವಾಗಿ ಭಾಗವಹಿಸಿ, ವಾದಿಸಿ, ಚರ್ಚಿಸಿ, ತೀರ್ಮಾನ ಕೈಗೊಳ್ಳಬೇಕು. ಜನರ ಕಲ್ಯಾಣ ಮಾಡುವಾಗ ವಿವಿಧ ಪಕ್ಷಗಳ ಮುಖಂಡರು ಭೇದಗಳನ್ನು ಮರೆತು ಒಂದಾಗಬೇಕು.

ಆಳಿಸಿಕೊಳ್ಳುವವರು ಆಳುವಶಕ್ತಿಗೆ ಗೌರವ, ವಿಧೇಯತೆಗಳನ್ನು ತೋರಿಸಬೇಕು.

ಆಡಳಿತಗಾರರಿಗೆ ಜನರಲ್ಲಿ ಪ್ರೀತಿ ಇರಬೇಕು. ಆಳುವವರು ಜನರೊಂದಿಗೆ ಬೆರೆತು ಅವರ ನಂಬಿಕೆ ಗಳಿಸಬೇಕು. ಜನರ ಕಷ್ಟಗಳನ್ನು ಅರಿತು ಅವಕ್ಕೆ ಪರಿಹಾರ ಕಂಡು ಹಿಡಿಯಬೇಕು.

ಚುನಾಯಿತರಾಗಿ ಬಂದ ಆಡಳಿತಗಾರರು ಅರ್ಹರಲ್ಲವೆಂದು ಜನರು ಹೇಳಿದ ಕೂಡಲೇ ಸಾರ್ವಜನಿಕ ಅಭಿಪ್ರಾಯಕ್ಕೆ ಮನ್ನಣೆ ನೀಡಿ ಅಧಿಕಾರ ತ್ಯಾಗಮಾಡಬೇಕು.

ಕ್ರಿಯೆಯಿಲ್ಲದ ಆಲೋಚನೆ ಅಪ್ರಯೋಜಕ. ಆಲೋಚನೆ ಇಲ್ಲದ ಕ್ರಿಯೆ ಅರ್ಥಹೀನ. ಆದುದರಿಂದ ಆಳುವ ಬುದ್ಧಿ–ಬಾಹುಬಲಗಳಲ್ಲಿ ಅಂದರೆ ಆಲೋಚಿಸುವ ಬ್ರಾಹ್ಮಣ, ಕಾರ್ಯ ಕೈಗೊಳ್ಳುವ ಕ್ಷತ್ರಿಯ ಇಬ್ಬರಲ್ಲಿಯೂ ಸಮನ್ವಯ, ಸಹಕಾರಗಳು ಇದ್ದರೆ, ಆಳಿಸಿಕೊಳ್ಳುವ ವೈಶ್ಯಶೂದ್ರರ ಜೀವನವು ಸುಖ ಸಂತೋಷಗಳಿಂದ ಕೂಡಿರುತ್ತದೆ.

## (7) ವೇದಗಳ ಮಹತ್ವ

What is found in vedas exists nowhere else.

—*Morely*

The vedas are noble documents, not only of value and pride to India but to the entire humanity, because in them we see man attempting to lift himself above the earthly existence.

—*Pall Thena*

Vedas exalt our life. All philosophies and science of Europe appear insignificant before vedas. All men of earth should return to vedas.

—*Emerson*

Vedas paint the picture of scientific religion where religion and science clap together. Vedas are based on Religion, Science and Philosophy.

—*Brown*

Vedic religion is not only the most ancient religion but also it is the most perfect one. It occupies the first and foremost position among the religions of the world.

—*Tolstoy*

Upanishad is the fruit of human knowledge and wisdom and contains almost super human conceptions whose originators could hardly be cosidered as mere men.

—*Schopenhauer*

The upanishads teach various systems of doctrines as regards the nature of god, man and the world and the relations between them. The Religio-philosophical systems of modern times quote texts from the upanishads as an authority for their special doctrines.

—*R. G. Bhandarkar*

We have no right to suppose that we have even a hundredth part of the religious end popular poetry that existed during the vedic age.

—*Maxmuller*

ಜಗತ್ತಿನಲ್ಲೆಲ್ಲ ಉಪನಿಷತ್ತುಗಳ ಅಭ್ಯಾಸದಿಂದಾಗುವಷ್ಟು ಪ್ರಯೋಜನ, ಉನ್ನತಿ ಇನ್ನಾವ ಅಭ್ಯಾಸದಿಂದಲೂ ಆಗಲಾರದು. ಅದು ನನ್ನ ಬಾಳಿನಲ್ಲಿ ತೃಪ್ತಿ ಶಾಂತಿ ಸಮಾಧಾನಗಳನ್ನು ತಂದುಕೊಟ್ಟಂತೆ ಅಂತಿಮ ದಿನವಾದ ಸಾವಿನಲ್ಲಿಯೂ ನೆರವಾಗುತ್ತದೆ.

—ಷೋಪೆನ್‌ಹಾರ್

ಉಪನಿಷತ್ತುಗಳ ಪ್ರಭಾವದಿಂದ ಸನಾತನವಾಗಿ ಮುಂದುವರೆಯುವ ಸತ್ವವುಳ್ಳ ಹಿಂದೂ ಸಂಸ್ಕೃತಿಯು ನನ್ನ ವೈಯಕ್ತಿಕ ಧರ್ಮವನ್ನು ಸರ್ವದಾ ಪ್ರಕಾಶ ಪಡಿಸುತ್ತ ಚಿರಂತನ ನಾವೀನ್ಯವನ್ನು ಹೊಂದಿದೆ.

—ಸೋರೋಕಿನ್

ಸತ್ಯಾನ್ವೇಷಣ, ಅನ್ವೇಷಣದ ಸಾಹಸ, ಸೌಂದರ್ಯಾನುಭವ, ಕರ್ಮಕೌಶಲ, ಅಂತಃಶಾಂತಿ ಎಂಬೀ ಉತ್ತಮ ಲಕ್ಷಣಗಳಿಂದ ಕೂಡಿದ ಭಾರತೀಯ ಸಂಸ್ಕೃತಿಯು, ಮಾನವನ ಇತಿಹಾಸಾರಭ್ಯ ಬೆಳೆಯುತ್ತ, ಯುಗಧರ್ಮಾನುಸಾರ ಬಾಹ್ಯ ಮಾರ್ಪಾಡನ್ನು ಹೊಂದುತ್ತಿದ್ದರೂ, ತನ್ನದೇ ಆದ ವ್ಯಕ್ತಿತ್ವವನ್ನು ಪ್ರಕಾಶ ಪಡಿಸುತ್ತ ಅವಿಚ್ಛಿನ್ನವಾದ ಸ್ಫೂರ್ತಿದಾಯಕವಾಗಿದೆ. ತನ್ನ ಸುಂದರ ಆಧ್ಯಾತ್ಮಿಕ ಶಕ್ತಿಯ ಬಲದಿಂದ, ದ್ವೇಷಪೂರ್ಣ ಮತ್ತು ನಾಶಕಾರಿ ಆದ ಪ್ರಬಲ ಶಕ್ತಿಯುಳ್ಳ ಪ್ರತಿ ಶಕ್ತಿಗಳನ್ನು ಎದುರಿಸುತ್ತ, ಪರಸ್ಪರ ವಿನಿಮಯ ಸಾಧಕವಾದ ಸಾಮರಸ್ಯಜ್ಞಾನವನ್ನು ಅವಕ್ಕೂ ಹರಡುತ್ತ, ತನ್ನ ವೈಶಿಷ್ಟ್ಯವನ್ನು ಪ್ರಕಾಶ ಪಡಿಸುತ್ತಿದೆ.

—ಆಸ್ವಾಲ್ಡ್ ಸ್ಪೆಂಗ್ಲರ್

ಭಾರತ ಮಾತೆಯು ಪಶ್ಚಿಮ ದೇಶಗಳ ನಮಗೆಲ್ಲ ತಾಯಿ.

—ವಿಲ್ ಡ್ಯೂರಂಟ್

## (8) ವೇದಧರ್ಮ ಪರಿಪಾಲನೆಯ ಫಲ

India was learned, wealthy, prosperous, great in her commerce, her trade, her arts and crafts, in the magnificense of the courts and the skill in her artificers and agriculturists, her People brave and gentee and hospitable to strangers. All that was possible because of Indian Ideals in Vedic Education— in ancient times.

—*Annie Besant*

ಭಾರತೀಯ ಕೆಲಸಗಾರರು ಮತ್ತು ಸೇವಕರು, ಅವಿಧೇಯತೆ, ಕೆಟ್ಟನಡತೆ, ಕುಡಿತ, ಸೋಮಾರಿತನ ಇಲ್ಲದೆ ಹರ್ಷಚಿತ್ತರಾಗಿ ಶ್ರದ್ಧೆ ಭಕ್ತಿಗಳಿಂದ ಕೆಲಸ ಮಾಡುವ ಸದ್ಗುಣಿಗಳು. —ವಿಲ್ಸನ್

ಬೇಸಾಯಗಾರರು ದುಡಿದು ಒಳ್ಳೆಯ ಬೆಳೆಯನ್ನು ತುಂಬಾ ಪಡೆಯುತ್ತಿದ್ದರು. ಕೈಕುಶಲತೆಯ ಕೆಲಸಗಾರರು ನಯ, ಚೆಲುವು ಆದ ಬಟ್ಟೆಯನ್ನು ತಯಾರಿಸುತ್ತಿದ್ದರು. ಶಿಲ್ಪಿಗಳು ಉನ್ನತಮಟ್ಟದ ದೇವಾಲಯ–ವಿಗ್ರಹಗಳನ್ನು ನಿರ್ಮಿಸುತ್ತಿದ್ದರು. ಬುದ್ಧಿ, ಮನಸ್ಸು, ಭಾವನ, ವಿಜ್ಞಾನಗಳಲ್ಲಿ ಅಸಮಾನರು. —ಜೆ. ಆರ್. ಸೀಲೀ

ಇಂಡಿಯಾ ದೇಶದ ಜನರು ಸತ್ಯ, ನಿಷ್ಠೆ, ನಂಬಿಕೆಗಳಿಗೆ ಪ್ರಸಿದ್ಧರು.

—ಇದ್ರಿಸಿ

ಇಂಡಿಯಾದ ವ್ಯಾಪಾರಿಗಳು ಉತ್ತಮ ಉದ್ಯಮಿಗಳು. ಅತಿ ತುಂಬಾ ಸತ್ಯ ಸಂಧರು. ಪ್ರಪಂಚದಲ್ಲಿ ಅತಿಶ್ರೇಷ್ಠರು. ಎಂತಹ ಹೆಚ್ಚಿನ ಲಾಭ ಬರುವಂತಿದ್ದರೂ ಸುಳ್ಳು ಹೇಳುವವರಲ್ಲ. —ಮಾರ್ಕೋಪೋಲೊ

ಭಾರತೀಯರು ಧೈರ್ಯಶಾಲಿಗಳು, ಸದ್ಗುಣಿಗಳು, ಪರೋಪಕಾರಿ ಸಂಸ್ಥೆಗಳನ್ನು ಸ್ಥಾಪಿಸುವ ಸ್ವಭಾವದವರು. —ಡಿಕನ್‌ಸನ್

ನ್ಯಾಯಾಲಯದಲ್ಲಿ ಒಂದೇ ಒಂದು ಸುಳ್ಳನ್ನು ಹೇಳಿ, ಆಮೂಲಕ ತಮ್ಮ ಜೀವ, ಆಸ್ತಿ, ಸ್ವಾತಂತ್ರ್ಯಗಳನ್ನು ರಕ್ಷಿಸಿಕೊಳ್ಳಬಹುದಾದಂತಹ ಸಂದರ್ಭಗಳಲ್ಲಿಯೂ ಸುಳ್ಳು ಹೇಳಲು ಒಪ್ಪದಿದ್ದ ನೂರಾರು ಭಾರತೀಯರನ್ನು ನಾನುಬಲ್ಲೆ.

—ಸ್ಲೀಮನ್

ಭಾರತದ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಪರಸ್ಪರ ಸಹಕಾರದಿಂದ ನಡೆದು ಕೊಳ್ಳುತ್ತಾರೆ. ಬೇಸಾಯಗಾರರು ಸತ್ಯವಂತರು, ನಿಷ್ಕಪಟಿಗಳು, ರಾಜಕೀಯ

ವ್ಯವಹಾರದಲ್ಲಿ. ಹಣಕಾಸಿನ ಲೆಕ್ಕದಲ್ಲಿ, ಆಸ್ತಿಪಾಸ್ತಿ, ಲೇವಾದೇವಿ, ಅಪರಾಧಗಳ ವಿಚಾರಣೆಯಲ್ಲಿ, ದೇಶೀಯರು ಬುದ್ಧಿವಂತರು, ವಿಧೇಯರು, ವಿಶ್ವಾಸಾರ್ಹರು, ನಿಷ್ಠೆಯಿಂದ ದುಡಿಯುವವರು, ಕುಶಲ ಕರ್ಮಕಲಾ ಪೋಷಕರು ಆಗಿದ್ದಾರೆ.

—ಕ್ಯಾಮ್‌ಬೆಲ್

ಸಂತೆ. ಅಂಗಡಿ. ಮಾರುಕಟ್ಟೆ, ರೈಲು ನಿಲ್ದಾಣಗಳಲ್ಲಿ ವ್ಯಾಪಾರಿಗಳು ತೆರೆದ ಗಲ್ಲದಲ್ಲಿ ಹಾಕಿರುವ ಹಣಕ್ಕೆ ಯಾರೂ ಕೈಹಾಕುವುದಿಲ್ಲ. ಸಾಲಗಾರರು ಸಾಲವನ್ನು ಉಳಿಸಿಕೊಳ್ಳದೆ ಹಿಂತಿರುಗಿಸುತ್ತಿದ್ದರು. —ಆಲ್‌ಫ್ರೆಡ್‌ವೆಬ್

ಇಂಡಿಯಾ ದೇಶದ ಜನರು ತಮ್ಮ ರುಚಿ–ಶುಚಿ ವಿಷಯದಲ್ಲಿ ಬಹು ಹೆಮ್ಮೆ ಪಡುವುದು ಸಹಜವಾಗಿದೆ. —ಇಟ್ಸಿಂಗ್

ಸ್ತ್ರೀಯರನ್ನು ನಂಬಿಕೆ, ಗೌರವ, ನಯಗಳಿಂದ ನೋಡಿಕೊಳ್ಳುತ್ತಾರೆ.

—ಸರ್‌ಥಾಮಸ್‌ಮನ್ರೋ

ಸಂಪದ್ಭರಿತವಾದ ಇಂಡಿಯದ ಜನರು ಒಳ್ಳೆಯ ರೈತರು, ಯೋಧರು, ಸಂತರು ಆಗಿದ್ದಾರೆ. ದೇಶದಲ್ಲಿ ವ್ಯವಸ್ಥಿತ, ದಕ್ಷ, ಸಾಮಾಜಿಕ ವ್ಯವಸ್ಥೆ ಇದೆ.

—ಅಲೆಗ್ಸಾಂಡರ್

ಇಂಡಿಯಾ ದೇಶದ ಜನರು ಬಹು ನ್ಯಾಯ ಪಕ್ಷಪಾತಿಗಳು —ಟೀಸಿಯಾಸ್

ವಸತಿ. ಬೆಳಕು, ಆಹಾರ, ನೀರು, ಉಡುಪು, ವಿದ್ಯೆ, ವ್ಯಾಯಾಮ, ಕ್ರೀಡೆ, ಆರೋಗ್ಯ, ವಿಹಾರ, ಎಲ್ಲವನ್ನೂ ಜನರಿಗೆ ಒದಗಿಸುತ್ತಿರುವ ಅಧಿಕಾರಿಗಳು ಬುದ್ಧಿವಂತರು, ದಕ್ಷರು ಆಗಿದ್ದಾರೆ. ಮುತ್ತು, ರತ್ನ, ವಜ್ರ, ವೈಢೂರ್ಯ, ಮಾಣಿಕ್ಯ, ಪಚ್ಚೆಗಳ ವ್ಯಾಪಾರಸ್ಥರು ಯಾವ ಭಯವೂ ಇಲ್ಲದೆ ತೆರೆದ ಅಂಗಡಿಗಳಲ್ಲಿ ಕುಳಿತು ದಿನವೂ ಮಾರುತ್ತಾರೆ. ಅವುಗಳನ್ನು ಯಾರೂ ಅಪಹರಿಸುವುದಿಲ್ಲ.

—ಅಬ್ದುಲ್‌ರಜಾಕ್

ದೇಶದ ಒಕ್ಕಲಿಗರು ಪವಿತ್ರ, ಪರಿಶುದ್ಧ ಆದ ವರ್ಗಕ್ಕೆ ಸೇರಿದ ಜನರೆಂದು ಭಾವಿಸಲಾಗಿತ್ತು. ಯುದ್ಧ ಕಾಲದಲ್ಲಿಯೂ ಅವರೂ, ಅವರ ಬೆಳೆಯೂ ಸುರಕ್ಷಿತವಾಗಿರುತ್ತದೆ. ಗುಲಾಮಗಿರಿ ಇಲ್ಲ. ಕಳ್ಳತನ ಅಪರೂಪ. ಮನೆಮಠಗಳಿಗೆ ಕಾವಲು ಇಡುವುದಿಲ್ಲ. ಲಿಖಿತ ಕಾನೂನು ಕಟ್ಟಲೆಗಳಿಲ್ಲ. ಜನರು ಮಾಡಿಕೊಳ್ಳುವ ಕರಾರು ಕಟ್ಟಲೆಗಳಿಗೆ ಮೊಹರು, ಸಾಕ್ಷಿ ಇರುವುದಿಲ್ಲ. ಪರಸ್ಪರ ನಂಬಿಕೆಯ ಮೇಲೆ ವ್ಯವಹಾರಗಳೆಲ್ಲವೂ ನಡೆಯುತ್ತವೆ. ನ್ಯಾಯಾಸ್ಥಾನಗಳಿಗೆ ಹೋಗುವುದು ಅಪರೂಪ.

—ಮೆಗಾಸ್ತನೀಸ್

ದೇಶದಲ್ಲಿ ಸುಭಿಕ್ಷ, ಸುಖ, ಶಾಂತಿಗಳಿದ್ದುವು. ಬಡಬಗ್ಗರಿಗೆ ಉದಾರವಾಗಿ ಸಹಾಯ ಸಿಗುತ್ತಿತ್ತು. ಜನರು ಸತ್ಯಸಂಧರು, ಧರ್ಮಭೀರುಗಳು ಆಗಿದ್ದು ಕಳ್ಳ

ಂಜಿಕೆ ಇರಲಿಲ್ಲ. ಜನರು ರಾತ್ರಿಯಲ್ಲೂ ತಮ್ಮ ಮನೆಯ ಬಾಗಿಲುಗಳನ್ನು
ಕ ಗೋಜಿಗೇ ಹೋಗುತ್ತಿರಲಿಲ್ಲ. —ಬಿಲ್ಹಣ

ಪರಿಮಿತ ಅಧಿಕಾರವಿದ್ದ ಚಕ್ರವರ್ತಿಯ ಗುರಿ ಪ್ರಜಾಕ್ಷೇಮವಾಗಿದ್ದಿತು. ನರ್ಮಶೀಲರು, ನ್ಯಾಯಪರರು, ದಯಾಳುಗಳು, ಉದಾರಿಗಳು, ಸಮರ್ಥರು . ದೇಶದಲ್ಲಿ ದಕ್ಷತೆಯಿಂದ ಕೂಡಿದ, ಭದ್ರವಾದ ಸರ್ಕಾರವಿದ್ದು, ಸುಖ ಸಮೃದ್ಧಿಗಳಿದ್ದುವು. ಕಳವು, ಕೊಲೆ, ದರೋಡೆ, ಸುಲಿಗೆ, ದಂಗೆಗಳು ಪ್ರದಿಲ್ಲ. ಮದ್ಯಮಾಂಸಗಳ ಅಂಗಡಿಗಳಿಲ್ಲ. ಜನರು ಅಧಿಕಾರಿಗಳಿಗೆ, ನಿಬಂಧನೆ ದರದೆ, ತಮ್ಮ ತಮ್ಮ ಕರ್ತವ್ಯಗಳನ್ನು ಆಚರಿಸುತ್ತಾರೆ. ಉಚಿತ ಊಟ ಡುವ ಅನ್ನಸತ್ರ, ಧರ್ಮಶಾಲೆ, ಪ್ರವಾಸಿಮಂದಿರಗಳು ದಾರಿಯುದ್ದಕ್ಕೂ ವಾಗಿದ್ದು, ಅವು ಜನರು ಕೊಟ್ಟ ದಾನ-ದತ್ತಿಗಳಿಂದಲೇ ನಡೆಯುತ್ತಿವೆ. ಸ್ಥಾಪಿಸಿದ ಉಚಿತ ಚಿಕಿತ್ಸಾಲಯಗಳಲ್ಲಿ ಬಡವರೂ, ಅನಾಥರೂ ಆದ ರೋಗಿ ಷಧಿ, ಪಥ್ಯ, ಶುಶ್ರೂಷೆ ಸಿಗುತ್ತವೆ. ಜನರಲ್ಲಿ ಉದಾರತೆ, ತಾಳ್ಮೆ, ಆದರಾ ಸಹಜಗುಣಗಳಾಗಿದ್ದುವು.

—ಫಾಹಿಯಾನ್

ಜನು ಶೂರ, ದರ್ಪಿಷ್ಠ, ಧರ್ಮಿಷ್ಠ, ದಯಾಳು, ಜನಪ್ರಿಯ ಆಗಿದ್ದಾನೆ. ಧರ್ಮದಿಂದ ನಡೆಯುತ್ತದೆ. ಜನರು ಅನ್ಯೋನ್ಯತೆ, ಮರ್ಯಾದೆ, , ಮಾಧುರ್ಯಗಳಿಂದ ನಡೆದುಕೊಳ್ಳುತ್ತಾರೆ. ಸಮಾಜದ ರೀತಿ ನೀತಿ ರೋಧವಾಗಿ ಯಾರೂ ವರ್ತಿಸುವುದಿಲ್ಲ. ಜನರ ರೀತಿನೀತಿ, ಆಚಾರ ವ್ಯವಹಾರ ಎಲ್ಲವೂ ಒಳ್ಳೆಯವು, ಸಮರ್ಪಕ ಆಗಿವೆ. ಜನರು ವೀರರು, ರು, ಗೌರವಪ್ರಿಯರು, ಸತ್ಯಸಂಧರು, ನಿಷ್ಕಪಟಿಗಳು, ಸರಳ ಜೀವಿಗಳು, ಸಿಕರು, ಸ್ವಾಭಿಮಾನಿಗಳು, ದೀರ್ಘಕಾಯರು, ವಿದ್ಯಾವಿನಯ ಸಂಪನ್ನರು, ರು, ಉತ್ತಮಯೋಧರು, ಆಡಿದ ಮಾತಿಗೆ ತಪ್ಪರು, ಮೋಸದ್ರೋಹ ಸುಳ್ಳು ಹೇಳರು, ಕೃತಜ್ಞರು, ಅಪರಾಧ, ಗೌರವ ಭಂಗ ಮಾಡಿದವರನ್ನು ಬೇಡಿದರೂ ಕ್ಷಮಿಸರು. ಮನೆಗಳಿಗೆ ಬೀಗ ಹಾಕುವ ರೂಢಿ ಇಲ್ಲ. ಪ್ರಯಾಣ ವಾವ ಭಯವೂ ಇರಲಿಲ್ಲ. ಭೂಮಿ ಬಹಳ ಫಲವತ್ತಾಗಿದ್ದು ದವಸ ಹುಲುಸಾಗಿ ಹೇರಳವಾಗಿ ಬೆಳೆಯುತ್ತವೆ. ಶೂದ್ರರು ಉತ್ತು ಬಿತ್ತಿ ಬೆಳೆ ದರಲ್ಲಿ ನಿರತರಾಗಿರುತ್ತಾರೆ. ವೈಶ್ಯರು ದೇಶವಿದೇಶಗಳಲ್ಲಿ ವಸ್ತುಗಳ ಮಾಡುತ್ತ ನಿರ್ಭಯರಾಗಿ ವ್ಯಾಪಾರದಲ್ಲಿ ತೊಡಗಿರುತ್ತಾರೆ. ವಿದೇಶ ಯಥೇಷ್ಟವಾಗಿದೆ. ಬ್ರಾಹ್ಮಣರು ಸಚ್ಚರಿತ್ರರಾಗಿ ತತ್ತ್ವಗಳನ್ನೆಲ್ಲ ಚಾಚೂ ಸರಿಸಿ, ಆಚಾರಗಳನ್ನು ನಿಷ್ಠೆಯಿಂದ ನೆರವೇರಿಸಿ, ಬಹು ಕಟ್ಟುನಿಟ್ಟಾದ ನ್ನು ನಡೆಸುತ್ತಾರೆ. ಗುರುಗಳು ಶಿಷ್ಯರಿಗೆ ಕಷ್ಟಪಟ್ಟು ವಿದ್ಯೆ ಹೇಳಿಕೊಟ್ಟು

ಸೋಮಾರಿಯನ್ನು ಚುರುಕಾಗಿ ಮಾಡಿ ವಿದ್ಯೆಯನ್ನು ಪೂರೈಸುವವರೆಗೂ ಬಿಡುವುದಿಲ್ಲ. ಜನರು ಬಹಳ ಶ್ರಮಿಸಿ ಜ್ಞಾನವನ್ನು ಸಂಪಾದಿಸುತ್ತಾರೆ ಹಾಗೂ ಸತ್ಯಾನ್ವೇಷಣೆಯಲ್ಲಿ ತೊಡಗಿರುತ್ತಾರೆ. ಕ್ಷತ್ರಿಯರು ರಕ್ಷಣೆ, ದಯೆ ತಮ್ಮ ಧ್ಯೇಯವೆಂದು ತಿಳಿದು ವರ್ತಿಸುತ್ತಾರೆ.

—ಹೂಯುನ್‌ತ್ಸಾಂಗ್

## 2. ವೇದಾಂಗಗಳು

ಛಂದಃ ಪಾದೌತು ವೇದಸ್ಯ ಹಸ್ತೌ ಕಲ್ಪೋಽಥಪಠ್ಯತೇ
ಜ್ಯೋತಿಷಾಮಯನಂ ಚಕ್ಷುಃ ರ್ನಿರುಕ್ತಂ ಶ್ರೋತ್ರಮುಚ್ಯತೇ ॥
ಶಿಕ್ಷಾ ಘ್ರಾಣಂತುವೇದಸ್ಯ ಮುಖಂ ವ್ಯಾಕರಣಂಸ್ಮೃತಂ
ತಸ್ಮಾತ್ ಸಾಂಗಮಾಧೀತ್ಯೈವ ಬ್ರಹ್ಮಲೋಕೇ ಮಹೀಯತೇ ॥

ಎಂಬಂತೆ ವೇದಗಳಿಗೆ ಛಂದಸ್ಸು ಎರಡು ಪಾದಗಳು, ಕಲ್ಪಗಳು ಎರಡು ಹಸ್ತಗಳು, ಜ್ಯೋತಿಷ್ಯವು ಕಣ್ಣುಗಳು, ನಿರುಕ್ತವು ಕಿವಿಗಳು, ಶಿಕ್ಷಾ ಮೂಗು, ವ್ಯಾಕರಣವು ಮುಖ ಆಗಿದ್ದು, ವೇದ–ವೇದಾಂಗಗಳಲ್ಲಿ ನಿಕಟ ಸಂಬಂಧವಿದೆ.

ಮಂತ್ರ–ಬ್ರಾಹ್ಮಣಗಳ ಅಧ್ಯಯನ–ಚಿಂತನಗಳಿಂದ ವೇದಾಂಗಗಳು ನಿರ್ಮಾಣಗೊಂಡಿದ್ದು, ವೇದಗಳ ಅರ್ಥ–ವಿಷಯಗಳನ್ನು ತಿಳಿಯಲು ಅತ್ಯಂತ ಉಪಯೋಗವಾಗಿವೆ. ವೇದಾಂಗಗಳ ಜ್ಞಾನವಿಲ್ಲದೆ, ವೇದವನ್ನು ಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ.

**ಶಿಕ್ಷಾ :** ಆರು ವೇದಾಂಗಗಳಲ್ಲಿ ಶಿಕ್ಷಾಸೂತ್ರಗಳೇ ಪ್ರಥಮ. ಶಬ್ದ ಉಚ್ಚಾರ ನಿಯಮಗಳನ್ನು ಕಲಿಸುವ ಶಾಸ್ತ್ರ ಅಂದರೆ ವಾಗುಚ್ಚಾರಣ ವಿಧಿಯು ಶಿಕ್ಷಾ ಎನಿಸುತ್ತದೆ. ಸ್ವರವರ್ಣ ಮಾತ್ರಾದಿವಿಭಾಗ, ವರ್ಣೋಚ್ಚಾರಣ ಕ್ರಮ, ವರ್ಣೋತ್ಪತ್ತಿ ಸ್ಥಳ, ಇವೆಲ್ಲವನ್ನೂ ಇದು ನಿರೂಪಿಸುತ್ತದೆ. ವೇದಮಂತ್ರಗಳನ್ನು ಶುದ್ಧವಾದ ರೀತಿಯಲ್ಲಿ ಉಚ್ಚಾರ ಮಾಡಲು ಬೇಕಾದ ನಿಯಮಗಳನ್ನು ವಿವರಿಸಿ ಹೇಳಲು ವೇದಗಳ ಪ್ರತಿಯೊಂದು ಶಾಖೆಗೂ ಒಂದೊಂದು ಶಿಕ್ಷಾ ಶಾಸ್ತ್ರವನ್ನು ಭಾರದ್ವಾಜ, ವ್ಯಾಸ, ಯಾಜ್ಞವಲ್ಕ್ಯ, ನಾರದ, ಪಾಣಿನಿ, ವಸಿಷ್ಠ, ಶೌನಕ, ಶಂಭು ಮುಂತಾದ ಋಷಿಗಳು ರಚಿಸಿದ್ದಾರೆ. ಈಗ ಪಾಣಿನಿಯ ಶಿಕ್ಷಾ ಸೂತ್ರವೇ ಪ್ರಸಿದ್ಧವಾದುದು.

**ವ್ಯಾಕರಣ :** ವೇದಾರ್ಥ ಜ್ಞಾನಕ್ಕೆ ವ್ಯಾಕರಣ ಶಾಸ್ತ್ರದ ಅಧ್ಯಯನವು ಅತ್ಯಂತ ಆವಶ್ಯವಾದುದು. ವೇದಗಳ ಅರ್ಥವನ್ನು ತಿಳಿಸಿ, ಅದನ್ನು ರಕ್ಷಿಸುವುದು ವ್ಯಾಕರಣದ ಮುಖ್ಯ ಉದ್ದೇಶ. ಶಬ್ದನಿರ್ವಚನ ಶಾಸ್ತ್ರವೇ ವ್ಯಾಕರಣ ಎನಿಸುತ್ತದೆ. ಧಾತು, ಪ್ರಕೃತಿ, ಪ್ರತ್ಯಯಗಳೆಲ್ಲ ಯಾವ ರೀತಿಯಲ್ಲಿ ಶಬ್ದ ರಚನೆಯ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತವೆ ಮತ್ತು ಅರ್ಥ ಹೇಳುವ ಪದಗಳನ್ನು ವಿವರಿಸುತ್ತವೆ ಎಂಬುದರ ಜ್ಞಾನವು ವ್ಯಾಕರಣದಿಂದ ಸಿಗುತ್ತದೆ. ಇದರಿಂದ ಸಂಧಿ, ವಿಜ್ಞಾನ, ಕಾಲ, ಲಿಂಗ,

ವಚನ ಭೇದಗಳ ಪರಿಚಯವೂ ಆಗುತ್ತದೆ. ವ್ಯಾಕರಣ ಶಾಸ್ತ್ರದ ಪೂರ್ಣಗ್ರಂಥ ವೆನಿಸಿದ ಪಾಣಿನಿಯ ಅಷ್ಟಾಧ್ಯಾಯಿಯೂ ವ್ಯಾಕರಣ ಮಹಾಭಾಷ್ಯವೆಂದು ಪ್ರಸಿದ್ಧವಾಗಿ, ಮುಖ್ಯ ಪ್ರಮಾಣ ಗ್ರಂಥವಾಗಿ, ಪಾಶ್ಚಾತ್ಯ ವಿದ್ವಾಂಸರಿಂದಲೂ ಹೊಗಳಿಸಿ ಕೊಂಡಿದೆ.

**ಛಂದಸ್ಸು :** ವೇದಮಂತ್ರಗಳ ಉಚ್ಚಾರ ಮತ್ತು ಅರ್ಥವನ್ನು ತಿಳಿಯಲು ಛಂದೋಜ್ಞಾನವೂ ಅತ್ಯವಶ್ಯವಾಗಿದೆ. ವೈದಿಕ ಛಂದಸ್ಸು ಅಕ್ಷರ ಗಣನೆಯ ಆಧಾರದಲ್ಲಿದೆ. ವೇದಮಂತ್ರಗಳಲ್ಲಿ ಅರ್ಥಕ್ಕೆ ಅನುಸಾರವಾಗಿ ಪಾದದ ವ್ಯವಸ್ಥೆ ಇದೆ. ಪಾದಗಳಲ್ಲಿ ಅಕ್ಷರ ಸಂಖ್ಯಾನಿಯಮಗಳು ಗಾಯತ್ರಿ, ಅನುಷ್ಟುಪ್, ತ್ರಿಷ್ಟುಪ್ ಛಂದಸ್ಸುಗಳ ಲಕ್ಷಣವನ್ನು ತಿಳಿಸುತ್ತದೆ. ಪಿಂಗಳಾಚಾರ್ಯರ ಛಂದ–ಶ್ಯಾಸ್ತ್ರವು ಪ್ರಸಿದ್ಧವಾಗಿದ್ದು ಅದರಲ್ಲಿ ವೈದಿಕ ಹಾಗೂ ಲೌಕಿಕ ಛಂದಸ್ಸಿನ ವಿಚಾರ ವಿದೆ.

**ನಿರುಕ್ತ :** ಅರ್ಥನಿರ್ವಚನ ಶಾಸ್ತ್ರವು ನಿರುಕ್ತವೆನಿಸುತ್ತದೆ. ಪ್ರಕೃತಿ ಪ್ರತ್ಯಯಾದಿ ವಿಭಾಗಗಳನ್ನು ಅಪೇಕ್ಷಿಸದೆ ವೈದಿಕ ಪದಗಳಿಗೆ ನಿರ್ವಚನದಿಂದ ವಿಶೇ ಷಾರ್ಥವನ್ನು ನಿರೂಪಿಸುತ್ತದೆ. ವೇದದ ಅರ್ಥ, ವೇದ ಭಾಷೆಯ ವ್ಯುತ್ಪತ್ತಿಗಳ ಜ್ಞಾನ ಸಂಪಾದನೆಗೆ ನಿರುಕ್ತ ಶಾಸ್ತ್ರವು ಸಹಾಯಕವಾಗಿದೆ. ನಿರುಕ್ತವಿಲ್ಲದೆ ವೇದ ಮಂತ್ರಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಯಾಸ್ಕಾಚಾರ್ಯರ ನಿರುಕ್ತ ಗ್ರಂಥವು ವೇದಗಳಲ್ಲಿ ಬರುವ ಅಸಾಧಾರಣ ಕಠಿಣ ಪದಗಳ ಕೋಶವಿರುವ ನಿಘಂಟಿನ ವ್ಯಾಖ್ಯಾನವಾಗಿದೆ. ಬ್ರಾಹ್ಮಣ, ಆರಣ್ಯಕ ಮುಂತಾದುವನ್ನು ಆಧಾರವಾಗಿಟ್ಟು ಕೊಂಡು ಯಾಸ್ಕರು ತಮ್ಮ ಗ್ರಂಥದಲ್ಲಿ ವೇದಮಂತ್ರಗಳ ನಿರ್ವಚನೆ ಮಾಡಿದ್ದಾರೆ.

**ಜ್ಯೋತಿಷ್ಯ :** ಇದಕ್ಕೆ ಕಾಲವಿಧಾಯಕ ಶಾಸ್ತ್ರವೆಂದೂ ಹೆಸರು. ಯಜ್ಞ ಯಾಗಾದಿ ಕರ್ಮಗಳನ್ನು ಆಚರಿಸಲು ತಕ್ಕ ಕಾಲ, ಮುಹೂರ್ತ, ಗ್ರಹಗತಿ, ಋತು, ಅಯನ, ಮಾಸ ಇತ್ಯಾದಿಗಳನ್ನು ವಿವರಿಸುವ ಶಾಸ್ತ್ರವಿದು, ಈ ವಿಷಯದ ವಿವರ ಣಾತ್ಮಕ ಚರ್ಚೆಯು ಬ್ರಾಹ್ಮಣ, ಆರಣ್ಯಕ ಮುಂತಾದ ಗ್ರಂಥಗಳಲ್ಲಿಯೂ ಕಾಣ ಬರುತ್ತದೆ. ಜ್ಯೋತಿಷ್ಯವನ್ನು ತಿಳಿದಿರುವವನು ಮಾತ್ರ ಯಜ್ಞವನ್ನು ತಿಳಿದಿರು ತ್ತಾನೆ. ಈ ಬಗ್ಗೆ ಲಗಧ ಮುನಿಗಳ ಗ್ರಂಥವು ಪ್ರಸಿದ್ಧವಾದುದು. ಸೋಮಾಕರನ ವ್ಯಾಖ್ಯಾನ, ಸುಧಾಕರನ ಭಾಷ್ಯ ಇವೂ ಪ್ರಸಿದ್ಧ ಗ್ರಂಥಗಳು. ವೇದಾಂಗ ಜ್ಯೋತಿಷ್ಯವು ಮಂತ್ರಾರ್ಥಕ್ಕೆ ಸಹಾಯಕವಾಗಿದ್ದು, ಕರ್ಮಕಾಂಡಕ್ಕೂ ಸಂಬಂಧಿಸಿದೆ. ವೇದಾಂಗ ಜ್ಯೋತಿಷ್ಯವು ಅತ್ಯುನ್ನತ ವಿಜ್ಞಾನಗಳಲ್ಲಿ ಒಂದಾಗಿದ್ದು ಅದರಲ್ಲಿ ರೇಖಾ ಗಣಿತ, ಬೀಜಗಣಿತ, ಅಂಕಗಣಿತ ಮೊದಲಾದ ಉಪಯುಕ್ತ ವಿಷಯಗಳ ಅನಂತ ಜ್ಞಾನವಿದೆ.

**ಕಲ್ಪ :** ವೇದವಿಹಿತ ಕರ್ಮಗಳ ಆನುಪೂರ್ವಿಯಾಗಿ ಇದು ಪ್ರಯೋಗ ಕ್ರಮಗಳನ್ನು ವಿವರಿಸುತ್ತದೆ. ಯಜ್ಞಾದಿ ಕರ್ಮಗಳಲ್ಲಿ ಕಲ್ಪಶಾಸ್ತ್ರ, ಮಂತ್ರಗಳ

ಉಪಯೋಗ, ವಿಭಿನ್ನ ಪ್ರಕಾರದ ಯಜ್ಞಗಳ ನಿಯಮಗಳು, ವಿಧಿನಿಷೇಧಗ ವರ್ಣಾಶ್ರಮಧರ್ಮ, ಆಚಾರ–ಅನಾಚಾರ, ಷೋಡಶ ಸಂಸ್ಕಾರ, ಪಂಚಮ ಯಜ್ಞಗಳು, ಯಜ್ಞ ಶಾಲೆ, ಅಗ್ನಿಕುಂಡ, ವೇದಿಗಳ ರಚನೆ, ಯಜ್ಞ ಸಾಪ ಮುಂತಾದುವುಗಳ ವಿವರಣೆಗಳು ಇದರಲ್ಲಿವೆ. ಯಜ್ಞವನ್ನು ಮಾಡುವ ವಿ ಹಾಗೂ ಉಪಯೋಗಿಸುವ ಮಂತ್ರಗಳು ಇವನ್ನು ವಿವರಿಸುವ ಶ್ರೌತ ಸೂತ್ರ, ಠ ದಿಂದ ಮರಣದವರೆಗಿನ ಕರ್ಮ ಸಂಸ್ಕಾರಗಳಿಗೆ ಸಂಬಂಧಿಸಿದ ಗೃಹ್ಯಸೂತ್ರ, ವ ಆಶ್ರಮಗಳನ್ನು ವಿವರಿಸುವ ಧರ್ಮಸೂತ್ರ, ಯಜ್ಞವೇದಿಕೆ, ಹೋಮಕು ಯಜ್ಞ ಸಾಮಗ್ರಿಗಳ ರಚನೆಯ ಕ್ರಮ ಇವುಗಳ ವಿವರಣೆ ನೀಡುವ ಶುಲ್ಬ ಸೂ ಈ ನಾಲ್ಕು ಮುಖ್ಯವಾದುವು. ವೇದಾರ್ಥ ಜ್ಞಾನವು ಕರ್ಮವಿಲ್ಲದೆ ಪೃ ಗೊಳ್ಳುವುದಿಲ್ಲ. ಕಲ್ಪಸೂತ್ರಗಳು ವೇದ ಮಂತ್ರಗಳ ಉಪಯೋಗದ ಮೂಲಕ ವಿಶೇಷತೆಯನ್ನು ಮನದಟ್ಟು ಮಾಡಿಕೊಡುತ್ತವೆ. ಜನರು ನಿತ್ಯವೂ ಯಾವ ಯಲ್ಲಿ ನಡೆದುಕೊಂಡು ಬರಬೇಕು ಎಂಬುದರ ವಿವರಣೆ ಇದರಲ್ಲಿದೆ.

ಕೆಲವು ಧರ್ಮ ಸೂತ್ರಗಳು ಕಲ್ಪಸೂತ್ರದ ಭಾಗವಾಗಿರದೆ ಧರ್ಮ ಅಥವಾ ಸ್ಮೃತಿಗಳಂತೆ ಸ್ವತಂತ್ರ ಗ್ರಂಥಗಳಾಗಿವೆ. ಧರ್ಮಶಾಸ್ತ್ರಗಳು ಆ ವ್ಯವಹಾರ, ಪ್ರಾಯಶ್ಚಿತ್ತ ಎಂಬ ಮೂರು ವಿಭಾಗಗಳಲ್ಲಿ ಮಾನವನ ದಿನ ಸಂಬಂಧಿಸಿದ ಲೌಕಿಕ ಹಾಗೂ ಮತೀಯ ನಿಯಮಗಳನ್ನು ಪ್ರತಿಪಾದಿಸುತ್ತವೆ. ಯೊಬ್ಬ ಹಿಂದುವೂ ತನ್ನ ಆರ್ಥಿಕ, ನೈತಿಕ, ಆಧ್ಯಾತ್ಮಿಕ ವಿವೇಚನೆ ಮತ್ತು ಗಳಿಗೆ ಧರ್ಮವನ್ನು ಆಚರಿಸಬೇಕೆಂದು ಧರ್ಮ ಸೂತ್ರ ಹಾಗೂ ಧರ್ಮಶಾಸ್ ಒತ್ತಿ ಹೇಳುತ್ತವೆ.

## 3. ದರ್ಶನಗಳು

ಯಾವುದರ ಮೂಲಕ ವಸ್ತುಗಳ ತಾತ್ತ್ವಿಕ ಸ್ವರೂಪವನ್ನು ನೋಡು ಅಥವಾ ತಿಳಿದುಕೊಳ್ಳುವುದು ಆಗುತ್ತದೋ ಅದು ದರ್ಶನ ಎನಿಸುತ್ತದೆ.

ಗೌತಮಸ್ಯ ಕಣಾದಸ್ಯ ಕಪಿಲಸ್ಯ ಪತಂಜಲೇಃ ।
ವ್ಯಾಸಸ್ಯ ಜೈಮಿನೇಶ್ಚಾಪಿ ದರ್ಶನಾನಿ ಷಡೇವಹಿ ॥

ಎಂಬಂತೆ ಗೌತಮನ ನ್ಯಾಯ, ಕಣಾದನ ವೈಶೇಷಿಕ, ಕಪಿಲನ ಸಾಂಖ್ಯ, ಪತಂ ಯೋಗ, ವ್ಯಾಸನ ಉತ್ತರಮೀಮಾಂಸೆ, ಜೈಮಿನಿಯ ಪೂರ್ವಮೀಮಾಂಸೆ- ಆರು ದರ್ಶನಗಳೂ ವಿದ್ವಾಂಸರಿಂದ ಮನ್ನಣೆ ಪಡೆದಿವೆ. ಇವು ಆರೂ ವೆ ಉಪಾಂಗಗಳು. ಪೂರ್ವ ಮೀಮಾಂಸೆಯನ್ನು ಹೊರತು ಉಳಿದ ಐದು ಗಳೂ ಉಪನಿಷತ್ತುಗಳ ಚಿಂತನದಿಂದ ರೂಪುಗೊಂಡಿವೆ. ಏಕೆಂದರೆ ವಿವಿಧ ಗಳಲ್ಲಿ ಪ್ರತಿಪಾದಿತವಾಗಿರುವ ಪ್ರಕೃತಿ ಪುರುಷವಾದ, ಸತ್ವರಜೋತಮೋ

ವಾದ, ಭೌತಿಕ ಸೃಷ್ಟಿಯ ಮೂಲಕಾರಣದ ವಿವಿಧ ಸಿದ್ಧಾಂತಗಳು, ಭೌತಿಕ ವಿವರ್ತ ವಾದ, ಪರಮಾತ್ಮ, ಜೀವಾತ್ಮ, ಮರಣೋತ್ತರ ಅವಸ್ಥೆ, ಸಮಾಧಿ, ಮುಂತಾದ ಸಿದ್ಧಾಂತಗಳೆಲ್ಲದರ ಮೂಲವು ಉಪನಿಷತ್ತುಗಳಲ್ಲಿ ಸಿಗುತ್ತದೆ.

ಕರ್ಮಕಾಂಡದ ವಿಧಾನ, ಧರ್ಮದ ವಿವರಣೆ ಪೂರ್ವಮೀಮಾಂಸೆಯಲ್ಲಿದೆ ; ದ್ರವ್ಯ, ಗುಣ, ಕರ್ಮಲಕ್ಷಣ, ಪರಮಾಣು ವಾದಗಳ ವಿವರಣೆ ವೈಶೇಷಿಕದಲ್ಲಿದೆ ; ವಿಭಿನ್ನ ಪ್ರಮಾಣಗಳಿಂದ ವಸ್ತು ತತ್ತ್ವ ಪರೀಕ್ಷೆ ನ್ಯಾಯದಲ್ಲಿ ಆಗುತ್ತದೆ ; ಸ್ಥೂಲತೆ ಯಿಂದ ಸೂಕ್ಷ್ಮತೆಯ ಕಡೆ ಹೋಗುವುದು, ಕರ್ಮ, ಜ್ಞಾನ ಉಪಾಸನೆಗಳು ಯೋಗ ದಲ್ಲಿ ಇವೆ ; 25 ತತ್ತ್ವಗಳ ಗಣನೆ, ವಿವಿಧ ವಿಷಯಗಳ ಖಂಡನ–ಮಂಡನ, ಕತೆ ವಿವರಣೆಗಳ ಭಂಡಾರ ಎಲ್ಲ ಸಾಂಖ್ಯದಲ್ಲಿದೆ ; ಬ್ರಹ್ಮದ ಅಥವಾ ಪರಮಾತ್ಮನ ವಿಷಯ, ಉತ್ತರ ಮೀಮಾಂಸೆ ಅಥವಾ ವೇದಾಂತದಲ್ಲಿದೆ. ವೇದಗಳಲ್ಲಿ ಪ್ರತಿಪಾದಿತ ವಾಗಿರುವ ವಿದ್ಯೆಗಳನ್ನು ವರ್ಗೀಕರಿಸಿ ಅವುಗಳನ್ನು ಪ್ರತ್ಯೇಕವಾಗಿ ಸೂತ್ರ ರೂಪದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಇದು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎಂದು ಮೂರು ಮುಖ್ಯ ವಿಭಾಗವಾಗಿದೆ.

ದುಃಖದ ವಾಸ್ತವಿಕ ಸ್ವರೂಪ, ಅದು ಉತ್ಪತ್ತಿ ಆಗುವ ಸ್ಥಳ, ಅದರ ನಿಜ ವಾದ ಕಾರಣ, ದುಃಖ ನಿವೃತ್ತಿಯ ಹಾಗೂ ಸುಖ ಪ್ರಾಪ್ತಿಯ ಸಾಧನೋಪಾಯ, ಎಂಬೀ ನಾಲ್ಕು ಮುಖ್ಯ ವಿಷಯಗಳು ಎಲ್ಲ ದರ್ಶನಗಳಲ್ಲೂ ಇವೆ. ದರ್ಶನ ಗ್ರಂಥ ಗಳೆಲ್ಲವೂ ಒಂದಕ್ಕೊಂದು ಪೂರಕವಾಗಿದ್ದು, ಇವುಗಳ ಸಮನ್ವಯ ಜ್ಞಾನವು ವೇದಾರ್ಥವನ್ನು ತಿಳಿಯಲು ಸಹಾಯಕವಾಗಿವೆ. ದರ್ಶನಗಳನ್ನು ಚೆನ್ನಾಗಿ ಕಲಿತ ನಂತರವೇ ವೇದ ಭಾಷೆಯ ಪೂರ್ಣ ಜ್ಞಾನವು ದೊರೆತು, ವೇದಗಳಲ್ಲಿರುವ ವಿಭಿನ್ನ ಪ್ರಕಾರಗಳ ವಿದ್ಯೆಗಳು ಬುದ್ಧಿಗೋಚರವಾಗುತ್ತವೆ.

ವೈಜ್ಞಾನಿಕ ರೀತಿಯಿಂದ, ನಿಷ್ಪಕ್ಷಪಾತದೃಷ್ಟಿಯಿಂದ, ಯುಕ್ತಿಯಿಂದ ಅನುಭವ ವನ್ನು ವಿಚಾರ ಮಾಡುವುದು, ವಿಶ್ವ ಜೀವನದ ಸ್ವರೂಪವನ್ನು ವಿವೇಚನೆ ಮಾಡಿ ಜೀವನದ ಕ್ರಮವನ್ನು ಉತ್ತಮಗೊಳಿಸುವುದು, ದರ್ಶನಗಳ ಗುರಿ. ದಾರ್ಶನಿಕರಾದ ಋಷಿಮುನಿಗಳ ಮತಿ ಶಕ್ತಿಗಳಿಗೂ, ಅವರು ಬಳಸಿದ ಪ್ರಮಾಣವೆಂಬ ಜ್ಞಾನಸಾಧನ ಗಳಿಗೂ ಅನುಗುಣವಾಗಿ ತತ್ತ್ವಹಿತ ಪುರುಷಾರ್ಥಗಳು ಪ್ರತಿಪಾದಿಸಲ್ಪಟ್ಟಿವೆ. ಶಾಶ್ವತ ವಾದ ಸ್ವಾತಂತ್ರ್ಯ–ಸುಖಗಳನ್ನು ಬಯಸಿ, ಅದರ ಸಿದ್ಧಿಗಾಗಿ ದುಡಿಯುವವನಿಗೆ, ಆತ್ಮನ ನಿಜ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು, ದರ್ಶನ ಶಾಸ್ತ್ರವು ತುಂಬಾ ಉಪಯುಕ್ತವಾದುದು. ಅವಿದ್ಯೆ, ದುಃಖಗಳನ್ನು ನಾಶಗೊಳಿಸಿ, ಮಾನವರು ಸಹಜ ವಾದ ಜ್ಞಾನ, ಆನಂದ, ಶಾಂತಿ, ಸುಖ, ಸ್ವಾತಂತ್ರ್ಯಗಳನ್ನೆಲ್ಲ ಪಡೆಯುವಂತೆ ಮಾಡುವುದೇ ದಾರ್ಶನಿಕರ ಮುಖ್ಯೋದ್ದೇಶ.

ಮುಖ್ಯವಾಗಿ ಪ್ರಕೃತಿ, ಜೀವಾತ್ಮ, ಪರಮಾತ್ಮ ಅಥವಾ ಅಚಿತ್, ಚಿತ್, ಈಶ್ವರ ಎಂಬೀ ತತ್ತ್ವತ್ರಯದ ಬಗ್ಗೆ ಹಾಗೂ ಅವುಗಳ ಪರಸ್ಪರ ಸಂಬಂಧದ ಬಗ್ಗೆ

ಅನುಮಾನ ಪ್ರಮಾಣದ ಆಧಾರದಿಂದಲೇ ಚರ್ಚಿಸುವುದು ದರ್ಶನಗಳ ಮುಖ್ಯ ವಿಷಯ. ಇದರ ಜೊತೆಗೆ ಸಾವಿನ ನಂತರ ಜೀವಾತ್ಮನ ಸ್ಥಿತಿಗತಿ, ಕರ್ಮ, ಪುನರ್ಜನ್ಮ, ಮುಕ್ತಿ ಇವುಗಳ ಬಗ್ಗೆಯೂ ಇಲ್ಲಿ ವಿಚಾರ ಮಾಡಲಾಗಿದೆ. ಈ ವಿಷಯಗಳ ಬಗ್ಗೆ ಇರುವ ಆರು ಮುಖ್ಯ ವಾದಗಳೂ ವೇದಗಳನ್ನು ಅವಲಂಬಿಸಿ ಹೊರಟಿರುವುದರಿಂದ ಇವು ವೈದಿಕ ದರ್ಶನವೆನಿಸಿಕೊಂಡಿವೆ.

ಹೀಗೆ ಸಂಗ್ರಹವಾಗಿ ಗಹನವಾಗಿರುವ ವೇದಗಳ ಅರ್ಥವು ಸಾಮಾನ್ಯ ಜನರಿಗೆ ಸುಲಭವಾಗಿ ತಿಳಿಯುವುದಿಲ್ಲವೆಂದು ಭಾವಿಸಿದ ಪುರಾತನ ಮಹರ್ಷಿಗಳು ವೇದದ ಒಂದೊಂದು ಭಾಗದ ತಾತ್ಪರ್ಯ ವಿವರಣೆಗಾಗಿ ಬೇರೆ ಬೇರೆ ಶಾಸ್ತ್ರಗಳನ್ನು ರಚಿಸಿದರು. ಜೈಮಿನಿಯು ಕರ್ಮಕಾಂಡಕ್ಕೆ ಪೂರ್ವ ಮೀಮಾಂಸಾ ಶಾಸ್ತ್ರವನ್ನೂ, ವ್ಯಾಸರು ಜ್ಞಾನಕಾಂಡಕ್ಕೆ ಉತ್ತರ ಮೀಮಾಂಸಾಶಾಸ್ತ್ರವನ್ನೂ, ಮನು, ಯಾಜ್ಞವಲ್ಕ್ಯ ಮುಂತಾದವರು ವಿಧಿಭಾಗಕ್ಕೆ ಧರ್ಮಶಾಸ್ತ್ರಗಳನ್ನೂ ಪ್ರಯೋಗ ಭಾಗಕ್ಕೆ ಕಲ್ಪಸೂತ್ರಗಳನ್ನೂ ರಚಿಸಿ ಅರ್ಥವಿವರಣೆಮಾಡಿ ಮಹದುಪಕಾರ ಮಾಡಿದ್ದಾರೆ. ಇವುಗಳ ಸಹಾಯದಿಂದ ಭಾರತೀಯ ವಿದ್ವಾಂಸರು ಸೃಷ್ಟಿಯ ಗೂಢ ಸ್ವರೂಪದ ಒಳ-ಹೊರ ಜ್ಞಾನವನ್ನೆಲ್ಲ ಪಡೆದು, ನಾನಾ ಗ್ರಂಥಗಳಲ್ಲಿ ಸಂಗ್ರಹಿಸಿ ಇಟ್ಟಿದ್ದಾರೆ. ಈ ಜ್ಞಾನವು ಬಹು ಪ್ರಾಚೀನವಾಗಿದ್ದರೂ, ಈಗಿನ ವೈಜ್ಞಾನಿಕ ಸಿದ್ಧಾಂತಕ್ಕೆ ಹೋಲಿಸಿ ನೋಡಿದರೆ ಪರಿಪೂರ್ಣವಾಗಿರುವಂತೆ ಕಾಣಬರುತ್ತದೆ.

ನಾಲ್ಕು ವೇದ, ಆರು ವೇದಾಂಗ, ಆರು ದರ್ಶನ ಇವು ಭಾರತೀಯ ಸಂಸ್ಕೃತಿ ಎಂಬ ದೇವತೆಯ ಜ್ಞಾನೇಂದ್ರಿಯವಿದ್ದಂತೆ ಎಂದು ಪ್ರತೀತಿ. ಗಹನವಾದ ಚಿಂತನೆಯಲ್ಲಿ ಲೀನರಾಗಿ, ದಿವ್ಯದೃಷ್ಟಿಯನ್ನು ಪಡೆದು, ಅಮೋಘ ತತ್ತ್ವವನ್ನು ಸಾಧಿಸಿ, ಉಪದೇಶಿಸಿದ, ವಿಶ್ವವಂದ್ಯರಾದ ಭಾರದ್ವಾಜ, ಕಣ್ವ, ಆಂಗೀರಸ, ವಿಶ್ವಾಮಿತ್ರ, ಜಮದಗ್ನಿ, ಭೃಗು, ಗೌತಮ, ಅತ್ರಿ, ವಸಿಷ್ಠ, ಕಶ್ಯಪ ಮುಂತಾದ ಋಷಿಗಳ ಸಾಧನೆಯು ಆರ್ಯ ಸಂಸ್ಕೃತಿಗೆ ಮೂಲ.

ಭವ್ಯವಾದ ಆದರ್ಶಗಳನ್ನು ರೂಪಿಸಿಕೊಂಡಿದ್ದ ನಮ್ಮ ಪ್ರಾಚೀನ ಋಷಿಮುನಿಗಳು, "ಇನ್ನೊಬ್ಬರ ದುಡಿಮೆಯಿಂದ ನಾವು ಬದುಕಬಾರದು. ಆತ್ಮೋದ್ಧಾರ ಸಾಧನವಾದ ಕರ್ತವ್ಯ ಪಾಲನೆಯನ್ನು ಬಿಡಬಾರದು. ಸತ್ಯ, ಅಹಿಂಸೆ, ದಾನ, ಅಧ್ಯಯನ, ದೇವಪೂಜನ, ಯಜನ, ತಪಸ್ಸು ಇವು ಎಲ್ಲರಿಗೂ ಬೇಕಾದುವು"–ಎಂಬುದನ್ನು ಒತ್ತಿಹೇಳಿ ಹಾಕಿಕೊಟ್ಟ ಮಾರ್ಗವು ಎಲ್ಲ ಕಾಲ, ಎಲ್ಲ ದೇಶ, ಎಲ್ಲ ಜನಾಂಗಗಳಿಗೂ ಅನ್ವಯಿಸುವಂತಹುದು ಎಂದರೆ ಅತಿಶಯೋಕ್ತಿಯಾಗಲಾರದು.

## 4. ಇತಿಹಾಸ–ಎರಡು ಮಹಾಕಾವ್ಯಗಳು

ಇತಿಹಾಸ ಎಂದರೆ ಅದು ಈ ರೀತಿ ನಡೆಯಿತೆಂದು ಹೇಳುತ್ತಾರೆ ಎಂದು ಅರ್ಥ. ವೇದಗಳ ಅರ್ಥವನ್ನು ಯಥಾವತ್ತಾಗಿ ವಿವರಿಸಲು ಪುರಾಣಗಳೊಡನೆ

ಣ-ಮಹಾಭಾರತಗಳ ಅಧ್ಯಯನವೂ ಆವಶ್ಯಕವಾಗುತ್ತದೆ. ಉಪನಿಷತ್ತಿನ
ವಗಳು ಈ ಗ್ರಂಥಗಳ ಐತಿಹಾಸಿಕ ಪಾತ್ರಗಳಲ್ಲಿ ರೂಪುಗೊಂಡು ಸರ್ವಶಕ್ತಿ
ಗರಿಕತೆ-ಜನಾಂಗಗಳನ್ನು ಒಟ್ಟುಗೂಡಿಸಿವೆ. ಭಾರತೀಯರ ಎರಡು ಕಣ್ಣು
ರ ಈ ಸಾಂಸ್ಕೃತಿಕ ಮಹಾಕಾವ್ಯಗಳು ಭಾರತೀಯ ಜನಾಂಗದ ಜೀವಂತಿಕೆ
ಂಡಿದಿಟ್ಟಿರುವ ಚೈತನ್ಯಾಗಾರಗಳು, ಭಾರತೀಯ ಚೇತನವನ್ನು ಶತಮಾನ
ಹಿಡಿದು ಮುನ್ನಡೆಸುತ್ತಿರುವ ಆಶಾದೀಪಗಳು ಹಾಗೂ ಎಂದೂ ಆರದ
ಿ ಸ್ರೋತಗಳು, ನೀತಿಬೋಧಕ ಗ್ರಂಥಗಳು, ರಾಷ್ಟ್ರದ ಆಸೆ ಆಕಾಂಕ್ಷೆ,
ದ್ಧಿಗಳ ಇತಿಹಾಸಗಳು, ಎನಿಸಿ ಮೆರೆದು ಜನಮನವನ್ನು ಸೂರೆಗೊಂಡಿವೆ.
ನಾಂಗ ಈಗಲೂ ಸಾಧಿಸಲು ಬಯಸುವಂತಹ ಆದರ್ಶ ನಾಗರಿಕತೆಯನ್ನು
ಈ ಕಾವ್ಯಗ್ರಂಥಗಳು ನಿಜವಾಗಿ ಪ್ರಾಚೀನ ಆರ್ಯರ ಜೀವನ-ಪ್ರಜ್ಞೆಗಳ
ಗಳಾಗಿವೆ. ಇವು ದೊಡ್ಡ ದೇಶವೊಂದರ ಜನತೆಯ ಚಾರಿತ್ರ್ಯ-ನಾಗರಿಕತೆ
ೂಪಿಸಿರುವ ವಾಸ್ತವ ಚರಿತ್ರೆಗಳು. ಆದರ್ಶ ಸ್ತ್ರೀ ಪುರುಷರ ಚಿತ್ರಣ

ಮಾಜಿಕ ಹಾಗೂ ನೈತಿಕ ನಿಯಮಾವಳಿ ಎನಿಸಿದ ಧರ್ಮದ ಅಂಕೆಗೆ ಒಳ
ಮಾನವನ ಭಾವನಾತ್ಮಕ, ರಸಾತ್ಮಕ, ಬೌದ್ಧಿಕ, ಆರ್ಥಿಕ, ವೈಷಯಿಕ,
ಕ್ಷೆಗಳೆಲ್ಲವೂ ಪೂರ್ತಿಗೊಂಡು, ಮಾನವನು ನಿಸರ್ಗದ ನೇರವಾದ ನಿಯಮ
ಧ್ಯಾತ್ಮಿಕ ಜೀವನ ನಡೆಸಲು ಸಿದ್ಧನಾಗುವಂತೆ ಮಾಡುವ ಸಲುವಾಗಿ
ಣ-ಮಹಾಭಾರತಗಳು ರಚಿಸಲ್ಪಟ್ಟಿವೆ. ನಮ್ಮ ನಾಡಿನ ಸಾಹಿತ್ಯ, ಧರ್ಮ,
ಆಚಾರ ಪರಂಪರೆಗಳ ತಲಕಾವೇರಿಯಂತಿರುವ, ಹಾಗೂ ಭಾರತದ
, ಆಧ್ಯಾತ್ಮಿಕ, ಸಾಮಾಜಿಕ, ರಾಜಕೀಯ ರಂಗಗಳಿಗೆ ಬೇಕಾದ ಪ್ರಾಣ
ಕೊಟ್ಟ, ಈ ಎರಡು ಮಹಾಕಾವ್ಯಗಳು ಈಗಲೂ ಅವುಗಳನ್ನು ಪಡೆಯಲು
ೀಡುತ್ತವೆ.

ಣ, ವಾಚನ, ಬಯಲಾಟ, ನೃತ್ಯ, ನಾಟಕಗಳ ಮೂಲಕ ಜನಸಮೂಹ
ಪಂಥಗಳ ಭೇದವಿಲ್ಲದೆ ನಿರಂತರವಾಗಿ ಆಕರ್ಷಿಸುವ ಮನರಂಜನೆಗಳಾಗಿ
ಾವ್ಯಗಳನ್ನು ಮಾತಾಪಿತೃಗಳು ಹಾಗೂ ಹಿರಿಯರು ತಲೆಮಾರುಗಳ ಕಾಲ
ರುರಿಗೆ ಜ್ಞಾನವನ್ನು ಬೋಧಿಸಲು ಉಪಯೋಗಿಸಿಕೊಂಡಿದ್ದಾರೆ.

**ಮಾಯಣ**

ನವ ಚೇತನದ ಆದರ್ಶಗಳ ಹಾಗೂ ಮೌಲ್ಯಗಳ ಉತ್ಕಟ ಅಭಿವ್ಯಕ್ತಿಯೇ
ಣ. ವಿವಿಧ ಜನರ ವಿಷಯದಲ್ಲಿ ನಮ್ಮಗಳ ವರ್ತನೆ ಹೇಗೆ ಇರಬೇಕೆಂಬುದು
ಕಿಂಪುರ ಕಥೆ ಎನಿಸಿದ ರಾಮಾಯಣದ ಸಾರ.
ರಥನ ಪಿತೃಧರ್ಮ, ಕೌಸಲ್ಯೆಯ ಪುತ್ರವಾತ್ಸಲ್ಯ, ದಾಶರಥಿ ರಾಮನ

ಪುತ್ರ, ರಾಜ ಮತ್ತು ಮಾನವ ಧರ್ಮ, ಸೀತಾದೇವಿಯ ಸತಿಧರ್ಮ, ಲಕ್ಷ್ಮಣನ ಭ್ರಾತೃ ಸೇವೆ, ಭರತನ ಬಂಧು ಪ್ರೇಮ ಮತ್ತು ಕರ್ತವ್ಯನಿಷ್ಠೆ, ಸುಗ್ರೀವನ ಮೈತ್ರಿ, ಹನುಮಂತನ ಕೈಂಕರ್ಯ ಮನೋಭಾವ, ವಿಭೀಷಣನ ಶರಣಾಗತಿ ಇವೆಲ್ಲವೂ ಶ್ಲಾಘ್ಯವಾಗಿ ಚಿತ್ರಿತವಾಗಿವೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ತಂದೆಯ ಬಗ್ಗೆ ಮಗನ ವಿಧೇಯತೆ, ಜನತೆಯ ಬಗ್ಗೆ ರಾಜನಲ್ಲಿ ಗೌರವ, ಸೋದರರಲ್ಲಿ ಪರಸ್ಪರ ಪ್ರೇಮ, ಪತಿಯ ಬಗ್ಗೆ ಸತಿಯ ವಿಧೇಯತೆ, ಯಜಮಾನನ ಬಗ್ಗೆ ಸೇವಕನ ಭಕ್ತಿ, ಮಿತ್ರರಲ್ಲಿ ಪರಸ್ಪರ ಪ್ರೇಮ-ಸಹಕಾರ, ಭಗವಂತನ ಬಗ್ಗೆ ಭಕ್ತರಲ್ಲಿ ಉತ್ಕಟ ಶ್ರದ್ಧಾ ಭಕ್ತಿ, ಗಂಡು ಹೆಣ್ಣುಗಳಲ್ಲಿ ಪರಸ್ಪರ ಶ್ರೇಷ್ಠ ವರ್ತನೆ, ಸ್ತ್ರೀಧರ್ಮ–ಮುಂತಾದ ಧರ್ಮತತ್ತ್ವಗಳು ಸೀತಾರಾಮರ ಜೀವನ ಸಾಹಸಗಳಲ್ಲಿ ಕಂಡು ಬರುವ ಮುಖ್ಯ ಅಂಶ. ಮನುಷ್ಯನ ಜನ್ಮಕ್ಕಿಂತ ಶೀಲಕ್ಕೆ ಹೆಚ್ಚು ಬೆಲೆಯುಂಟು. ಸಾಧುವಾದ ಪ್ರಾಣಿ ಪಕ್ಷಿಗಳೂ ಗೌರವ ಸೇವೆಗಳಿಗೆ ಅರ್ಹವಾದುವು, ನೀನೇ ಗತಿ ಎಂದು ಬೇಡಿ ಬಂದವನನ್ನು ರಕ್ಷಿಸಬೇಕು - ಎಂಬುದೆಲ್ಲವನ್ನೂ ಒಳಗೊಂಡ ರಾಮಾಯಣವು ಶರಣಾಗತಿ ಶಾಸ್ತ್ರವೆನಿಸಿ ಹಿಂದೂಗಳ ಪಾರಾಯಣ ಗ್ರಂಥವಾಗಿರುವುದು ಒಂದು ಮುಖ್ಯ ಸಂಗತಿ.

ರಾಮಾಯಣ ಮೂಲವೃಕ್ಷದ ರೆಂಬೆಯಾಗಿ, ಶ್ರೀರಾಮನನ್ನು ಅವಲಂಬಿಸಿ, ಭಾರತದ ಅನೇಕ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯಾಗಿ ಹರಡಿಕೊಂಡಿದೆ.

## (2) ಮಹಾಭಾರತ

ಆದರ್ಶಗಳ ಸಂಘರ್ಷದ ಚಿತ್ರಣ ಇಲ್ಲಿ ಮುಖ್ಯವಾದುದು. ಧರ್ಮ-ಅಧರ್ಮ ಗಳ ಹೋರಾಟದಲ್ಲಿ ಧರ್ಮದ ಜಯಕ್ಕಾಗಿ, ದುಷ್ಟ ಶಿಕ್ಷಣ ಮತ್ತು ಶಿಷ್ಟ ಪರಿಪಾಲನ ಮಾಡಲು, ಭಗವಂತನು ಕಲ್ಪಿಸಿರುವ ಸನ್ನಿವೇಶಗಳು ಹಾಗೂ ಮಾಡುವ ಉಪದೇಶ ಗಳು, ಜನರ ಮನಸ್ಸನ್ನು ರಂಜಿಸಿ, ಆಕರ್ಷಿಸಿ, ಉನ್ನತಗೊಳಿಸುತ್ತವೆ ಎಂಬುದು ಮಹಾಭಾರತದ ಕಥಾವಸ್ತು. ಸತ್ಯಸಂಧತೆ, ದೈವತ್ವ, ತಾಳ್ಮೆ, ಪತಿವ್ರತಾಭಾವ, ತಪಸ್ಸು, ದೀನರಲ್ಲಿ ದಯೆ, ದುಷ್ಟ ನಿಗ್ರಹದ ಕಾರಣ ಸುಧಾರಿಸಬೇಕೆಂಬ ದೃಷ್ಟಿ- ಎಂಬುದೆಲ್ಲವನ್ನೂ ವಿವರಿಸುವ ಮಹಾಭಾರತವು ಧರ್ಮಶಾಸ್ತ್ರ ಹಾಗೂ ಪಂಚಮವೇದ ಎನಿಸಿಕೊಂಡಿದೆ.

ಭೀಷ್ಮ ದ್ರೋಣರ ಪಾರದರ್ಶಿತ್ವ, ಯುಧಿಷ್ಠಿರನ ಧರ್ಮಶ್ರದ್ಧೆ, ಭೀಷ್ಮ- ಅರ್ಜುನರ ಅಲೌಕಿಕ ಪೌರುಷ, ಭೀಮಸೇನನ ಅತಿಮಾನುಷ ಸಾಹಸ, ದುರ್ಯೋ ಧನನ ಆತ್ಮಾಭಿಮಾನ, ಕರ್ಣನ ದಾನ, ಶಲ್ಯನ ಸಾರಥ್ಯ, ದ್ರೌಪದಿಯ ಕೃಷ್ಣ ಭಕ್ತಿ- ಇವು ಮಹಾಭಾರತದಲ್ಲಿ ಮನಸೆಳೆಯುವ ಅಂಶಗಳು. ವಿದುರ ನೀತಿ, ಅನುಗೀತಾ, ಮೋಕ್ಷಧರ್ಮ ಇವು ಇದರಲ್ಲಿ ಪ್ರಮುಖ ಘಟ್ಟಗಳು. ಧರ್ಮದಾಚೆಗಿನ ಮೌಲ್ಯ ಗಳನ್ನು ಒಳಗೊಂಡಿರುವ ಹಿರಿಮೆಯುಳ್ಳ ಮಹಾಭಾರತವು ಮನುಷ್ಯರ ವರ್ತನೆಗಳ

ವಿಶ್ವಕೋಶವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ "ಮಹಾ ಭಾರತದಲ್ಲಿ ಇರುವುದು ಅನ್ಯತ್ರ ಸಿಗಬಹುದು. ಆದರೆ ಇದರಲ್ಲಿ ಇಲ್ಲದಿರುವುದು ಮತ್ತೆಲ್ಲಿಯೂ ಸಿಗಲಾರದು" ಎಂಬ ಲೋಕೋಕ್ತಿಯುಂಟು.

ಮಹಾಭಾರತದಲ್ಲಿ ಸೇರಿಕೊಂಡಿರುವ ಭಗವದ್ಗೀತೆಯು ಸರ್ವಶ್ರೇಷ್ಠ ಸಾಹಿತ್ಯ ವೆನಿಸಿ ಬಹುಪ್ರಾಮುಖ್ಯ ಹೊಂದಿ ಪ್ರಸ್ಥಾನತ್ರಯಗಳಲ್ಲಿ ಒಂದಾಗಿದೆ. ಭಗವದ್ಗೀತೆ, ವಿಷ್ಣು ಸಹಸ್ರನಾಮ, ಅನುಗೀತಾ, ಭೀಷ್ಮರಾಜಸ್ತವ, ಗಜೇಂದ್ರಮೋಕ್ಷ ಐದೂ ಪಂಚರತ್ನವೆನಿಸಿವೆ.

ಮಹಾಭಾರತ ಮೂಲವೃಕ್ಷದ ರೆಂಬೆಯಾಗಿ, ಶ್ರೀಕೃಷ್ಣವನನ್ನು ಅವಲಂಬಿಸಿ, ಭಾರತದ ಅನೇಕ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯಾಗಿ ಹರಡಿದೆ.

## (3) ಭಗವದ್ಗೀತೆ

ಮಹಾಭಾರತದಲ್ಲಿ ಅಂತರ್ಗತವಾಗಿರುವ 18 ಅಧ್ಯಾಯಗಳ, 700 ಪದ್ಯಗಳ ಭಗವದ್ಗೀತೆಗೆ ಎಲ್ಲಕ್ಕಿಂತ ಮಿಗಿಲಾದ ಗೌರವವಿದೆ. ಅಹಂಭಾವದ ನಾಶ, ಎಲ್ಲ ದರಲ್ಲಿಯೂ ಭಗವಂತನ ಅಂತರ್ಯಾಮಿತ್ವದ ಪ್ರತಿಪಾದನೆ, ಧರ್ಮಪರಾಯಣತಾ ದೃಷ್ಟಿಯ ಆವಶ್ಯಕತೆ, ವಿವಿಧತೆಯಲ್ಲಿ ಏಕತೆಯ ಸ್ಥಾಪನೆ, ಏಕದೇವೋಪಾಸನೆ, ನಿಸ್ವಾರ್ಥಸೇವೆ, ಜ್ಞಾನ ಕರ್ಮಭಕ್ತಿಗಳ ವಿಸ್ತೃತ ವಿವರಣೆ–ಇವೆಲ್ಲವೂ ಭಗವದ್ಗೀತೆ ಯಲ್ಲಿ ಸಂಗ್ರಹವಾಗಿರುವ ಸಾರ. ಅತಿ ಜನಪ್ರಿಯ ಶಾಸ್ತ್ರಗ್ರಂಥವೆನಿಸಿರುವ ಗೀತೆಯು ಉಪನಿಷತ್ತುಗಳ ತಿರುಳು ಹಾಗೂ ಸಾರಸರ್ವಸ್ವ. ಇದನ್ನು ಓದಿ ಇದರ ಅರ್ಥವನ್ನು ಸರಿಯಾಗಿ ತಿಳಿದುಕೊಂಡು, ಕಾರ್ಯರೂಪದಲ್ಲಿ ತಂದರೆ ಇಹಪರಗಳೆರಡರಲ್ಲಿಯೂ ಒಳಿತು ಆಗಿ, ಪುರುಷಾರ್ಥಗಳು ಲಭಿಸುತ್ತವೆ. ಎಷ್ಟೇ ಕಷ್ಟ ಬರಲಿ, ಕರ್ತವ್ಯವಿಮುಖ ನಾಗದೆ, ಪ್ರಾಮಾಣಿಕವಾಗಿ ಭಗವಂತನನ್ನು ಉಪಾಸಿಸಿದರೆ, ಪಾಪಗಳಿಂದ ಖಂಡಿತ ರಕ್ಷಿಸಲ್ಪಡುವವನು ಎಂಬುದು ಗೀತೆಯ ಮುಖ್ಯ ಸಂದೇಶ.

ಭಗವದ್ಗೀತೆ ಎಂಬ ಜ್ಞಾನದೀಪವು ಸಾಂಪ್ರದಾಯಿಕರ ಜೊತೆಗೆ ವಿಚಾರವಾದಿ ಗಳನ್ನೂ ಆಕರ್ಷಿಸಿದೆ. ಇದರ ರತ್ನಕಾಂತಿಯು ಕಾಲದೇಶಗಳ ಮಿತಿಯನ್ನೂ ಮೀರಿ ಬೆಳಗುತ್ತಿದೆ. ಇದರ ಮೂಲಕ ಜ್ಞಾನಾಂಧಕಾರದಲ್ಲಿ ಮುಳುಗಿರುವ ನಮಗೆಲ್ಲ, ನಮ್ಮೊಳಗೆ ನಡೆಯುತ್ತಿರುವ ಆಸುರೀ (ಕೌರವ) ಮತ್ತು ದೈವೀ (ಪಾಂಡವ) ಪ್ರವೃತ್ತಿಗಳ ಕಲಹವನ್ನು, ನಮ್ಮ ಆಂತರಿಕ ಜ್ಞಾನಕ್ಕೆ ಗೋಚರಿಸುವಂತೆ ಮಾಡಿ, ಅದರಲ್ಲಿ ದೈವೀಪ್ರಕೃತಿಗಳೇ ಜಯಗಳಿಸಲು ನಾವು ಮಾಡಬೇಕಾದ ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ ಎಂಬ ನಾಲ್ಕು ಯೋಗಗಳ ಸಾಧನಗಳನ್ನು ತಿಳಿಸಲಾಗಿದೆ. ಸರ್ವದೇಶ, ಕಾಲ, ಅವಸ್ಥೆಗಳಲ್ಲಿರುವ ಸಮಸ್ತ ಮಾನವರಿಗೂ ಭಗವಂತನು ನೀಡಿರುವ ಸಂದೇಶ ವೆನಿಸಿದ ಗೀತೆಯು ಆಚಾರ್ಯ,ಸಂತ, ನಾಯಕ ಇವರಿಗೆಲ್ಲ ಸ್ಫೂರ್ತಿದಾಯಕವಾಗಿದೆ. ಮುಖ್ಯವಾಗಿ ಗೀತೆಯು ಲೋಕಜೀವನದ ವಿಷಯದಲ್ಲಿ ಗೌರವ ಬುದ್ಧಿ, ಕರ್ತವ್ಯದ

ಆಚರಣೆಯಲ್ಲಿ ಉತ್ಸಾಹ, ಆಪತ್ಕಾಲದಲ್ಲಿ ಧೈರ್ಯ, ಸಂಶಯಗ್ರಸ್ತ ಮನಸ್ಸಿಗೆ ನೆಮ್ಮದಿ ನೀಡುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

ಹಲವಾರು ತತ್ತ್ವಗಳಿಗೆ ಉಗಮಸ್ಥಾನವಾದ ಗೀತೆಯಲ್ಲಿ, ತಪ್ಪು-ಸರಿ ಎನ್ನದೆ, ಯಾರು ಯಾವ ಸಂಪ್ರದಾಯದಲ್ಲಿ ಹುಟ್ಟಿ ಬೆಳೆದಿರುವವರೋ, ಆಯಾ ತತ್ತ್ವಗಳನ್ನು ಶ್ರದ್ಧಾ ಭಕ್ತಿ ಗೌರವಗಳಿಂದ ಅನುಷ್ಠಾನ ಮಾಡಲಿ, ಬೇರೆಯವರದನ್ನು ದೂರದೆ ಇರಲಿ, ಎಂಬುದು ಇದರಲ್ಲಿ ಮುಖ್ಯವಾದ ಅಂಶ.

## 5. ಪುರಾಣಗಳು

ಶ್ರುತಿಯು ತಂದೆ, ಸ್ಮೃತಿಯು ತಾಯಿ ಆದರೆ, ಪುರಾಣಗಳು ಪತ್ನಿಯಂತಿವೆ. ಗೂಢವಾಗಿ ಸೂತ್ರ ರೂಪದಲ್ಲಿರುವ ವೇದ ಮಂತ್ರಗಳ ಗಹನ ತತ್ತ್ವಗಳನ್ನು ಸಾಮಾನ್ಯ ಜನರೂ ತಿಳಿದು ಜೀರ್ಣಿಸಿಕೊಳ್ಳಲಿ ಎಂಬ ಘನ ಉದ್ದೇಶದಿಂದ ಪುರಾಣಗಳು ರಚಿಸಲ್ಪಟ್ಟುವು. ಅಂದರೆ ವೇದಗಳನ್ನು ಕೇಳುವ ಅಧಿಕಾರವಿಲ್ಲದ ಸ್ತ್ರೀ, ಶೂದ್ರ, ದ್ವಿಜ ಬಂಧುಗಳಿಗೆ ಸಹಾಯ ಮಾಡಲು, ಜ್ಞಾನ ಕರ್ಮ ಭಕ್ತಿ ಹಾಗೂ ಜೀವನ ನಡತೆಗಳಿಗೆ ಸಂಬಂಧಿಸಿದ ವೈದಿಕ ತತ್ತ್ವಗಳನ್ನು ಜನಪ್ರಿಯಗೊಳಿಸಲು, ಪುರಾಣಗಳು ಬರೆಯಲ್ಪಟ್ಟವು.

ಪುರಾಣವೆಂದರೆ ಪ್ರಾಚೀನ ಅಥವಾ ಹಳೆಯ ಆಖ್ಯಾನ, ಪ್ರಾಚೀನ ಕಾಲದ ಜಗತ್ತಿನ ಕಥೆ ಐತಿಹ್ಯಗಳನ್ನು ವಿಚಾರ ಮಾಡುವ ಗ್ರಂಥಗಳ ಗುಂಪು ಎನ್ನಬಹುದು. ವೇದ, ಇತಿಹಾಸ, ಪುರಾಣಗಳು ಪರಮಾತ್ಮನ ಉಸಿರಿನಿಂದ ಹುಟ್ಟಿದುವೆಂದು ಹೇಳ ಲಾಗುತ್ತದೆ. ಪುರಾಣವು ಪಂಚಮವೇದವೆನಿಸಿದೆ.

ಮದ್ವಯಂ ಭದ್ವಯಂ ಚೈವ ಬ್ರತ್ರಯಂವ ಚತುಷ್ಟಯಂ ।
ಅನಾಪಲ್ಲಿಂಗ ಕೂಸ್ಕಾನಿ ಪುರಾಣಾನಿ ಪ್ರಚಕ್ಷ್ಯತೇ ॥

ಎಂಬಂತೆ ಮತ್ಸ್ಯ, ಮಾರ್ಕಂಡೇಯ ; ಭವಿಷ್ಯ, ಭಾಗವತ ; ಬ್ರಹ್ಮಾಂಡ, ಬ್ರಹ ವೈವರ್ತ, ಬ್ರಹ್ಮ ; ವಾಮನ, ವರಾಹ, ವಿಷ್ಣು, ವಾಯು ; ಅಗ್ನಿ, ನಾರದ ಪದ್ಮ, ಲಿಂಗ, ಗರುಡ, ಕೂರ್ಮ, ಸ್ಕಂದ ಎಂಬ 18 ಪ್ರಧಾನ ಪುರಾಣಗಳಲ್ಲ ಅನೇಕ ಉಪಪುರಾಣಗಳೂ ರಚಿಸಲ್ಪಟ್ಟಿವೆ.

ಆದಿಭೌತಿಕ ಜಗತ್ತಿನ ಸ್ಥೂಲ, ಆದಿದೈವಿಕ ಜಗತ್ತಿನ ಭಾವ, ಆಧ್ಯಾತ್ಮಿ ಜಗತ್ತಿನ ನಿತ್ಯ, ಎಂಬೀ ಸತ್ಯವನ್ನೊಳಗೊಂಡ ಪುರಾಣಗಳಲ್ಲಿ ದೇವತಾ ಉಪಾಸನೆಯು ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ. ವೈದಿಕ ಆದರ್ಶಗಳನ್ನು ನಿಷ್ಠೆಯಿ ಪಾಲಿಸಿದ ಋಷಿಗಳ ಹಾಗೂ ವಿವಿಧ ನಾಯಕರ ವಿಸ್ತಾರವಾದ ಚರಿತ್ರೆ ಇದೆ. ದೈವ ವನ್ನು ಪಡೆದು ವಂದ್ಯ, ಪೂಜಿತ ಆದ ಪಶುಪಕ್ಷಿಗಳ ಕಥೆಗಳೂ ಇವೆ. ಸಕಲಜೀ ರಾಶಿಗಳೂ ಪರಮಾತ್ಮನ ಅಭಿವ್ಯಕ್ತ ರೂಪಗಳು ಎಂಬುದನ್ನು ದೃಢಪಡಿಸುವ ಪುರಾ

ಗಳು ಧರ್ಮ ಪ್ರಸಾರದ ಮಾಧ್ಯಮವೆಂದು ವೇದಗಳಿಗೆ ಸಮಾನವಾಗಿ ಗೌರವಿಸಲ್ಪಡು ತ್ತಿವೆ.

ಸೃಷ್ಟಿಯ ಕಾಲದಿಂದಲೂ ಮಾನವನ ಮಿದುಳಿನಿಂದ ಹೊರಹೊರಟ ವಿಚಾರ ಧಾರೆಗಳೆಲ್ಲವೂ ಪುರಾಣಗಳಲ್ಲಿ ಮಡುಗಟ್ಟಿ ನಿಂತಿವೆ. ಸೃಷ್ಟಿ ಸ್ಥಿತಿ ಲಯಗಳನ್ನು ವಿವರಿ ಸುವ ಇವು ಮಾನವನ ಬಾಳಿನ ಪಯಣದಲ್ಲಿ ಸ್ಫೂರ್ತಿ—ಪ್ರೇರಣೆಗಳನ್ನು ಒದಗಿಸಿ ದಾರಿ ತೋರುವ ಬೆಳಕಿನ ಬಳ್ಳಿಗಳಾಗಿವೆ. ಈ ಪುರಾಣಗಳು ಧರ್ಮಾನುಕೂಲವಾದ ಕಾಮ, ಸ್ವಾರ್ಥರಹಿತ ಅರ್ಥೋಪಾರ್ಜನ, ತ್ಯಾಗೋನ್ಮುಖ ಭೋಗಾನುಭೋಗ ಇವುಗಳೊಂದಿಗೆ ಧರ್ಮದ ಮರ್ಮ ಹಾಗೂ ಕರ್ಮದ ಕೌಶಲ್ಯಗಳನ್ನು ತಿಳಿಯಹೇಳಿ, ಚತುರ್ವಿಧ ಪುರುಷಾರ್ಥಗಳನ್ನೂ ಒದಗಿಸಿಕೊಡುತ್ತವೆ. ಮಾನವ ಜೀವನದ ಪರಿ ಪೂರ್ಣತೆಯ ಸಿದ್ಧಿಗಾಗಿ, ಅತ್ಯಾವಶ್ಯಕವಾದ ಅಂತಃಕರಣವು ಶುದ್ಧಿಗೊಳ್ಳುವ ಉಪಾಯ ಇವುಗಳಲ್ಲಿದೆ. ಜೀವನವನ್ನು ಸರ್ವಾಂಗ ಸುಂದರವನ್ನಾಗಿಮಾಡಿ, ಎಲ್ಲ ಜೀವಿಗಳಲ್ಲಿಯೂ ದೈವೀ ಗುಣಗಳ ವಿಕಾಸ ಉಂಟಾಗಲು ಇವು ಕಾರಣವಾಗಿವೆ.

ಒಟ್ಟಿನಲ್ಲಿ ಪುರಾಣಗಳು ಕಥೆಗಳ ಮೂಲಕ ಋಷಿಗಳ ಪ್ರಜ್ಞೆ ಹಾಗೂ ಧರ್ಮ ತತ್ತ್ವಗಳನ್ನು ಬೋಧಿಸಿ, ವಿವಿಧ ಪುಣ್ಯ ಕ್ಷೇತ್ರ—ತೀರ್ಥಗಳ ಮಹಿಮೆಯನ್ನು ಹಾಡಿ ಪೊಗಳಿ, ಆಚಾರವಿಚಾರದ ಹಿರಿಮೆಯನ್ನು ಸಾರಿ, ಜ್ಞಾನದ ಮೂಲಕ ದೈವ ಭಕ್ತಿ ಹುಟ್ಟುವಂತೆ ಮಾಡಿ ಜನರನ್ನು ಸುಸಂಸ್ಕೃತರನ್ನಾಗಿ ಮಾಡುತ್ತವೆ.

ದೇವತೆಗಳ ಹಾಗೂ ವೀರ ಸ್ತ್ರೀ ಪುರುಷರ ಮೂಲಕ ಭಾರತೀಯರ ನಂಬಿಕೆ, ಆದರ್ಶ ಹಾಗೂ ಸಂಪ್ರದಾಯಗಳು ಈ ಅಮೂಲ್ಯ ಗ್ರಂಥದಲ್ಲಿ ಅಭಿವ್ಯಕ್ತಿಗೊಳಿಸ ಲ್ಪಟ್ಟಿವೆ.

ಒಂದು ಪ್ರಾಚೀನ ಜನಾಂಗದ ದೇವತಾ ಶಾಸ್ತ್ರ ಮತ್ತು ಚರಿತ್ರೆಗಳ ಬಗ್ಗೆ ಅಮೂಲ್ಯ ದಾಖಲೆಯಾಗಿರುವ ಪುರಾಣಗಳಿಗೆ, ಭಾರತೀಯ ಸಂಸ್ಕೃತಿ—ನಾಗರಿಕತೆ ಗಳನ್ನು ಸಾಧಾರಣ ಜನತೆಯಲ್ಲಿ ಪ್ರಚಾರ ಮಾಡಿದುದರ ಶ್ರೇಯಸ್ಸು ಸಲ್ಲುತ್ತದೆ. ಪ್ರಾಚೀನ ಭೂಗೋಳ, ರಾಜಕೀಯ ಚರಿತ್ರೆಗಳನ್ನು ತಿಳಿಸುವ ಈ ಪುರಾಣ ಗ್ರಂಥ ಗಳು ಮಹತ್ವಪೂರ್ಣವ ಇತಿಹಾಸ-ಸಂಸ್ಕೃತಿಗಳ ದೃಷ್ಟಿಯಿಂದ ಅಮೂಲ್ಯವೆನಿಸಿವೆ. ಜೀವನದ ಉದಾತ್ತ ವಿಚಾರವನ್ನು ತುಂಬುವುದರ ಮೂಲಕ ಜನರ ಮನಸ್ಸನ್ನು ತಿದ್ದಲು, ಧಾರ್ಮಿಕ, ಸಾಮಾಜಿಕ, ಆರ್ಥಿಕ ಸಮಸ್ಯೆಗಳನ್ನು ಜಾಣ್ಮೆಯಿಂದ ಬಿಡಿ ಸಲು ಪುರಾಣಗಳು ನೆರವು ನೀಡಿದುವು. ವ್ಯಕ್ತಿ, ಸಮಾಜ, ವಿಶ್ವಗಳೆಲ್ಲದರ ಒಳಿತು- ಏಳಿಗೆಗಳಿಗೆ ಸಹಾಯವಾಗುವ ಎಲ್ಲ ಅಂಶಗಳೂ ಇಲ್ಲಿವೆ ಎಂದರೆ ಅತಿಶಯೋಕ್ತಿಯಾಗ ಲಾರದು. ಪುರಾಣಗಳಲ್ಲಿ ವಿಷ್ಣು ಪುರಾಣ ಮತ್ತು ಭಾಗವತ ಪುರಾಣ ಮುಖ್ಯವೆನಿಸಿ ಕೊಂಡಿವೆ.

(೧) ಪರಾಶರ ಮಹರ್ಷಿಗಳ ವಿಷ್ಣುಪುರಾಣ

ತತ್ತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವ
ಭೋಗಾಪವರ್ಗ ತದುಪಾಯ ಗತೀರುದಾರಃ ।
ಸಂದರ್ಶಯನ್ನಿರಮಮಿಾತ ಪುರಾಣರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ ॥

ಪರಮಭಾಗವತರಲ್ಲಿ ಒಬ್ಬರಾದ ಇವರ ತಾತ ವಸಿಷ್ಠ, ಅಜ್ಜ ಪ್ರಸೂತಿ, ತಂದೆಯಾದ ಶಕ್ತಿ ಋಷಿಯು ಅತಿ ಬುದ್ಧಿವಂತರು. ತಾಯಿಯಾದ ಅದೃಶ್ಯಂತಿಯು ರೂಪಗುಣ ಸಂಪನ್ನೆ. ಕೋಪಿಷ್ಠರಾಗಿದ್ದ ತಂದೆಯ ಶಾಪಕ್ಕೆ ಗುರಿಯಾದ ರಾಜನೊಬ್ಬನು ರಾಕ್ಷಸನಾಗಿ ಶಕ್ತಿ ಮಹರ್ಷಿಯನ್ನು ಭಕ್ಷಿಸಿದನು. ತಂದೆ ಸತ್ತ ಮೇಲೆ ಜನಿಸಿ, ಕವಿದಿದ್ದ ನಿರಾಸೆಯನ್ನು ಹೋಗಲಾಡಿಸಿ, ಆಶಾಭಾವನೆಯನ್ನುಂಟು ಮಾಡಿದ ಇವರಿಗೆ ತಾತ ವಸಿಷ್ಠರು ಪರಾಶರ ಎಂದು ಹೆಸರಿಟ್ಟರು.

ಇವರು ತಾತನಿಂದಲೇ ಎಲ್ಲ ವಿದ್ಯೆಯನ್ನೂ ಕಲಿತು ಅತಿ ದೊಡ್ಡ ವಿದ್ವಾಂಸ ಹಾಗೂ ಬ್ರಹ್ಮಜ್ಞಾನಿ ಎನಿಸಿದರು. ತಂದೆಯ ಉದಾಹರಣೆಯಿಂದ ಋಷಿಗಳಾದವರಿಗೆ ಕೋಪ, ಮತ್ಸರಗಳು ಇರಬಾರದೆಂಬ ಅನುಭವ ಬಂದಿತು. ಹಿಮಾಲಯದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ಅಲ್ಲಿ ನೂರಾರು ಶಿಷ್ಯರಿಗೆ ಶಿಕ್ಷಣ ನೀಡುತ್ತಿದ್ದರು. ಆಸೇತು ಹಿಮಾಚಲಪರ್ಯಂತ ಪಾದಯಾತ್ರೆ ಮಾಡಿ ಬಂದರು. ಮೇಲುಕೋಟೆ (ತಿರುನಾರಾಯಣಪುರ)ಯಲ್ಲಿದ್ದಾಗ ತಮ್ಮ ಪ್ರಿಯ ಶಿಷ್ಯರಾದ ಮೈತ್ರೇಯಿಯ ಪ್ರಶ್ನೆಗಳಿಗೆಲ್ಲ ವಿವರವಾದ ಉತ್ತರಗಳನ್ನು ನೀಡಿದರು. ಪರಾಶರ-ಮೈತ್ರೇಯಿಗಳಲ್ಲಿ ನಡೆದ ಪ್ರಶ್ನೋತ್ತರವೇ ವಿಷ್ಣುಪುರಾಣವೆಂದು ಖ್ಯಾತಿ ಪಡೆದ ಕೃತಿ. ಇದು ಎಲ್ಲ 18 ಪುರಾಣಗಳ ವಿಷಯಗಳ ತಾತ್ಪರ್ಯವನ್ನು ಹೊಂದಿದೆ ಎಂದು ಹೇಳಲಾಗುತ್ತದೆ.

"ಸಕಲ ಭೂತಗಳ ಉತ್ಪತ್ತಿ, ಸಮರಸ ವರ್ತನೆ, ವ್ಯವಸ್ಥಿತ ಪರಿವರ್ತನ, ವೃದ್ಧಿ, ಕ್ಷಯ ಮುಂತಾದ ವಾಸ್ತವಿಕ ಜಗತ್ತಿನ ವ್ಯವಸ್ಥೆಗೆಲ್ಲ ವಿಷ್ಣುವೇ ಮೂಲ. ಈ ಜಗತ್ತಿನ ವ್ಯವಸ್ಥೆಯಲ್ಲಿ ಪ್ರಾಕೃತಿಕ, ನೈತಿಕ ನಿಯಮಗಳಿಗಿಂತ ಪ್ರೇಮ ಅಥವಾ ಕರುಣೆಯ ನಿಯಮವೇ ಶ್ರೇಷ್ಠವಾದುದು. ಭಗವಂತನ ಅನೇಕ ಅವತಾರಗಳಲ್ಲಿ ಶ್ರೀಕೃಷ್ಣಾವತಾರವೇ ಮಾನವ ರೂಪದಲ್ಲಿ ಪರಮಾತ್ಮನ ಪರಿಪೂರ್ಣ ಸ್ವಭಾವದ ಆವಿಷ್ಕರಣವನ್ನು ಸೂಚಿಸುತ್ತದೆ.

"ಏಕ, ಅನಂತ, ನಿರ್ವಿಕಾರ, ಪೂರ್ಣ, ಸರ್ವವ್ಯಾಪಿ, ಸರ್ವಾತೀತ, ಪರಮಾತ್ಮ ಆದ ವಿಷ್ಣುವೇ ಹಿರಣ್ಯಗರ್ಭ, ಹರಿ, ವಾಸುದೇವ, ಅಚ್ಯುತ, ಪುರುಷೋತ್ತಮ, ನಾರಾಯಣ, ಬ್ರಹ್ಮ, ಶಿವ ಮುಂತಾದ ಎಲ್ಲ ಗುಣಧಾಮಗಳಾದ ನಾಮಾವಳಿಯಲ್ಲಿಯೂ ಪರಿಕೀರ್ತಿತನಾಗಿದ್ದಾನೆ. ಆದುದರಿಂದ ಪ್ರತ್ಯೇಕತೆ, ಪಂಥಗಳ ಅಂಧ ಅಭಿಮಾನ, ಸಂಕೀರ್ಣ ಮನೋಭಾವ, ಇವೆಲ್ಲ ಬುದ್ಧಿಮಾಂದ್ಯದ ಫಲ"

ಇದು ಸಂಭಾಷಣೆಯ ರೂಪದಲ್ಲಿರುವ ವಿಷ್ಣು ಪುರಾಣದ ಸಾರಾಂಶ. ವಿಷ್ಣು ಪುರಾಣಕ್ಕೆ ವೈದಿಕ ಸಾಹಿತ್ಯದಲ್ಲಿ ತುಂಬಾ ಹಿರಿಮೆ ಇದ್ದು ವೇದಾಂತದ ಪ್ರಮಾಣ ಗ್ರಂಥವೆನಿಸಿದೆ.

ಇವರ ಇಳಿವಯಸ್ಸಿನಲ್ಲಿ ವಿವಾಹವಾದ ಸತ್ಯವತಿಗೆ ಹುಟ್ಟಿದ ಮಗನೇ ಪ್ರಸಿದ್ಧರಾದ ವೇದವ್ಯಾಸ. ಪರಾಶರರ ಹೆಸರನ್ನು ಶಾಶ್ವತವಾಗಿ ಉಳಿಸಬೇಕೆಂಬ ಯಾಮುನರ ಅಂತಿಮೇಚ್ಛೆಯನ್ನು ಪೂರೈಸುವ ಸಲುವಾಗಿ ರಾಮಾನುಜರು ಕೂರೇಶರ ಹಿರಿಯ ಮಗನಿಗೆ ಪರಾಶರಭಟ್ಟ ಎಂದು ಹೆಸರಿಟ್ಟು ಅವರಿಂದ ವಿಷ್ಣುಸಹಸ್ರ ನಾಮಕ್ಕೆ 'ಭಗವದ್ಗುಣದರ್ಪಣ' ಎಂಬ ವ್ಯಾಖ್ಯಾನವನ್ನು ಬರೆಸಿದರು.

## (2) ವ್ಯಾಸ ಮಹರ್ಷಿಗಳ ಭಾಗವತ ಪುರಾಣ

ವ್ಯಾಸಂ ವಸಿಷ್ಠ ನಪ್ತಾರಂ ಶಕ್ತೇಃ ಪೌತ್ರಮಕಲ್ಮಷಂ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥

ಕೀಳು ಎನ್ನುವ ಕುಲದ ತಾಯಿಸತ್ಯವತಿಯಿಂದ ಜನಿಸಿದರೂ ಮೇಲು ಎನ್ನುವ ಕುಲದ ತಂದೆ ಪರಾಶರ ಮಹರ್ಷಿಯ ಪ್ರತಿಭೆಯಿಂದ ಇವರು ಪಾರಾಶರೀ, ಬ್ರಹ್ಮರ್ಷಿ ಎನಿಸಿದರು. ತಾಯಿಯ ಬಣ್ಣ ಪಡೆದು ಕೃಷ್ಣ, ನದಿಯ ಮಧ್ಯದ ದಿಬ್ಬದ ಮೇಲಿನ ಬೆಸ್ತರ ಗುಡಿಸಿಲಿನಲ್ಲಿ ಹುಟ್ಟಿದುದರಿಂದ ದ್ವೈಪಾಯನ ಎನಿಸಿದರು. ದೀರ್ಘಕಾಲ ತಪಸ್ಸು ಮಾಡಿ, ಅಪಾರ ಜ್ಞಾನವನ್ನು ಸಂಪಾದಿಸಿ, ಆಮೇಲೆ ಲೋಕ ಕಲ್ಯಾಣದ ಸಲುವಾಗಿ ಭಾರತೀಯ ವೈದಿಕ ಸಾಹಿತ್ಯ ಭಂಡಾರವನ್ನು ತುಂಬಿಸಿದರು. ವೇದದ ಮಂತ್ರಗಳೆಲ್ಲವನ್ನೂ ಸಂಗ್ರಹಿಸಿ, ಅವುಗಳನ್ನು ಋಕ್, ಯಜುರ್, ಸಾಮ, ಅಥರ್ವ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಟ್ಟು ವೇದವ್ಯಾಸ ಎನಿಸಿದರು.

ಬಹಳ ಕಠಿಣವಾಗಿದ್ದ, ಸಾಮಾನ್ಯ ಜನರಿಗೆ ಅರ್ಥವಾಗದಿದ್ದ, ವೇದಮಂತ್ರಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳಲು ಅನುಕೂಲವಾಗುವಂತೆ ಬ್ರಹ್ಮಸೂತ್ರ ಅಥವಾ ವೇದಾಂತ ಸೂತ್ರಗಳನ್ನು ರಚಿಸಿಕೊಟ್ಟರು. ಅಷ್ಟಾದಶ ಪುರಾಣಗಳನ್ನು ಕಥಾ ರೂಪದಲ್ಲಿ ಸಂಗ್ರಹಿಸಿ ಬರೆದರು. ಮಹಾಭಾರತವನ್ನು ಬರೆದರು. ಆ ಮೂಲಕ ವೈದಿಕ ಧರ್ಮದ ಪ್ರಚಾರಕ್ಕೆ ನೆರವಾದರು.

ದೇವರ್ಷಿ ನಾರದರ ಸಲಹೆಯಂತೆ ವ್ಯಾಸರು ಭಾಗವತದ ಮೂಲಕ ಶ್ರೀಕೃಷ್ಣನ ಚರಿತ್ರೆಯನ್ನು ಬರೆದು ಅದರಲ್ಲಿ ಹಿಂದೂ ಧರ್ಮದ ಸಾರವನ್ನೆಲ್ಲ ಅಡಗಿಸಿದ್ದಾರೆ. ವ್ಯಾಸರ ಭಾಗವತದ ಆಧ್ಯಾತ್ಮಿಕ ದೃಷ್ಟಿಯು ಪರಾಶರರ ವಿಷ್ಣುಪುರಾಣದಲ್ಲಿ ಇರುವಂತೆಯೇ ಇದೆ.

ಭಗವಂತನಿಗೆ ಮಾನವ ಕೋಟಿಯ ಮೇಲಿರುವ ದಯೆ ಅಥವಾ ಕರುಣೆಯ ಮೇಲೆ ರೂಪಿತವಾದ ಭಾಗವತವು, ಅವತಾರ ತತ್ತ್ವಕ್ಕೆ ಪ್ರಾಧಾನ್ಯ ಕೊಟ್ಟು ಅದನ್ನು ಬೆಳೆಸಿಕೊಂಡು ಬಂದಿದೆ. ಭಗವಂತನ ಪ್ರಾಪ್ತಿ-ಸೌಲಭ್ಯವನ್ನು ಶ್ರುತ

ಪಡಿಸುವ ಸಲುವಾಗಿ ಅರ್ಚಾವತಾರ ತತ್ತ್ವವು ವಿಶೇಷವಾಗಿ ಅಭಿವೃದ್ಧಿಗೊಂಡಿತು. ದೇವಾಲಯದಲ್ಲಿ ಪೂಜೆ ಮಾಡಬೇಕಾದುದರಿಂದ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು ವ್ಯವಸ್ಥಿತವಾದ ಆಕಾರ ಪಡೆದುವು. ವೇದ–ದರ್ಶನಗಳ ವ್ಯಾಸಂಗಕ್ಕೂ, ವರ್ಣಾಶ್ರಮ ತತ್ತ್ವದ ಆಚರಣೆಗಳಿಗೂ ಉತ್ತೇಜನ ದೊರಕಿತು. ಧಾರ್ಮಿಕ ವಿಷಯದಲ್ಲಿ ಬ್ರಾಹ್ಮಣ ಪಾರಮ್ಯ ರೂಢಿಗೆ ಬಂದಿತು. ದೇವಾಲಯಗಳ ರಚನೆ, ದೇವಾಲಯಗಳಲ್ಲಿ ಪೂಜೆ-ಉತ್ಸವಗಳ ವ್ಯವಸ್ಥೆ, ಇವುಗಳಿಂದ ಭಾಗವತ ಪಂಥವು ಹಿಂದೂ ಧರ್ಮವನ್ನು ಜನಪ್ರಿಯವಾಗಿಸಿತು.

"ಈ ವಿಶ್ವ ವ್ಯವಸ್ಥೆಯಲ್ಲಿ ವ್ಯಕ್ತವಾಗುವ ಓರಣೆ, ಹೊಂದಿಕೆ ಹಾಗೂ ವೈವಿಧ್ಯಗಳಲ್ಲೆಲ್ಲ, ಭಗವಂತನ ಅಂಚಿತ್ಯ-ಅದ್ಭುತ ಜ್ಞಾನ ಕ್ರಿಯಾದಿ ಶಕ್ತಿಗಳು ಎಲ್ಲರಿಗೂ ತೋರುತ್ತವೆ. ಆತನ ಪ್ರೇಮ, ಕಾರುಣ್ಯ, ಸೌಂದರ್ಯ, ಮಾಧುರ್ಯ ಮುಂತಾದ ಶ್ರೇಷ್ಠತರ ಕಲ್ಯಾಣ ಗುಣಗಳು, ಆತನಿಂದಲೇ ಸೃಷ್ಟಿಸಲ್ಪಟ್ಟಿರುವ ಜೀವಾತ್ಮರಲ್ಲಿ ಉಚ್ಚ ಶ್ರೇಣಿಗೆ ಸೇರಿದವರಿಗೆ ಮಾತ್ರ ಗೋಚರವಾಗುತ್ತವೆ. ಆದರೆ ಆತನ ಅತ್ಯಂತ ಶ್ರೇಷ್ಠ ಕಲ್ಯಾಣಗುಣದ ಭೋಗ-ಯೋಗ ದೊರಕುವುದು ಅತ್ಯಂತ ಶ್ರೇಷ್ಠರೆನಿಸಿದ ಭಕ್ತರಿಗೆ ಮಾತ್ರ.

"ಈ ಸಮಸ್ತ ವಿಶ್ವವೂ ಸತ್ಯ, ಜ್ಞಾನ, ಶಿವ, ಸುಂದರ, ಸ್ವತಂತ್ರ ಆದ ಪರಮಾತ್ಮನ ಅಪ್ರೇರಿತ, ಲೀಲಾತ್ಮಕ ಸ್ವಾಭಿವ್ಯಂಜನೆಯೇ ಆಗಿದೆ. ಮಾನವ ಸಮಾಜದಲ್ಲಿ ಕಾಣಬರುವ ಅಜ್ಞಾನ, ಅಸಮಗ್ರ ಜ್ಞಾನ, ದುಷ್ಟ ಪ್ರವೃತ್ತಿಗಳು, ದ್ವೇಷ, ಸ್ಪರ್ಧೆ, ಹೋರಾಟ ಇವೆಲ್ಲವೂ ಪರಮಾತ್ಮನ ಲೀಲೆಯ ಅಭಿವ್ಯಂಜನಗಳೇ. ಆದುದರಿಂದ ಈ ವಾಸ್ತವಸ್ಥಿತಿಯನ್ನು ಕುರಿತು ಜುಗುಪ್ಸೆ ಪಡಬಾರದು ಹಾಗೂ ಅದರಿಂದ ತಪ್ಪಿಸಿಕೊಂಡು ಹಾರಿಹೋಗಲು ಬಯಸಬಾರದು. ಪರಮಾತ್ಮನ ಅಖಂಡ ಸ್ವರೂಪದಲ್ಲಿ ನಮ್ಮನ್ನು ಲೀನವನ್ನಾಗಿ ಮಾಡುವ ಮುಕ್ತಿಗೂ ಕಾತರಿಸಬಾರದು.

"ಪ್ರಪಂಚದಲ್ಲಿ ಅಂದರೆ ಜೀವಾತ್ಮರಲ್ಲಿ, ವಸ್ತುಗಳಲ್ಲಿ, ಶಕ್ತಿಗಳಲ್ಲಿ ಎಲ್ಲೆಲ್ಲೂ ಪರಮಾತ್ಮನು ಇರುವುದರಿಂದ ಅವನ ಈ ಲೀಲಾ ಚೇಷ್ಟಿತಗಳನ್ನು ಪ್ರೇಮ ಭಾವದಿಂದ ಕಂಡು ಆಲಂಗಿಸಿಕೊಂಡು, ಅಸಹ್ಯವಾದುದನ್ನು ಕಂಡು ದೂರ ಹೋಗದೆ ಅದರ ಸೇವೆ ಮಾಡಬೇಕು. ಹೀಗೆ ವಿವಿಧ ಪ್ರಕಾರದ ಜೀವಿಗಳೆಲ್ಲ ಪರಮಪುರುಷನಾದ ನಾರಾಯಣನ ಅವತಾರಗಳೇ ಆದಕಾರಣ, ಸೃಷ್ಟಿಯ ಎಲ್ಲ ಪ್ರಕಾರಗಳಲ್ಲಿಯೂ ಅವನ ಇರುವಿಕೆಯನ್ನು ಕಂಡು ಗೌರವಿಸಬೇಕು.

"ವಿಷ್ಣುವಿನ ಅವತಾರಗಳಲ್ಲೆಲ್ಲ ಶ್ರೀಕೃಷ್ಣಾವತಾರವೇ ಪೂರ್ಣ, ಶ್ರೇಷ್ಠತಮ, ಪರಬ್ರಹ್ಮಸ್ವರೂಪ ಆದುದು. ಆ ಭಗವಂತನೊಂದಿಗೆ ಪರಮೈಕಾಂತ ಭಕ್ತಿಯೇ ಮನುಷ್ಯ ಜೀವಿತದ ಪರಮಪುರುಷಾರ್ಥ. ಶರೀರದ ಸರ್ವಾಂಗಗಳೂ, ಸರ್ವೇಂದ್ರಿಯಗಳೂ, ಈ ದೈವೀ ಪ್ರಣಯದಿಂದ ಸೇಚನಗೊಂಡು, ಭಗವಂತನ ಸೌಂದರ್ಯ

ಮತ್ತು ಆನಂದಾನುಭೂತಿಗಳಿಂದ ಜೀವವು ತುಂಬಿ ತುಳುಕಾಡಬೇಕು" ಇದು ಭಾಗವತದ ಸಾರ.

"ವ್ಯಾಸೋಚ್ಛಿಷ್ಟಂ ಜಗತ್‌ಸರ್ವಂ" ಎಂಬಂತೆ ಜಗತ್ತಿನ ಸಾಹಿತ್ಯ ಪ್ರಕಾರಗಳೆಲ್ಲವೂ ವ್ಯಾಸರ ಎಂಜಲು ಎನ್ನಿಸಿದ ಮಹಾಮಹಿಮರು. ವಿಶ್ವಸಾಹಿತ್ಯದಲ್ಲಿ "ನಭೂತೋ ನಭವಿಷ್ಯತಿ" ಎಂದರೆ ಹಿಂದೆ ಹುಟ್ಟಲಿಲ್ಲ, ಮುಂದೆ ಹುಟ್ಟುವುದಿಲ್ಲ ಎನಿಸಿಕೊಂಡರು. ಈ ಎಲ್ಲ ಸಾಹಿತ್ಯ ಸೃಷ್ಟಿಯ ಫಲವಾಗಿ ವ್ಯಾಸ ಮಹರ್ಷಿಗಳು ಭಗವಾನ್ ಬಾದರಾಯಣ ಎನಿಸಿಕೊಂಡುದಲ್ಲದೆ "ವ್ಯಾಸಾಯ ವಿಷ್ಣು ರೂಪಾಯ, ವ್ಯಾಸರೂಪಾಯ ವಿಷ್ಣವೇ" ಎಂದೂ ಹೊಗಳಿಸಿಕೊಂಡರು.

ಇವರ ಸಮಕಾಲೀನರಾಗಿದ್ದ ಬೋಧಾಯನ ಮಹರ್ಷಿಗಳು ವಿಶಿಷ್ಟಾದ್ವೈತದ ಮೊದಲ ಪ್ರತಿಪಾದಕರು.

## 6. ಆಗಮಗಳು

ಪುರಾಣಗಳಲ್ಲಿ ಪ್ರಮುಖವಾಗಿರುವ ದೇವರ ಅವತಾರಗಳ ವ್ಯವಸ್ಥಿತ ಪೂಜೆಯನ್ನು ಮಾಡಿ ಜನರು ಕೃತಾರ್ಥರಾಗಲೆಂಬ ಉದ್ದೇಶದಿಂದ ಆಗಮಗಳು ಹುಟ್ಟಿಕೊಂಡುವು. ವೇದಗಳು ಧರ್ಮದ ತತ್ತ್ವವಾದರೆ, ಆಗಮಗಳು ವ್ಯವಹಾರವಾಗಿವೆ. ವೇದಗಳು ಜ್ಞಾನ, ಕರ್ಮ, ಭಕ್ತಿ ಪ್ರಧಾನವಾದ ಮಂತ್ರಗಳ ಮೂಲಕ ಆತ್ಮಸಾಕ್ಷಾತ್ಕಾರವನ್ನು ಬೋಧಿಸಿದರೆ, ಆಗಮಗಳು ದೀಕ್ಷಾಪ್ರಧಾನವಾದ ತಾಂತ್ರಿಕ ವಿಧಿಗಳ ಮೂಲಕ, ಭಗವಂತನ ಸಗುಣ ಸಾಕಾರಸ್ವರೂಪದ ಇಷ್ಟದೇವತಾ ಉಪಾಸನಾ ಕ್ರಮವನ್ನು ಉಪದೇಶಿಸುತ್ತವೆ. ಶ್ರುತಿಯಲ್ಲಿ ಹೇಳಿದ ಯಜ್ಞಯಾಗಗಳ ಆಚರಣೆಗಳು ಹಾಗೂ ಸ್ಮೃತಿಯಲ್ಲಿ ಹೇಳಿದ ಕರ್ಮಾನುಷ್ಠಾನಗಳು ಕಡಿಮೆಯಾಗುತ್ತ ಬಂದಾಗ, ಮಂತ್ರ ತಂತ್ರಗಳ ಸಮುಚ್ಚಯವುಳ್ಳ ಆಗಮಗಳಿಗೆ ಪ್ರಾಮುಖ್ಯ ಬಂದಿತು.

ಆಗಮಗಳು ಚಿತ್ತಶುದ್ಧಿಗೆ ಸಾಧಕವಾದ ಧಾರ್ಮಿಕ ವಿಚಾರಗಳನ್ನು ಪ್ರತಿಪಾದಿಸಿ, ದೇವರ ಪೂಜೆಯ ವಿಧಿವಿಧಾನಗಳನ್ನು ವಿಸ್ತಾರವಾಗಿ ಬಣ್ಣಿಸುತ್ತವೆ. ದೇವಾಲಯ-ಮೂರ್ತಿಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ, ವಿವಿಧ ಪೂಜೆ-ಉತ್ಸವಗಳ ವ್ಯವಸ್ಥೆ, ಪೂಜಾರಿಗಳ ಅರ್ಹತೆ, ಇವುಗಳ ಬಗ್ಗೆ ಸೂಕ್ಷ್ಮವಾದ ಸುಂದರವಾದ ವಿವರಗಳಿವೆ. ಜೊತೆಗೆ ನಗರಯೋಜನೆ, ಅದರಲ್ಲಿ ದೇವಾಲಯಗಳು ಇರಬೇಕಾದ ಸ್ಥಳ, ಇವೂ ವಿವರಿಸಲ್ಪಟ್ಟಿವೆ. ಭಾರತೀಯ ವಾಸ್ತು-ಮೂರ್ತಿಶಿಲ್ಪ, ಸಂಗೀತ, ನೃತ್ಯ ಮುಂತಾದುವುಗಳ ವಿಕಾಸಕ್ಕೆ ನೆರವಾದ ಆಗಮಗಳು, ಭಾರತೀಯ ಸಂಸ್ಕೃತಿಗೆ ಮಹೋಪಕಾರ ಮಾಡಿವೆ. ಅರ್ಚಾಮೂರ್ತಿ ಅಥವಾ ಯಂತ್ರಗಳ ಪೂಜೆ, ಮಂತ್ರಗಳ ಜಪ, ದೇವರ ಉಪಾಸನೆ-ಇವುಗಳನ್ನು ತಿಳಿಸುವ ತಂತ್ರಗಳು, ಮಾನವನಲ್ಲಿ ಅಡಗಿರುವ ಆತ್ಮ ಶಕ್ತಿಯನ್ನು ಚೆನ್ನಾಗಿ ಬೆಳೆಸಿಕೊಂಡು, ಪರಮಾತ್ಮನನ್ನು

ಸಾಕ್ಷಾತ್ಕರಿಸಿಕೊಳ್ಳುವ ಬಗೆಯನ್ನು ತಿಳಿಸುತ್ತವೆ. ಜೊತೆಗೆ ಐಹಿಕ ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು, ಕಷ್ಟ ದುಃಖಗಳನ್ನು ನಿವಾರಿಸಿಕೊಳ್ಳಲು ಉಪಯೋಗವಾಗಿವೆ.

ವೇದ, ಇತಿಹಾಸ, ಪುರಾಣಗಳಂತೆ ತಂತ್ರ ಅಥವಾ ಆಗಮಗಳು ಪ್ರಮಾಣಭೂತವಾಗಿ, ವೈದಿಕ ಸಂಸ್ಕೃತಿ ಹಾಗೂ ಸನಾತನ ಧರ್ಮಗಳ ಸ್ವರೂಪವನ್ನು ಪ್ರತಿನಿಧಿಸುತ್ತವೆ. ವಿಷ್ಣು ಪಾರಮ್ಯ, ವಿಷ್ಣು ಪೂಜೆಗಳನ್ನು ವಿಧಿಸುವ ವೈಷ್ಣವ ಆಗಮವು ವೈಖಾನಸ, ಪಾಂಚರಾತ್ರ ಎಂದು ಎರಡು ಬಗೆಯಾಗಿದೆ.

ಆಗಮದಲ್ಲಿ ಜ್ಞಾನ, ಯೋಗ, ಕ್ರಿಯಾ, ಚರ್ಯಾ ಎಂಬ ನಾಲ್ಕು ಪಾದಗಳಿರುತ್ತವೆ. ಜ್ಞಾನಪಾದದಲ್ಲಿ ವ್ಯೂಹಗಳ ಸ್ವರೂಪ, ಸ್ವಭಾವ, ಶರೀರರಚನೆ, ಮೋಕ್ಷ ; ಯೋಗಪಾದದಲ್ಲಿ ಇಂದ್ರಿಯನಿಗ್ರಹ, ಉಪಾಸನಾ ಪ್ರಕಾರಗಳು ; ಕ್ರಿಯಾ ಪಾದದಲ್ಲಿ ಆಲಯಗಳ ರಚನೆ, ವಿಗ್ರಹನಿರ್ಮಾಣ ಪ್ರಕಾರ, ದೇವಪೂಜೆ ; ಚರ್ಯಾ ಪಾದದಲ್ಲಿ ಅರಾಧನಾ ವಿಧಿ, ನಿತ್ಯಕರ್ಮಗಳು-ನಿರೂಪಿಸಲ್ಪಟ್ಟಿವೆ. ಮೊದಲನೆ ಪಾದವು ವೇದದಲ್ಲಿನ ಜ್ಞಾನಕಾಂಡವನ್ನೂ, ಉಳಿದ ಮೂರು ಪಾದಗಳು ಕರ್ಮ ಮತ್ತು ಉಪಾಸನಾ ಕಾಂಡವನ್ನೂ ಪ್ರತಿನಿಧಿಸುತ್ತವೆ. ಒಟ್ಟಿನಲ್ಲಿ ಆಗಮಗಳು ಪರ ಬ್ರಹ್ಮ, ಮೋಕ್ಷ, ಮೋಕ್ಷೋಪಾಯ ಇವುಗಳ ಸ್ವರೂಪವನ್ನು ತಮ್ಮದೇ ಆದ ರೀತಿಯಲ್ಲಿ ನಿರೂಪಿಸಿ ಪ್ರತಿಪಾದಿಸಿವೆ.

## (1) ವೈಖಾನಸ

ವಿಷ್ಣುವಿನ ಅಪ್ಪಣೆಯ ಮೇರೆಗೆ, ಭಗವಂತನ ಅರ್ಚಾರೂಪದ ಆರಾಧನೆಯನ್ನು ವ್ಯವಸ್ಥೆಗೊಳಿಸಲು, ಚತುರ್ಮುಖ ಬ್ರಹ್ಮನೇ ವಿಖನಸ ಮುನಿಯಾಗಿ ಭೂಮಿಯಲ್ಲಿ ಅವತರಿಸಿದನು. ದೇವತಾರಾಧನೆಯ ರಹಸ್ಯಗಳನ್ನು ವಿಷ್ಣುವಿನಿಂದ ಅರಿತ ವಿಖನಸಾಚಾರ್ಯರು ಅದರ ಬಗ್ಗೆ ನಿಯಮ, ಸೂತ್ರಗಳನ್ನು ರಚಿಸಿದ್ದಾರೆ. ವಿಖನಸರು ಸ್ಥಾಪಿಸಿದ ವೈಖಾನಸ ಆಗಮ ವಿಧಿಗಳನ್ನು ಭೃಗು, ಮರೀಚಿ, ಅತ್ರಿ, ಕಶ್ಯಪ ಮಹರ್ಷಿಗಳು ವಿಸ್ತರಿಸಿ ಗ್ರಂಥ ರಚಿಸಿದರು. ವೈಖಾನಸ ಶಾಸ್ತ್ರವು ವಾನಪ್ರಸ್ಥರಿಗೆ ಮಾರ್ಗದರ್ಶಕವೆಂದು ಬೋಧಾಯನ ಮಹರ್ಷಿಗಳು ವರ್ಣಿಸಿದ್ದಾರೆ.

"ವಿಷ್ಣುವೇ ಪರಮಾತ್ಮ ಹಾಗೂ ಪರತತ್ತ್ವ. ಭಕ್ತರು ನಾರಾಯಣ ಪರಾಯಣರಾಗಿ ಅವನ ಚಿಂತನೆಗಳನ್ನು ಸ್ಥಿರಗೊಳಿಸಬೇಕು. ಸಕಲ, ನಿಷ್ಕಲ ಆಗಿರುವ ನಾರಾಯಣನು ತಾನಾಗಿ ಎಲ್ಲ ಕಡೆಗಳಲ್ಲೂ ಎಲ್ಲ ರೂಪಗಳಲ್ಲೂ ವ್ಯಕ್ತನಾಗುತ್ತಾನೆ. ಪ್ರಕೃತಿ ಪುರುಷ ಎರಡೂ ಒಂದರಲ್ಲಿರುವ, ಶ್ರೀಯುಕ್ತನಾದ ನಾರಾಯಣನು ಪರತತ್ತ್ವ. ಶ್ರೀ ಅಥವಾ ಮಹಾಲಕ್ಷ್ಮಿ ನಾರಾಯಣನ ವಿಭೂತಿ ಅಥವಾ ಐಶ್ವರ್ಯ. ಅವಳು ನಿತ್ಯಾನಂದವನ್ನು ನೀಡುವ ಒಂದು ಮೂಲ ಪ್ರಕೃತಿ ಶಕ್ತಿ. ಅವಳೂ ಪರಮಾತ್ಮನ ಶಕ್ತಿಯೇ ಹೊರತು ಘನತೆಗೊಳಿಸಲ್ಪಟ್ಟ ಜೀವವಲ್ಲ. ಅವಳು ವಿಷ್ಣುವಿನ ವಿವಿಧ ಲೀಲಾ

ಸಂಕಲ್ಪಗಳಿಗೆ ಒಪ್ಪುವಂತೆ ವಿವಿಧ ರೂಪಗಳನ್ನು ತಾಳಿ, ಚೇತನ ಅಚೇತನ ಜಗತ್ತನ್ನು ಹರಸುತ್ತಾಳೆ. ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎಂಬ ಪಂಚವಿಧ ಸ್ಥಿತಿಗಳಲ್ಲಿ ಆಕೆ ಅವನೊಡನೆ ಯಾವಾಗಲೂ ಇರುತ್ತಾಳೆ. ಜ್ಞಾನದಿಂದ ಪರ ರೂಪವು ಸಿದ್ಧಿಸುತ್ತದೆ. ಭಕ್ತಿಯಿಂದ ಸಹಕೃತವಾದ ಸತತ ಧ್ಯಾನದಿಂದ ಅವ್ಯಕ್ತವಾದುದು ವ್ಯಕ್ತವಾಗುತ್ತದೆ. ಪ್ರಾಣಾಯಾಮ ಮತ್ತು ಧ್ಯಾನಗಳ ಮೂಲಕ ಅಂತರ್ಯಾಮಿಯಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಅವನ ಇಚ್ಛೆಗೆ ಅನುಗುಣವಾದ ಭಕ್ತಿ—ಪ್ರಪತ್ತಿಗಳು ಅವನ ದಿವ್ಯಾನುಗ್ರಹದ ಬಾಗಿಲುಗಳನ್ನು ತೆರೆಯುವ ನಾಯಕ ಬೀಗದ ಕೈಗಳು. ಪರಮಾತ್ಮನು ಅಪ್ರಾಕೃತ ದೇಹದಿಂದ ಅರ್ಚಾ ರೂಪದಲ್ಲಿ ಸೇರಿದ್ದು ಮೋಕ್ಷಕ್ಕೆ ಅತ್ಯಂತ ನಿಶ್ಚಿತ ಸಾಧನವಾಗಿದ್ದಾನೆ." ಇವು ಮುಖ್ಯ ವೈಖಾನಸ ತತ್ತ್ವಗಳು.

ಮೊದಲು ವನವಾಸದಲ್ಲಿದ್ದ ವೈಖಾನಸರು ಹಳ್ಳಿ, ನಗರಗಳಲ್ಲಿ ವಾಸಿಸತೊಡಗಿದಾಗ, ದೇವಸ್ಥಾನಗಳ ಆಡಳಿತವನ್ನು ವಹಿಸಿಕೊಂಡು ದೇವರ ಸೇವೆಯನ್ನು ನಿರ್ವಹಿಸಿ ವಿಷ್ಣು ದೇವಾಲಯಗಳ ಆನುವಂಶಿಕ ನ್ಯಾಸದರ್ಶಿಗಳಾದರು. ವೈಖಾನಸರು ವೇದಕ್ಕೆ ಹೊಂದಿಕೊಂಡಂತೆ ಸಂಸ್ಕೃತ ಭಾಷೆಯಲ್ಲಿರುವ ಶಾಸ್ತ್ರದಂತೆಯೇ ಪೂಜೆ ಮಾಡುತ್ತಾರೆ. ವೈಷ್ಣವ ಚಿಹ್ನೆಗಳಾದ ಶಂಖ ಚಕ್ರಗಳ ತಪ್ತ ಮುದ್ರೆಯನ್ನು ತಮ್ಮ ಶರೀರದ ಮೇಲೆ ಹಾಕಿಕೊಳ್ಳುವುದಿಲ್ಲ. ಪೂಜೆಯ ಕಾಲದಲ್ಲಿ ತಮಿಳು ಪ್ರಬಂಧವನ್ನು ಪಠಿಸುವುದಿಲ್ಲ. ಆಳ್ವಾರರು, ಆಚಾರ್ಯರು, ಮಠಾಧಿಪತಿಗಳು ಅವರ ವಿಗ್ರಹಗಳಿಗೆ, ಸೂರ್ಯ ರೂಪಿಯಾದ ಪ್ರಧಾನ ದೇವತೆಗೆ ಸಲ್ಲಿಸುವ ಮರ್ಯಾದೆಗಳನ್ನು ಕೊಡಲು ಒಪ್ಪುವುದಿಲ್ಲ. ಪೂಜಿಸುವುದೂ ಇಲ್ಲ. ಇದು ಈಗ ಒಪ್ಪಿಗೆಯಾಗುತ್ತಲಿದೆ. ಹಳ್ಳಿ, ನಗರಗಳಲ್ಲಿ ದೇವಾಲಯ ನಿರ್ಮಾಣಕ್ಕೆ ಪ್ರಾಮುಖ್ಯ ನೀಡುತ್ತಾರೆ. ವೈಖಾನಸ ಕುಟುಂಬದವರು, ದೀಕ್ಷೆ ಪಡೆದ ದ್ವಿಜರು ಮಾತ್ರ ದೇವಾಲಯದಲ್ಲಿ ಪೂಜಿಸಲು ಅರ್ಹರು ಎನ್ನುತ್ತಾರೆ.

## 2) ಪಾಂಚರಾತ್ರ

ಪಾಂಚರಾತ್ರ ಶ್ರುತಿ ಅಥವಾ ಪಾಂಚರಾತ್ರೋಪನಿಷತ್ ಎನಿಸಿಕೊಂಡ ರಹಸ್ಯಾಮ್ನಾಯ ಅಥವಾ ಏಕಾಯನ ವೇದವು ಭಗವಾನ್ ಸಂಕರ್ಷಣನಿಂದ ಬ್ರಹ್ಮನಿಗೆ ಉಪದೇಶಿಸಲ್ಪಟ್ಟಿತು ಎಂದು ಪ್ರತೀತಿ. ನಾರಾಯಣನಿಂದ ನರ, ಶಾಂಡಿಲ್ಯ, ಪ್ರಹ್ಲಾದ, ಸುಗ್ರೀವ ಮುಂತಾದವರಿಗೆ ಉಪದೇಶಿಸಲ್ಪಟ್ಟ ಪರಮವಿದ್ಯೆಯಾದ ಪಾಂಚರಾತ್ರಾಗಮವು ವೇದಕ್ಕಿಂತಲೂ ಶ್ರೇಷ್ಠ, ಪ್ರಮಾಣಭೂತ ಆದುದೆಂದು ಭಾವಿಸಲ್ಪಟ್ಟಿದೆ. ಈ ಆಗಮಕ್ಕೆ ಈ ಹೆಸರು ಬರಲು ಅನೇಕ ಕಾರಣಗಳುಂಟು :

1) ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ ಎಂಬುದಾಗಿ ಭಗವದಾರಾಧನಕ್ಕೆ ಅನುಕೂಲವಾಗುವಂತೆ ಒಂದು ಅಹೋ ರಾತ್ರಿಯನ್ನು ಐದು

ವಿಭಾಗ ಮಾಡಲಾಗಿದ್ದು, ಈ ಪಂಚಕಾಲ ಪ್ರಕ್ರಿಯೆಯು ಪ್ರತಿಪಾದನೆ ಈ ಶಾಸ್ತ್ರದ ಅಸಾಧಾರಣ, ವಿಶೇಷ, ಆದ ಕಾರಣವಾಗಿದೆ.

2) ಶಾಂಡಿಲ್ಯ, ಔಪಗಾಯನ, ಮೌಂಜ್ಯಾಯನ, ಕೌಶಿಕ, ಭಾರದ್ವಾಜ ಎಂಬ ಐದು ಮಂದಿ ಮಹರ್ಷಿಗಳು ತಾವು ವಿಷ್ಣುವಿನಿಂದ ಕಲಿತ ಈ ಸಿದ್ಧಾಂತವನ್ನು ಐದು ರಾತ್ರಿಗಳಲ್ಲಿ ತಮ್ಮ ಶಿಷ್ಯರಿಗೆ ಉಪದೇಶಿಸಿದರು.

3) ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎಂಬ ಭಗವಂತನ ಐದು ಸ್ವರೂಪದ ಪ್ರತಿಪಾದನೆ ಇಲ್ಲಿದೆ.

4) ಬ್ರಹ್ಮ, ಶಿವ, ಇಂದ್ರ, ನಾಗ, ಋಷಿ ಎಂಬ ಐದು ರಾತ್ರಿಗಳಲ್ಲಿ ಅಜ್ಞಾನ ಕಳೆಯಲು ಐದು ಬಗೆಯಾದ ಜ್ಞಾನವನ್ನು ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ, ರುದ್ರರಿಗೆ ಭಗವಂತನೇ ಉಪದೇಶಿಸಿದನು.

5) ಈ ಪಂಥದ ಮೂಲ ಅನುಯಾಯಿಗಳು ವರ್ಷದಲ್ಲಿ ಐದು ಬಾರಿ ಯಜ್ಞ ಮಾಡುತ್ತಿದ್ದರು. ಐದು ರಾತ್ರಿ ಅಥವಾ ಋತುಗಳಿಗೆ ಹೊಂದುವ ವ್ರತವನ್ನು ಆಚರಿಸುತ್ತಿದ್ದರು.

6) ಪರಮ ಪುರುಷ ಅಥವಾ ನಾರಾಯಣನು ಐದು ರಾತ್ರಿಗಳಲ್ಲಿ ಯಜ್ಞವನ್ನು ಆಚರಿಸುತ್ತಿದ್ದನು.

7) ಸಾಂಖ್ಯ, ಯೋಗ, ಬೌದ್ಧ, ಜೈನ, ಪಾಶುಪತ ಎಂಬ ಐದು ದರ್ಶನಗಳನ್ನು ಐದು ರಾತ್ರಿಗಳಲ್ಲಿ ನಿರಸನಮಾಡಿ ಪ್ರಭಾವವನ್ನು ಕುಗ್ಗಿಸಲಾಯಿತು.

8) ತತ್ತ್ವ, ಮುಕ್ತಿ, ಭಕ್ತಿ, ಯೋಗ, ವೈಶೇಷಿಯ ಎಂಬ ಜ್ಞಾನದ ಐದು ಭಾಗಗಳನ್ನು ಹೊಂದಿರುವುದು.

9) ಸ್ಥಂಡಿಲ, ಮಂಡಲ, ಕುಂಭ, ಪುಷ್ಪ, ಪ್ರತಿಮಾ—ಎಂಬ ಐದು ರೀತಿಯಲ್ಲಿ ಪರಮಾತ್ಮನನ್ನು ಪೂಜಿಸುವುದು.

10) ತಾಪ, ಪುಂಡ್ರ, ನಾಮ, ಮಂತ್ರ, ಯಾಗ ಎಂಬ ಪಂಚ ಸಂಸ್ಕಾರಗಳಿಗೆ ಪ್ರಾಧಾನ್ಯವಿರುವುದು.

ಪಾಂಚರಾತ್ರವು ಮುಖ್ಯವಾಗಿ ಭಕ್ತಿ ಪ್ರಪತ್ತಿಗಳಿಗೆ ಪ್ರಾಮುಖ್ಯ ನೀಡುತ್ತದೆ. ಇದರ ಅನುಯಾಯಿಗಳಿಗೆ ವಿಷ್ಣು, ಕೇಶವ, ವಾಸುದೇವ ಮುಖ್ಯದೇವರು. ಅಗ್ನಿರೂಪಿಯಾದ ಪ್ರಧಾನ ದೇವತೆಗೆ ಕೊಡುವಷ್ಟು ಗೌರವ-ಮರ್ಯಾದೆಗಳನ್ನು ಆಳ್ವಾರುಗಳು ಹಾಗೂ ಆಚಾರ್ಯರುಗಳ ವಿಗ್ರಹಕ್ಕೆ ಕೊಡುತ್ತಾರೆ. ಆಂಡಾಳ್ ಲಕ್ಷ್ಮಿಯ ಅಂಶವೆಂದು ನಂಬುತ್ತಾರೆ. ಸಂಸ್ಕೃತದ ವೇದದ ಜೊತೆಗೆ ದೇವಾಲಯದಲ್ಲಿ, ಉತ್ಸವ ಕಾಲದಲ್ಲಿ, ತಮಿಳು ಪ್ರಬಂಧಕ್ಕೂ ಪ್ರಾಮುಖ್ಯ ನೀಡುತ್ತಾರೆ. ಪಂಚ ಸಂಸ್ಕಾರ ಹೊಂದಿರುವ, ಮನೋವಾಕ್ಕಾಯಗಳಲ್ಲಿ ಪರಿಶುದ್ಧವಾಗಿರುವ, ಯಾರಾದರೂ ದೇವಾಲಯದಲ್ಲಿ ಪೂಜೆ ಮಾಡಬಹುದು ಎಂದು ಹೇಳುತ್ತಾರೆ. ನದಿ ದಡದಲ್ಲಿ, ಪರ್ವತದ ತುದಿಯಲ್ಲಿ ದೇವಾಲಯ ನಿರ್ಮಾಣಕ್ಕೆ ಪ್ರಾಮುಖ್ಯ ನೀಡುತ್ತಾರೆ.

ವೇದದ ಅರ್ಥವನ್ನು ಇತಿಹಾಸ ಪುರಾಣಗಳಂತೆ ವಿಶದೀಕರಿಸುವ ಪಾಂಚ ರಾತ್ರವು ಬಹಳ ಪ್ರಾಚೀನವಾದ ಪ್ರಮಾಣವೆಂದು ವ್ಯಾಸರೇ ಹೇಳಿದ್ದಾರೆ. ಇದರ ಪ್ರಾಚೀನತೆ, ಪ್ರಾಮಾಣ್ಯಗಳನ್ನು ಶಂಕರಾಚಾರ್ಯರೂ ಒಪ್ಪಿದ್ದಾರೆ. ಆಗಮ ಪ್ರಾಮಾಣ್ಯವೆಂಬ ಗ್ರಂಥವನ್ನು ರಚಿಸಿ ಯಾಮುನರು ಪಾಂಚರಾತ್ರಾಗಮದ ಮಹತ್ವ ವನ್ನು ತೋರಿಸಿದ್ದಾರೆ. ಆಗಮಗಳ ಅಪಾರ ಪ್ರಭಾವ ರಾಮಾನುಜರ ಮೇಲೂ ಆಗಿದೆ.

ಪಾಂಚರಾತ್ರ ಆಗಮವು ವೇದ ಮೂಲವಾಗಿದ್ದು, ವೇದಗಳ ಉಪದೇಶಕ್ಕೆ ವಿರುದ್ಧವಾದ ಅಂಶಗಳಾವುದನ್ನೂ ಹೊಂದಿಲ್ಲದಿರುವುದರಿಂದ, ಅದು ಪರಮಗ್ರಾಹ್ಯ ವೆನಿಸಿ, ಸಮಗ್ರವಾಗಿ ಪ್ರಮಾಣವೆಂದು ರಾಮಾನುಜರು ಸಾಧಿಸಿದ್ದಾರೆ. ಪಾಂಚ ರಾತ್ರಾಗಮಕ್ಕೆ ಸೇರಿದ ಗ್ರಂಥಗಳು ಹೇರಳವಾಗಿವೆ.

ವಿಶಿಷ್ಟಾದ್ವೈತ ಸಿದ್ಧಾಂತವು ವೈಖಾನಸ, ಪಾಂಚರಾತ್ರ ಎರಡೂ ಆಗಮಗಳ ಪ್ರಾಮಾಣ್ಯವನ್ನು ಅಂಗೀಕರಿಸಿದೆ. ಸಾಮಾನ್ಯರಿಗೆ ವ್ಯತ್ಯಾಸ ತಿಳಿಯುವುದಿಲ್ಲ. ಶ್ರೀಮನ್ನಾರಾಯಣನೇ ಸಕಲ ಶಾಸ್ತ್ರ ತಾತ್ಪರ್ಯವೆಂದು ವೇದವು ಹೇಳುತ್ತದೆ. ವೇದಾಂತ ವೇದ್ಯ, ಪರಬ್ರಹ್ಮ ವಸ್ತು ಆದ ನಾರಾಯಣನೇ ಪಾಂಚರಾತ್ರಾಗಮ ವನ್ನು ಉಪದೇಶಿಸಿರುವುದರಿಂದ, ಸ್ವಲ್ಪ ಉದಾರ ಭಾವನೆ ಹೊಂದಿರುವುದರಿಂದ ಅದಕ್ಕೆ ಪ್ರಧಾನ ಸ್ಥಾನವನ್ನು ಕೊಡಲಾಗಿದೆ.

ಲಕ್ಷ್ಮೀನಾರಾಯಣ ಎಂಬ ದಿವ್ಯ ದಂಪತಿಗಳು ಸೇರಿ ಬಂದೇ ತತ್ತ್ವ. ಭಗವಂತನೊಡನೆ ನಿತ್ಯಯೋಗ ಹೊಂದಿರುವ ಲಕ್ಷ್ಮಿ ಭಗವಂತನ ಶಕ್ತಿ ಎಂಬುದು ಆಗಮಗಳ ಮುಖ್ಯ ತತ್ತ್ವ. ಶ್ರುತಿಸ್ಮೃತಿಗಳಲ್ಲಿ ಸ್ಪಷ್ಟವಾಗಿಲ್ಲದ ಪಂಚವ್ಯೂಹಗಳ ವಿವರಣೆ ಆಗಮಗಳಲ್ಲಿ ವಿವರವಾಗಿ ವಿವೇಚಿಸಲ್ಪಟ್ಟಿದೆ. ವಿಭವ ಅವತಾರಗಳ ವೈಭವವನ್ನು ಸಕ್ರಿಯ ಸುದೃಢ ಆಗಿ ಅವು ಪ್ರತಿಪಾದಿಸಿವೆ. ವಿಷ್ಣುಪುರಾಣವು ಪ್ರತಿಪಾದಿಸಿರುವ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು ಎಂಬ ಷಾಡ್ಗುಣ್ಯದ ಒಂದೊಂದರ ಲಕ್ಷಣವೂ ಪ್ರಭಾವಯುತವಾಗಿ ವಿವರಿಸಲ್ಪಟ್ಟಿದೆ. ಮೋಕ್ಷೋಪಾಯವಾದ ಯಮನಿಯಮ ಆದಿ ಅಷ್ಟಾಂಗ ಯೋಗಗಳನ್ನುಳ್ಳ ಯೋಗಕ್ಕೆ ಭಗವಂತನೇ ಆಲಂಬನವೆಂಬುದನ್ನು ದೃಢಪಡಿಸಿವೆ. ಉಪಾಸನೆಗೆ ಶಕ್ತ ನಲ್ಲದವನು ಶರಣಾಗತಿಯನ್ನು ಅನುಷ್ಠಿಸಬೇಕೆಂದು ಹೇಳುತ್ತವೆ. ವೇದಶಾಸ್ತ್ರ ಇತಿಹಾಸ ಪುರಾಣಗಳಲ್ಲಿ ಉಲ್ಲೇಖವಿರುವ ಪ್ರಪತ್ತಿಯ ಅಂಗ, ಸ್ವರೂಪ, ವಿವರ, ಪರಿಕರಗಳನ್ನು ಸ್ಪಷ್ಟಗೊಳಿಸಿವೆ. ಶ್ರೀದೇವಿಯೊಡನೆ ಇರುವ ಭಗವಂತನನ್ನು ಸೇರಿ ಅವನ ಪರಿಪೂರ್ಣ ಅನುಭವವೇ ಮೋಕ್ಷ ಎಂದು ಹೇಳಿವೆ. ಆಗಮದ ಈ ಎಲ್ಲ ಅಂಶಗಳನ್ನು ಶ್ರೀ ವೈಷ್ಣವಮತ ಅಥವಾ ವಿಶಿಷ್ಟಾದ್ವೈತ ಸಿದ್ಧಾಂತವು ಪರಿಗ್ರಹಿಸಿದೆ. ವೇದಾಧಿಕಾರವಿಲ್ಲದ ಶೂದ್ರರು, ಹೆಂಗಸರು, ರೋಗಿಗಳು, ಪಾಂಚರಾತ್ರಾಗ

ಗ ಮದ ನೆರವಿನಿಂದ ಮೋಕ್ಷವನ್ನು ಪಡೆಯಬಹುದೆಂದು ಹೇಳಲಾಗಿದೆ. ಆದುದ
ುದ ವೈಖಾನಸಕ್ಕಿಂತ ಪಾಂಚರಾತ್ರ ಪೂಜಾಕ್ರಮವೇ ಹೆಚ್ಚು ಸುಲಭ ಹಾಗೂ ಜನ
್ರಿಯವಾಗಿದೆಯೆಂದು ಶಾಂಡಿಲ್ಯ, ನಾರದ, ವ್ಯಾಸ ಮಹರ್ಷಿಗಳು ಅಭಿಪ್ರಾಯ
ಟ್ಟಿರುತ್ತಾರೆ. ಒಟ್ಟಿನಲ್ಲಿ ವಿಷ್ಣು ಅಥವಾ ನಾರಾಯಣನ ಸಾಯುಜ್ಯವನ್ನು ಇಚ್ಛಿಸುವ
್ೀ ವೈಷ್ಣವರು, ವೈಖಾನಸ ಅಥವಾ ಪಾಂಚರಾತ್ರ ಆಗಮವನ್ನು ಆಶ್ರಯಿಸ
ೇಕಾಗುತ್ತದೆ.

# ಆಳ್ವಾರುಗಳ ತಮಿಳು ಸಾಹಿತ್ಯ

## ಮಹತ್ವ

ತಮಿಳು ಭಾಷೆಯನ್ನು ಮೊದಲು ಆರಂಭಿಸಿದ ಅಗಸ್ತ್ಯ ಮುನಿಗಳ ತಪಸ್ಸಿ
ಸಂತುಷ್ಟನಾದ ಭಗವಂತನು ತನ್ನ ಪತ್ನಿ, ವಾಹನ, ಆಯುಧ, ಆಭರಣ
ಂದಿಗೆ ಭೂಲೋಕದಲ್ಲಿ ಅವತರಿಸಿ, ಸಕಲ ಶಾಸ್ತ್ರಾರ್ಥ ತತ್ತ್ವಗಳನ್ನು,
ಶ್ರಯ ಸಾರವನ್ನು ತಮಿಳು ಭಾಷೆಯಲ್ಲಿಯೇ ಪ್ರಕಟಿಸಿದನು. ಇದೇ ಆಳ್ವಾರು
ದಿವ್ಯ ಪ್ರಬಂಧ. ಇವು ಅರ್ಥಪಂಚಕ, ಭಗವಂತನ ಅರ್ಚಾವತಾರದ
ಸನೆ, ದಿವ್ಯ ದೇಶಗಳ ವೈಭವ, ಭಕ್ತಿ ಪ್ರಪತ್ತಿಗಳ ಮಹಿಮೆ, ಇವೆಲ್ಲವನ್ನೂ
ಮಾನ್ಯರ ಭಾಷೆಯಾದ ತಮಿಳಿನಲ್ಲಿ ವಿವರಿಸಿ, ಯಥಾರ್ಥ ದರ್ಶನದ ಪ್ರಚಾರ
ದ್ಧವಾಗಿ ಆಗುವಂತೆ ಸಹಾಯ ಮಾಡಿವೆ. ಪರಮ ಮಂಗಳ ಸ್ವರೂಪಿಯಾದ
ಂತನನ್ನು ಸೇರಿ ಅವನಿಗೆ ನಿತ್ಯ ಕೈಂಕರ್ಯ ಮಾಡುವುದೇ ಪರಮಪುರುಷಾರ್ಥ
ದನ್ನು ನಿರ್ಧಾರಕವಾಗಿ ಪ್ರತಿಪಾದಿಸಿ, ಆಮೂಲಕ ಭಗವಂತನಲ್ಲಿ ನಿರತಿಶಯ
ಹಾಗೂ ಪ್ರೀತಿ ರೂಪವಾದ ಭಕ್ತಿಯನ್ನು ಮೂಡಿಸಿ ಬೆಳೆಸುತ್ತವೆ.

ದೋಷ ರಹಿತವಾದ ಶಬ್ದ, ಆಕರ್ಷಕ ರೀತಿಯಲ್ಲಿ ಶಬ್ದಗಳ ಸೇರ್ಪಡೆ,
ವ ತತ್ತ್ವ-ಸೌಂದರ್ಯಗಳನ್ನು ಪ್ರಕಾಶ ಪಡಿಸಬಲ್ಲ ಬಗೆ, ಓದುಗರಿಗೆ
ಯವಾಗಿ ಹೃದಯಾಹ್ಲಾದವನ್ನು ನೀಡಬಲ್ಲ ಸಾಮರ್ಥ್ಯ, ಉಲ್ಲಾಸ ಜನಕ
ಅಪೂರ್ವತೆ-ಇವೆಲ್ಲ ದಿವ್ಯ ಪ್ರಬಂಧವೆಂಬ ಕಾವ್ಯದಲ್ಲಿ ಸೇರಿವೆ.

ವೇದಗಳಲ್ಲಿ ಇರುವ ಅರ್ಥವನ್ನು ಸುವಿಶದವಾಗಿ ಕಂಡು ಅದರ ಅನುಭವ
ಕ ಪರಮಾನಂದವನ್ನು ಪಡೆದ ಮಾರ್ಗ ಇದರಲ್ಲಿ ಅಡಗಿದೆ. ವೇದಸಾರವ
ಕೊಂಡೂ, ವೇದದಲ್ಲಿ ಗೂಢವಾಗಿರುವ, ಪವಿತ್ರವಾದ ಆಧ್ಯಾತ್ಮಿಕ ತತ್ತ್ವ
, ವಿಶಿಷ್ಟಾದ್ವೈತ ಸಿದ್ಧಾಂತದ ಅಂಶಗಳನ್ನೂ, ಸಾಹಿತ್ಯಿಕ ಸೌಂದರ್ಯದಿಂದ
ತವಾದ ಈ ದ್ರಾವಿಡ ಪ್ರಬಂಧಗಳು ರಸಮಯ ರೀತಿಯಲ್ಲಿ ತಿಳಿಸಿಕೊಡುತ್ತವೆ.
ು ವೇದಗಳಿಗೆ ವಿರೋಧವಾದುದಾವುದನ್ನೂ ಹೊಂದಿರದ ಕಾರಣ,
ದ್ವೈತ ಸಿದ್ಧಾಂತಕ್ಕೆ ಪರಮ ಪ್ರಮಾಣ, ಪರಮಾಧಾರ, ಸರ್ವಶ್ರೇಷ್ಠ ಗ್ರಂಥ

## (2) ಆಳ್ವಾರ್ ಎಂದರೇನು ?

ಆಳ್ವಾರ್ ಎಂದರೆ ದೈವ ಪ್ರೇಮದಲ್ಲಿ ಐಕ್ಯನಾದವನು, ಆಧ್ಯಾತ್ಮ ಜ್ಞಾನರೂಪಿಯಾದ ಸಮುದ್ರದಲ್ಲಿ ಸ್ನಾನಮಾಡಿದವನು, ಭಗವಂತನ ಕಲ್ಯಾಣ ಗುಣಗಳೆಂಬ ಅಮೃತಸಾಗರದಲ್ಲಿ ಅಂತರ್ನಿಮಗ್ನನಾದವನು ಹಾಗೂ ಅದರಲ್ಲಿ ಯಾವಾಗಲೂ ಆಳವಾಗಿ ಮುಳುಗಿದವನು, ಪರಮಾತ್ಮನಲ್ಲಿ ಅಸದೃಶ ಭಕ್ತಿ ಹೊಂದಿದವನು, ರಾಜರು ಹಾಗೂ ಶ್ರೇಷ್ಠ ಕುಲದವರನ್ನು ಆಳುವವನು ಎಂದು ಅರ್ಥ.

ಭಗವಂತನ ಕರುಣೆಯಿಂದ ಭಕ್ತನಲ್ಲಿ ಉಂಟಾದ ಭಕ್ತಿಭಾವನೆಯ ಉದ್ರೇಕದಿಂದ ಕಂಠ ಗದ್ಗದಿತವಾಗಿ, ಮೈಮೇಲೆ ರೋಮಾಂಚನಗಳೆದ್ದು, ಕಣ್ಣುಗಳಲ್ಲಿ ಆನಂದಾಶ್ರುವು ತುಂಬಿ, ದೇವನೊಡನೆ ಲಭಿಸಿದ ಭಕುತಿರತಿಯ ಸಂಭಾಷಣೆಯ ಸಂಭ್ರಮದಿಂದ ಮುಕುತಿಯನ್ನೂ ಮರೆಯುವ ಈ ಆಳ್ವಾರುಗಳು, ಅನುಭಾವಿಗಳು ಹಾಗೂ ಭಕ್ತ ಕವಿಗಳು ಎನ್ನಬಹುದು. ಇಡೀ ಜಗತ್ತಿನ ಹುಟ್ಟು, ಬೆಳವಣಿಗೆ ಮೊದಲಾದುವೆಲ್ಲವನ್ನೂ ತನ್ನಲೀಲೆಯಾಗಿ ಉಳ್ಳ ಪರಮಾತ್ಮನನ್ನು ತಮ್ಮೊಳಗೆ ತಾವೇ ಅನುಭವಿಸಿದ ಮಹಾಮಹಿಮರು ಈ ಆಳ್ವಾರುಗಳು. ಇವರು ಸಂಸಾರವನ್ನು ಬಿಡದೆ, ಸಂಸಾರಕ್ಕೆ ಸಿಕ್ಕಿಕೊಳ್ಳದೆ, ಜನಸಾಮಾನ್ಯರ ಮನೋವೃತ್ತಿಯನ್ನು ಹೊಂದಿರದೆ, ದಿವ್ಯ ಜೀವನವನ್ನು ನಡೆಸುವ ಮಹಾ ಭಾಗ್ಯಶಾಲಿಗಳು. ಜೊತೆಗೆ ಇವರು ಪ್ರಾಕೃತ ಭೋಗವನ್ನೇ ತೋರಿಸಿಕೊಡುವ ಈ ಪ್ರಪಂಚದಲ್ಲಿ ತಾವು ಪಡೆದ ಪರಮಾತ್ಮನ ಅನುಭವ ಭೋಗವನ್ನು ಇತರರಿಗೆ ವಿನಿಯೋಗಿಸುವ ಉದ್ಯಮದಲ್ಲಿ ತೊಡಗಿದ ಮಹಾವ್ಯಕ್ತಿಗಳು.

ಭಗವತ್ಪ್ರೇಮದ ಸುಳಿಯಲ್ಲಿ ಸಿಕ್ಕಿಕೊಂಡ ಇವರಲ್ಲಿ ಸ್ವಾನುಭವವೇ ಅತ್ಯಂತ ಪ್ರಧಾನವಾದುದು. ತಮ್ಮ ಅಗಾಧವಾದ ಪ್ರೇಮದಿಂದ ಇವರು ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು, ತಮ್ಮ ದಿವ್ಯಾನುಭವವನ್ನೆಲ್ಲ ಸಹಜವಾದ ತಮ್ಮ ಮಧುರ ವಾಣಿಯಲ್ಲಿ ಉದ್ಗಾರ ಹೊರಡಿಸಿದ್ದಾರೆ. ತಾವು ತಿಳಿದುಕೊಂಡ ವೇದವೇದಾಂಗ ಪುರಾಣೇತಿಹಾಸಾಗಮಗಳ ರಹಸ್ಯ, ತತ್ತ್ವಜ್ಞಾನ, ಬ್ರಹ್ಮಾನುಭವದ ಪ್ರಕಾರ, ಉಜ್ಜ್ವಲವಾದ ಭಗವತ್ಪ್ರೇಮ ಇವುಗಳೆಲ್ಲವನ್ನೂ ಮೈಮರೆತು ಹಾಡಿದ್ದಾರೆ. ಭಗವತ್ಪ್ರೇಮದ ದಿವ್ಯ ಆನಂದದಲ್ಲಿ ಮೈಮರೆತು ತಮ್ಮ ಹೃದಯವನ್ನು ಸೂರೆಗೊಂಡ ಭಾವನೆಗಳನ್ನು ಹಾಗೂ ತಮ್ಮ ವಿಶೇಷ ಅನುಭವಗಳನ್ನು ಆರ್ತಿಯಿಂದ ಹಾಡಿ ಇತರರ ಹೃದಯಗಳನ್ನು ಸೂರೆಗೊಂಡು ಲೋಕೋಜ್ಜೀವನಗೈದಿದ್ದಾರೆ.

ವಿಷ್ಣು ಭಕ್ತಿಪಂಥಕ್ಕೆ ಸೇರಿದ ಈ ಆಳ್ವಾರುಗಳು ಪರಮಾತ್ಮನ ದಿವ್ಯಸ್ವರೂಪವನ್ನು ಅನುಭವಿಸಿ, ತತ್ತ್ವದರ್ಶನ ಸಿದ್ಧಿ ಪಡೆದು, ಭಾರತೀಯ ಸಂಸ್ಕೃತಿಯ ಉನ್ನತ, ಉದಾರ, ಮಧುರ, ಪವಿತ್ರ ಆದ ಭಕ್ತಿಮಾರ್ಗವನ್ನು ವಿವರಿಸಿದ್ದಾರೆ. ಇವರು ಸಾಧಿಸಿ, ಅನುಭವಿಸಿ, ಉಪದೇಶಿಸಿರುವ ವೈಯಕ್ತಿಕ, ಸಾಮಾಜಿಕ, ಧಾರ್ಮಿಕ

ಜೀವನದ ರೀತಿನೀತಿಗಳು ಎಂದೆಂದಿಗೂ ಎಲ್ಲರಿಗೂ ಮಾರ್ಗದರ್ಶಕ, ಅನುಕರಣ ಯೋಗ್ಯ ಆಗಿವೆ.

ಹೀಗೆ ಭಕ್ತಿಪಂಥವನ್ನು ರೂಪಿಸಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಬೇಕಾದ ಸಂಪ್ರ ದಾಯದ ಚೌಕಟ್ಟನ್ನು ಆಳ್ವಾರುಗಳು ಒದಗಿಸಿದರು. ತಮಿಳಿನ ಪ್ರಬಂಧವು ಂಸ್ಕೃತದ ಉಪನಿಷತ್ತುಗಳೊಡನೆ ಸೇರಿ, ಉಭಯ ವೇದಾಂತ ಎನಿಸಿಕೊಂಡು, ಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರವಾಯಿತು ಹಾಗೂ ಶ್ರೀವೈಷ್ಣರಿಗೆ ನಿತ್ಯಾನು ಂಧೇಯ, ಕಾಲಕ್ಷೇಪ ವಿಷಯ ಆದುವು. ವೇದಾಧ್ಯಯನ ಹಾಗೂ ಕರ್ಮ ಂಸ್ಕಾರಗಳಿಂದ ಬ್ರಾಹ್ಮಣ್ಯ ಸಿದ್ಧಿಸುವಂತೆಯೇ, ಪ್ರಬಂಧ ಪಾರಾಯಣ ಮತ್ತು ಂಚಸಂಸ್ಕಾರಗಳಿಂದಲೂ ಶ್ರೀ ವೈಷ್ಣವತ್ವ ಸಿದ್ಧಿಸುತ್ತದೆಯಾದ ಕಾರಣ, ದೇವರ ಉತ್ಸವ ಕಾಲದಲ್ಲಿ ಉತ್ಸವಮೂರ್ತಿಯ ಮುಂಭಾಗದಲ್ಲಿ ಪ್ರಬಂಧ, ಹಿಂಭಾಗದಲ್ಲಿ ೇದ, ಇವೆರಡರ ಪಾರಾಯಣ ನಡೆಯಬೇಕೆಂಬ ಸಂಪ್ರದಾಯ ಬಂದಿತು.

ಆಳ್ವಾರುಗಳು ಬೇರೆ ಬೇರೆ ಕಾಲದಲ್ಲಿ ಅವತರಿಸಿ ಪರಮಾತ್ಮನ ಸಾಕ್ಷಾತ್ಕಾರ ಡೆದು, ಪವಿತ್ರಕ್ಷೇತ್ರಗಳಲ್ಲಿ ಅರ್ಚಾಮೂರ್ತಿಗಳ ದರ್ಶನಮಾಡಿ, ತಮಗೆ ಉಂಟಾದ ನುಭವವನ್ನು ಪ್ರಬಂಧ ರೂಪದಲ್ಲಿ ಗಾನಮಾಡಿದರು. ಅವನ್ನು ಯಾರೂ ಬರೆದಿಡ ಲ್ಲವಾದುದರಿಂದ ಕಾಲಕ್ರಮದಲ್ಲಿ ಅವು ಲುಪ್ತವಾದುವು. ಈ ತಮಿಳು ವೇದವನ್ನು ನಃ ಕಂಡುಹಿಡಿದು, ಸಂಪಾದಿಸಿ, ಸಂರಕ್ಷಿಸಿ, ಜಗತ್ತಿಗೆ ಕೊಟ್ಟವರು ವಿಶಿಷ್ಟಾದ್ವೈತ ದ್ಧಾಂತದ ಪ್ರಥಮಾಚಾರ್ಯರಾದ ನಾಥಮುನಿಗಳು. ಇವರು ಯೋಗದೆಸೆಯಲ್ಲಿ ಮ್ಮಾಳ್ವಾರರಿಂದ ತಿಳಿದುಕೊಂಡ ದಿವ್ಯ ಪ್ರಬಂಧಗಳನ್ನು ಪಾರಾಯಣ ಮಾಡಲು, ನಮಾಡಲು ಎಲ್ಲರಿಗೂ ಹೇಳಿಕೊಟ್ಟರು. ಜೊತೆಗೆ ಅವನ್ನು ಎಲ್ಲ ವಿಷ್ಣುದೇವಾ ಲಗಳಲ್ಲಿಯೂ ಪ್ರಚಾರಮಾಡುವಂತೆ ತಿಳಿಸಿದರು. ಪ್ರಬಂಧದ ಅರ್ಥ ಪ್ರವಚನವು ರಂಭವಾದುದು ಆಚಾರ್ಯ ಯಾಮುನರ ಕಾಲದಲ್ಲಿ, ಇದನ್ನು ವಿಶೇಷವಾಗಿ ವಚನಮಾಡಿ ಪ್ರಚಾರಮಾಡಿದವರು ಆಚಾರ್ಯ ರಾಮಾನುಜರು. ಇದಕ್ಕೆ ದಲ ವ್ಯಾಖ್ಯಾನ ಬರೆದವರು ಪಿಳ್ಳಾನ್‌ರವರು. ಪ್ರಬಂಧಗಳನ್ನೆಲ್ಲ ಕ್ರೋಢೀ ಸಿ, ವ್ಯವಸ್ಥಿತವಾಗಿ ವಿಭಾಗಿಸಿ, ಅವುಗಳ ಮಹಿಮೆ-ಪವಿತ್ರತೆಗಳನ್ನು ಕಾಪಾಡಿ, ಗಳ ಪಾರಾಯಣವು ಅವಿಚ್ಛಿನ್ನವಾಗಿ ನಡೆಯುವಂತೆ ಮಾಡಿದವರು ವೇದಾಂತ ಶಿಕರು. ಗಂಗೆಯಂತಿರುವ ವೇದೋಪನಿಷತ್ತುಗಳ ಸಂಸ್ಕೃತ ಪ್ರಧಾನ ಸಂಸ್ಕೃತಿಯ ವಾಹದೊಂದಿಗೆ ಯಮುನೆಯಂತಿರುವ ತಮಿಳು ಪ್ರಬಂಧ ಸಂಸ್ಕೃತಿಯ ಪ್ರವಾಹವು ಯುವಂತೆಮಾಡಿ ಎರಡನ್ನೂ ಒಟ್ಟುಗೂಡಿಸಿ ಪ್ರಚಾರ ಮಾಡಿದ ಕೀರ್ತಿ ನಿಗಮಾಂತ ಾದೇಶಿಕರಿಗೆ ಸಲ್ಲುತ್ತದೆ. ನಮ್ಮಾಳ್ವಾರರ ನಾಲ್ಕು ಪ್ರಬಂಧಗಳು ನಾಲ್ಕು ವೇದ ದೂ, ತಿರುಮಂಗೈಆಳ್ವಾರರ ಆರು ಪ್ರಬಂಧಗಳು ಆರು ವೇದಾಂಗಗಳೆಂದೂ, ದ ಆಳ್ವಾರುಗಳ ಪ್ರಬಂಧಗಳು ಉಪಾಂಗಗಳೆಂದೂ, ಆಂಡಾಳ್ ರಚಿಸಿದ ಪ್ಪಾವೈ ಉಪನಿಷತ್ತುಗಳ ಸಾರವೆಂದೂ ತಿಳಿಯಲ್ಪಟ್ಟುದರಿಂದ ಸಂಸ್ಕೃತ, ತಮಿಳು

ಎರಡೂ ವೇದಾಂತಗಳಿಗೆ ಸಮಾನವಾದ ಪ್ರಾಮುಖ್ಯ, ಪ್ರಾಶಸ್ತ್ಯ ಸಿಕ್ಕಿ, ತಮಿಳಿಗೂ ಸಂಸ್ಕೃತದಷ್ಟೇ ಗೌರವ ಸ್ಥಾನ ದೊರಕಿತು.

### 3] ಸಂದೇಶ

ಸ್ತ್ರೀಸುಖ, ಧನಸಂಪತ್ತು, ರಾಜಮರ್ಯಾದೆ ಮೊದಲಾದ ಪ್ರಾಪಂಚಿಕ ಸುಖ ಭೋಗಗಳು ಪರಮಾತ್ಮನ ಸಾನ್ನಿಧ್ಯದ ಮುಂದೆ ಹುಲ್ಲಿಗಿಂತಲೂ ಕಡೆಯಾದುದು. ಪ್ರಕೃತಿ ಸಂಬಂಧ, ಪ್ರಾಕೃತಿಕ ಭೋಗಗಳಲ್ಲಿ ಆಸಕ್ತಿ, ಆತ್ಮಾಭಿಮಾನ ಇವೆಲ್ಲ ದೇಹಾತ್ಮ ಭ್ರಮೆಯನ್ನುಂಟು ಮಾಡಿ ಪರಮಾತ್ಮನನ್ನು ಪಡೆಯಲು ಇರುವ ವಿರೋಧ ಸಾಮಗ್ರಿಗಳು. ಇಂದ್ರಿಯ ಸುಖದಲ್ಲಿ ಮತ್ತು ವಿಷಯ ಭೋಗಗಳಲ್ಲಿ ಆಸೆಯನ್ನು ತೊರೆದು, ಭಗವಂತನಲ್ಲಿ ಆಸೆಯನ್ನು ಬೆಳೆಸಿಕೊಳ್ಳಬೇಕು. ಬುದ್ಧಿಗಿಂತ ಭಾವವು ಅಂದರೆ ಜ್ಞಾನಕ್ಕಿಂತ ಭಕ್ತಿಯೇ ಸುಗಮವಾದುದು. ಭಕ್ತಿಯೇ ಅಂದರೆ ಭಗವಂತನಲ್ಲಿ ಪ್ರೀತಿ ಇಡುವುದೇ ಸರ್ವೋತ್ಕೃಷ್ಟವಾದ ಮಾರ್ಗ. ಜೀವಾತ್ಮ–ಪರಮಾತ್ಮರಲ್ಲಿ ಉತ್ತಮ ಸಂಬಂಧವನ್ನು ಕಲ್ಪಿಸುವುದೇ ಪ್ರೇಮ. ಭಗವಂತನ ಸ್ವರೂಪವೇ ಪ್ರೇಮವಾದುದರಿಂದ ಆತನ ಸಾಯುಜ್ಯ ಸಿಗುವುದೂ ಪ್ರೇಮದಿಂದಲೇ. ಪ್ರೇಮಮಯಿ, ಕೃಪಾಪರಿಪೂರ್ಣ ಆಗಿರುವ ಭಗವಂತನು ವರ್ಣ, ಜಾತಿ, ಕುಲ, ಲಿಂಗ, ಪಾಂಡಿತ್ಯಗಳ ಭೇದವಿಲ್ಲದೆ ಎಲ್ಲರಿಗೂ ಒಲಿಯುವಂಥವನು.

"ಪರಮ ಪುರುಷ, ವಾಸುದೇವ, ಭಗವಾನ್ ಎಂಬ ಹೆಸರುಗಳಿರುವ ಏಕದೇವನಾದ ನಾರಾಯಣನೆಂಬ ಭಗವಂತನೊಬ್ಬನೇ ಉಪಾಸ್ಯನು. ಚೇತನ–ಅಚೇತನ ವಸ್ತುಗಳೆಲ್ಲ ಅವನ ಶರೀರ. ಪ್ರಕಾರಗಳು ಹಾಗೂ ಅವನಿಗೆ ಶೇಷ ಭೂತಗಳು. ಅವನು ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಸಂಸಾರ ರಥದ ಚಕ್ರಗಳನ್ನು ತಿರುಗಿಸುತ್ತಿದ್ದಾನೆ. ಜೀವರೆಲ್ಲ ಈಶ, ಒಡೆಯ ಆದ ಪರಮಾತ್ಮನ ಆಸ್ತಿಯಾಗಿರುವುದರಿಂದ, ಆತನು ಅವರನ್ನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು.

ಭಗವಂತನಾದ ನಾರಾಯಣನು ಅಕ್ಷರ, ಅಮೃತ, ನಿತ್ಯ, ಸರ್ವವ್ಯಾಪಿ, ಗಣನಾತೀತ, ಸಚ್ಚಿದಾನಂದ ಸ್ವರೂಪಿ, ಜ್ಞಾನಪ್ರೇಮಗಳ ನಿಧಿ, ಸಮಸ್ತ ಕಲ್ಯಾಣ ಗುಣಪೂರ್ಣ, ಸತ್ಯಸುಗುಣ ಸೌಂದರ್ಯಗಳ ನೆಲೆ, ಆಗಿದ್ದಾನೆ. ಅವನ ಕೃಪೆಯೇ ಅವನ ವಕ್ಷಸ್ಥಲ ನಿವಾಸಿಯಾದ ಜಗನ್ಮಾತೆ ಮಹಾಲಕ್ಷ್ಮಿ ಆಗಿದ್ದಾಳೆ.

ನತೇ ರೂಪಂ ನಚಾಕಾರೋ ನಾಯುಧಾನಿನಚಾಸ್ಪದಂ ।
ತಥಾಪಿ ಪುರುಷಾಕಾರೋ ಭಕ್ತಾನಾಂತ್ವಂ ಪ್ರಕಾಶಸೇ ॥

ಎಂಬಂತೆ ನಿರ್ಗುಣೇಶ್ವರನೆಂದಾಗ ಪರಮಾತ್ಮನಿಗೆ ರೂಪ, ಆಕಾರ, ಆಯುಧಗಳು ಇಲ್ಲದಿದ್ದರೂ, ಸಗುಣೇಶ್ವರನೆನಿಸಿದ ಆತನು ತನ್ನ ಸೌಶೀಲ್ಯ, ಸೌಲಭ್ಯ, ವಾತ್ಸಲ್ಯ ಗುಣಗಳ ಪರಿಣಾಮವಾಗಿ, ಮಾನವರಲ್ಲಿರುವ ಅಪಾರ ಕರುಣೆಯ ಫಲವಾಗಿ, ತನ್ನ ಭಕ್ತರನ್ನು ಉದ್ಧರಿಸಬೇಕೆಂದು ಸಂಕಲ್ಪಿಸಿದಾಗ, ಲಕ್ಷ್ಮೀ ಸಹಿತನಾದ ನಾರಾಯಣನು

ಸಾಕಾರನಾಗಿ ಅವತಾರಗಳನ್ನು ಎತ್ತಿದುದಲ್ಲದೆ, ತನ್ನನ್ನು ಕಲ್ಲು, ಮರ, ಲೋಹಗಳ ಪ್ರತಿಮೆಗಳಲ್ಲಿ ಸೀಮಿತಗೊಳಿಸಿ, ತನ್ನ ಭಕ್ತರಿಗೆ ತಂದೆ, ತಾಯಿ, ಗುರು, ಮಿತ್ರ, ಮಗು, ಒಡೆಯ, ದಾಸ, ಪ್ರಿಯಕರ ಆಗಿ ಆಯಾ ಸನ್ನಿವೇಶಗಳಿಗೆ ತಕ್ಕಂತೆ ದರ್ಶನ ವಿತ್ತು ನೆರವು ನೀಡುತ್ತಾನೆ.

"ಭಗವಂತನ ಪಾದಸೇವೆ ಹಾಗೂ ಕೈಂಕರ್ಯಗಳು ಆತ್ಮನ ಜನ್ಮಾಂತರಗಳನ್ನು ತಪ್ಪಿಸಿ ನಿತ್ಯಾನಂದ ನೀಡುವ ಸಾಧನ. ಆದಕಾರಣ ಇಹಲೋಕದಲ್ಲಿ ಅರ್ಚಾವತಾರ ಗಳನ್ನು ಪೂಜಿಸುವುದರ ಮೂಲಕ ಜೀವನವನ್ನು ಸಾರ್ಥಕ ಪಡಿಸಿಕೊಂಡು, ಶ್ರೀವೈಕುಂಠ ಲೋಕದ ನಿತ್ಯಕೈಂಕರ್ಯ ಸಾಧನೆಗೆ ಆಶಿಸಬೇಕು. ನಾನು, ನನ್ನದು ಎಂಬ ಅಹಂಕಾರ, ಮಮತೆಗಳನ್ನು ತೊರೆದು ನಮ್ಮ ಕರ್ಮಗಳನ್ನೆಲ್ಲಾ ಪ್ರತಿಫಲಾ ಪೇಕ್ಷೆಯಿಲ್ಲದೆ ಭಗವಂತನ ಸೇವೆ ಎಂದೇ ಭಾವಿಸಿ ಮಾಡಬೇಕು. ಭಗವತ್ಕೈಂಕರ್ಯ ದಲ್ಲಿ ಭಾಗವತ ಕೈಂಕರ್ಯವೂ ಸೇರಿರುತ್ತದೆ. ಮಾನವನು ಉದ್ಧಾರವಾಗಬೇಕಾದರೆ, ಭಗವಂತನ ನಿತ್ಯಕೈಂಕರ್ಯ ಮಾಡುವ ಭಾಗ್ಯವನ್ನು ಹೊಂದಬೇಕಾದರೆ, ಅವನ ಪಾದ ಕಮಲಗಳಲ್ಲಿ ಆತ್ಮಸಮರ್ಪಣೆ ಅಥವಾ ಶರಣಾಗತಿಯನ್ನು ಅನುಷ್ಠಿಸಬೇಕು"—ಇದು ಆಳ್ವಾರುಗಳ ಸಂದೇಶ.

ದೇಹಾಭಿಮಾನವನ್ನು ತ್ಯಜಿಸುವುದು, ದೇಹಾನುಬಂಧಿಗಳ ಸಂಗವನ್ನು ಬಿಡು ವುದು, ಸಾಧುಸಂತರ ಸಹವಾಸದಲ್ಲಿ ಇರುವುದು, ವರ್ಣಾಶ್ರಮ ಧರ್ಮವನ್ನು ಆಚರಿಸುವುದು, ಭಗವಂತನ ವಿಷಯಕ ಗ್ರಂಥಗಳಲ್ಲಿ ಆಸಕ್ತಿ ವಹಿಸುವುದು, ಪರಮಾತ್ಮನ ದಿವ್ಯ ಜನ್ಮ ಕರ್ಮಗಳನ್ನು ಹೇಳುವುದು, ಕೇಳುವುದು, ಧ್ಯಾನಿಸುವುದು, ಸಮಸ್ತ ಚರಾಚರಗಳಲ್ಲಿ ಪರಮಾತ್ಮನು ಅಂತರ್ಗತನಾಗಿರುವನೆಂದು ನಂಬಿ ಸಮಸ್ತ ಭೂತಗಳಲ್ಲಿ ಸಮಾನವಾದ ದಯೆ–ಮೈತ್ರಿಗಳಿಂದ ವರ್ತಿಸುವುದು, ದೈವ ಕೃಪೆಯಿಂದ ಲಬ್ಧವಾದುದರಲ್ಲಿ ತೃಪ್ತಿ ಹೊಂದುವುದು, ತಾನು ಮಾಡುವುದೆಲ್ಲ ಭಗವದರ್ಪಣ ವೆಂದು ತಿಳಿಯುವುದು, ಭಕ್ತಿ ಪ್ರಪತ್ತಿಗಳೇ ಮುಕ್ತಿಗೆ ದಾರಿ ಎಂದು ನಂಬುವುದು. ಎಂಬೀ ಭಾಗವತ ಮತದ ತತ್ತ್ವಗಳನ್ನು ತಮ್ಮ ಜೀವನ–ಅನುಷ್ಠಾನಗಳ ಮೂಲಕ ತೋರಿಸಿ ಕೊಟ್ಟು, ಮಾನವೀಯತಾ ದೃಷ್ಟಿಯನ್ನು ಹೊಂದಿ ದುಃಖಿತಪ್ತವಾದ ಮಾನವ ಜನಾಂಗದಲ್ಲಿ ಕರುಣೆ ಹೊಂದಿದ್ದ, ಆಳ್ವಾರುಗಳ ವಿಷಯದಲ್ಲಿ ಜನ–ಸಾಮಾನ್ಯರಿಗೆ ಅವರ ಮೂರ್ತಿಗಳನ್ನು ದೇವಾಲಯಗಳಲ್ಲಿ ಸ್ಥಾಪಿಸಿ ಪೂಜಿಸುವಷ್ಟು ಅಸದೃಶವಾದ ಭಕ್ತಿ–ಪ್ರೇಮ–ಗೌರವ ಆದರಗಳಿದ್ದವು. ದಕ್ಷಿಣ ಭಾರತದ ಪವಿತ್ರ ನದಿಗಳು ಜನರ ತನುವನ್ನು ತಣಿಸಿದಂತೆ, ಆಳ್ವಾರುಗಳ ಭಕ್ತಿ ಪ್ರವಾಹವು ಜನರ ಮನ–ಹೃದಯಗಳನ್ನು ತಣಿಸಿತು. ವೇದಮಂತ್ರಗಳಷ್ಟೇ ಪವಿತ್ರವಾದ ಇವರ ಮಧುರ ಗೀತೆಗಳನ್ನು ಸಭೆ, ಸಮಾರಂಭ, ಉತ್ಸವಗಳಲ್ಲಿ ಹಾಡುತ್ತಾರೆ. ಇವರ ಜೀವನದಲ್ಲಿನ ಪ್ರಭಾವಶಾಲಿಯಾದ ಘಟನೆಗಳನ್ನು ಅಭಿನಯಿಸುತ್ತಾರೆ.

ಆಳ್ವಾರುಗಳನ್ನು ಕುರಿತು ಶ್ರೀವೈಷ್ಣವರು ಮಾಡುವ ಪ್ರಾರ್ಥನೆ ಹೀಗಿದೆ.

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀಭಕ್ತಿಸಾರ ಕುಲಶೇಖರ ಯೋಗಿವಾಹಾನ್ ।
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಸ್ಮಿ ನಿತ್ಯಂ ॥
ಕಾಸಾರಭೂತ ಮಹದಾಹ್ವಯ ಭಕ್ತಿಸಾರಾನ್
ಸೇವೇಶಠಾರಿ ಕುಲಶೇಖರ ವಿಷ್ಣುಚಿತ್ತಾನ್ ।
ಭಕ್ತಾಂಘ್ರಿರೇಣು ಮುನಿವಾಹ ಚತುಷ್ಕವೀಂದ್ರಾನ್
ಮಾಧುರ್ಯಗಾನ ತುಲಸೀವನ ಜಾಯತೀಂದ್ರಾನ್ ॥
ಪೊಯ್‌ಗೈಮುನಿ ಪೂದತ್ತಾರ್ ಪೇಯಾಳ್ವಾರ್
ಕಣ್‌ಪೊರು ನಲ್ಲವರುಂ ಕುರುಕೇಶನ್ ವಿಷ್ಣುಚಿತ್ತನ್
ತುಯ್ಯ ಕುಲಶೇಖರನ್ ನಮ್ ಪಾಣನಾಥನ್
ತೊಂಡರಡಿಪ್ಪೊಡಿ ಮಳಿಶೈವಂದ ಜ್ಯೋತಿ
ವೈಯಮೆಲ್ಲಾಮ್ ಮರ್ಕೈವಿಳಂಗ ವಾಳವೇಲೆಂದುಮ್
ಮಂಗೈಯರ್ ಕೋನೆನ್ರಿವರ್‌ಗಳ್‌ಮಹಿಳಂದು ಪಾಡುಮ್
ಶೆಯ್ಯ ತಮಿಳ್ ಮಾಲೈಗಳ್ ನಾಮ್ ತೆಳಿಯವೊದಿತ್ತೆಳಿಯಾದ
ಮರ್ಕೈನಿಲಂಗಲ್ ತೆಳಿನಿನ್ರೋಮೇ ॥

ವೇದಾಂತದೇಶಿಕರ ಈ ಪದ್ಯದಲ್ಲಿ ಆಳ್ವಾರುಗಳು ರಚಿಸಿದ ನಾಲಾಯಿರ ಪ್ರಬಂಧಗಳ ಲೆಕ್ಕ ಸಿಗುತ್ತದೆ.

| | |
|---|---|
| ಎಣ್ಣಿಲ್ ಮುದಲಾಳ್ವಾರ್‌ಹಳ್ ಮೂನ್ರುನೂರುಂ | 300 |
| ಎಳಿಲ್ ಮಳಿಶೈಪ್ಪಿರಾನ್ ಇರುನೂತ್ತೊರು ಪತ್ತಾರುಂ | 216 |
| ಉಣ್ಮೈಮಿಹು ಮಾರನ್‌ಮರ್ಕೈ ಆಯಿರತ್ತೋಡು | |
| ಉತ್ತವಿರು ನೂತ್ತು ತೊಣ್ಣೂರುಮಾರುಂ | 1296 |
| ಪಣ್ಮೈಯುಡೈ ಮದುರಕವಿ ಪತ್ತುಮೊನ್ರುಂ | 11 |
| ವಂಜಿಯರ್ ಕೋನ್‌ನೂತ್ತೈದುಂ ಪಟ್ಟನಾದನ್ | 105 |
| ಪಣ್ಣೈಯಿಲ್ ನಾನೂತ್ತೆಳುಪತ್ತು ಮೂನ್ರುಂ | 473 |
| ಪಾರ್ಕೋದೈ ನೂತ್ತೆಳುಪತ್ತು ಮೂನ್ರೇಂ | 173 |
| ಒತ್ತರಡಿಪ್ಪೊಡಿ ಪಾಡಲ್ಯೆಂಬತ್ತೈದುಂ | 55 |
| ಪಾಣರ್ ಪುಗಳ್ ಪತ್ತುಡನೇ, ಪರಕಾಲನ್‌ಶೊಲ್ | 10 |
| ಅತ್ತನುಯರ್ ವೇಂಗಡಮಾರ್ಕು ಆಯಿರತ್ತೋಡಾನ | |
| ಇರುನೂತ್ತೊರ್ಯೆಂಬತ್ತು ಮೂನ್ರು | 1253 |

ಮತ್ತಿತರು ಮೆತಿರಾಶರ್ ಪೊನ್ನಡಿಕ್ಕೀ
ಮೊಳಿಂದ ವಮುದರ್ ಪಾಡಲ್ ನೂರು ಮೆಟ್ಟುಂ 108
ಎತ್ತಿಶೈಯುಂ ಪಾಳವಿವರ್ ಪಾಡಿವೈತ್ತ
ಇವ್ವೈ ನಾಲಾಯಿರಮುವುಡಿಯೋಂಗಳ್ ವಾಳ್ವೇ 4000

**ಪ್ರಬಂಧಗಳ ವಿವರ ಹೀಗಿದೆ :**

| ಆಳ್ವಾರುಗಳ ಹೆಸರು | ಕೃತಿಯ ಹೆಸರು | ಪಾಶುರಗಳ ಸಂಖ್ಯೆ | ಯಾವ ಸಾವಿರದಲ್ಲಿ ಸೇರಿವೆ |
|---|---|---|---|
| ಪೊಯ್‌ಗೈ ಆಳ್ವಾರ್ | ಮುದಲ್ ತಿರುವಂದಾದಿ | 100 | III |
| ಪೂದತ್ತಾಳ್ವಾರ್ | ಇರಂಡಾಂ ತಿರುವಂದಾದಿ | 100 | III |
| ಪೇಯಾಳ್ವಾರ್ | ಮೂನ್ರಾಂ ತಿರುವಂದಾದಿ | 100 | III |
| ತಿರುಮಳಿಶೈಯಾಳ್ವಾರ್ | ತಿರುಚ್ಚಂದವಿರುತ್ತಂ | 120 | I |
| ,, | ನಾನ್ಮುಗನ್ ತಿರುವಂದಾದಿ | 96 | III |
| ಮಧುರಕವಿಯಾಳ್ವಾರ್ | ಕಣ್ಣಿನುಣ್‌ಶಿರುತ್ತಾಂಬು | 11 | I |
| ನಮ್ಮಾಳ್ವಾರ್ | ತಿರುವಿರುತ್ತಂ | 100 | III |
| ,, | ತಿರುವಾಶಿರಿಯಂ | 7 | III |
| ,, | ಪೆರಿಯ ತಿರುವಂದಾದಿ | 87 | III |
| ,, | ತಿರುವಾಯ್ಮೊಳಿ | 1102 | IV |
| ಕುಲಶೇಖರಾಳ್ವಾರ್ | ಪೆರುಮಾಳ್ ತಿರುಮೊಳಿ | 105 | I |
| ಪೆರಿಯಾಳ್ವಾರ್ | ತಿರುಪ್ಪಲ್ಲಾಂಡು | 12 | I |
| ,, | ತಿರುಮೊಳಿ | 461 | I |
| ಆಂಡಾಳ್ ಆಳ್ವಾರ್ | ತಿರುಪ್ಪಾವೈ | 30 | I |
| ,, | ನಾಚ್ಚಿಯಾರ್ ತಿರುಮೊಳಿ | 148 | I |
| ತೊಂಡರಡಿಪ್ಪೊಡಿಯಾಳ್ವಾರ್ | ತಿರುಮಾಲೈ | 45 | I |
| ,, | ತಿರುಪ್ಪಳ್ಳಿಯೆಳುಚ್ಚಿ | 10 | I |
| ತಿರುಪ್ಪಾಣಾಳ್ವಾರ್ | ಅಮಲನಾದಿಪಿರಾನ್ | 10 | I |
| ತಿರುಮಂಗೈಯಾಳ್ವಾರ್ | ಪೆರಿಯ ತಿರುಮೊಳಿ | 1084 | II |
| ,, | ತಿರುಕ್ಕುರುಂದಾಂಡಕಂ | 20 | II |
| ,, | ತಿರುನೆಡುಂದಾಂಡಕಂ | 30 | II |
| ,, | ತಿರುವೆಳುಕ್ಕೂತ್ತಿರುಕ್ಕೈ | 1 | III |
| ,, | ಶಿರಿಯ ತಿರುಮಡಲ್ | 40 | III |
| ,, | ಪೆರಿಯ ತಿರುಮಡಲ್ | 78 | III |
| ತಿರುವರಂಗತ್ತಮುದನಾರ್ (ರಾಮಾನುಜರ ಶಿಷ್ಯ) | ರಾಮಾನುಜ ನೂತ್ತಂದಾದಿ | 108 | |

ವಿ. ಸೊ. ಒಟ್ಟು ಪಾಶುರಗಳು 4000 ಆಗುತ್ತವೆ. ಕೆಲವರು ರಾಮಾನುಜ ನೂತ್ತಂದಾದಿಯನ್ನು ಬಿಟ್ಟು, ಬೇರೆ ರೀತಿಯಲ್ಲಿ ಎಣಿಕೆಮಾಡಿ, ಆಳ್ವಾರುಗಳದ್ದೇ 4000 ಪಾಶುರಗಳಿವೆ ಎನ್ನುತ್ತಾರೆ. ಕೆಲವು ಆಚಾರ್ಯರು ಮೂರನೆಯ ಸಾವಿರ ವನ್ನು ನಾಲ್ಕನೆಯದೆಂದೂ, ನಾಲ್ಕನೆಯದನ್ನು ಮೂರನೆಯದೆಂದೂ ಹೇಳುತ್ತಾರೆ.

## 4. ತಿರುವಾಯ್ಮೊಳಿಯ ಸಾರ

### (1) ಪರಮಾತ್ಮ

ಪರಮಾತ್ಮನು ಅಖಿಲ ಜಗತ್ಕಾರಣನು. ಲೋಕದ ಸಮಸ್ತಕ್ಕೂ ಏಕಮೇವಾ ದ್ವಿತೀಯನಾದ ಕಾರಣನು. ಅವನು ಇರುವುದು ಸತ್ಯ. ಈ ಪ್ರಪಂಚಕ್ಕೆ ಅವನೇ ಉಪಾದಾನ ಹಾಗೂ ನಿಮಿತ್ತಕಾರಣನು. ಲೋಕಗಳನ್ನು ಸೃಷ್ಟಿಸಿ, ರಕ್ಷಿಸಿ, ಪ್ರಳಯ ಕಾಲದಲ್ಲಿ ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡುವವನು ಅವನೇ. ಜನರು ಆಶ್ರಯಿಸುವ ಬ್ರಹ್ಮ, ರುದ್ರ, ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ, ಪ್ರಾಣಿ ಎಲ್ಲವನ್ನೂ ಸೃಜಿಸಿದವನು. ತನ್ನ ಸೌಶೀಲ್ಯ, ವಾತ್ಸಲ್ಯ ಗಳಿಂದ ಎಲ್ಲೆಡೆಯಲ್ಲಿರುವ ಎಲ್ಲ ವಸ್ತುಗಳನ್ನೂ ತನ್ನ ಪಾದಗಳಿಂದ ಸ್ಪರ್ಶಿಸಿ ರಕ್ಷಿಸುವ ಅವನ ಮಹಿಮೆಯನ್ನು ಮನಸ್ಸಿನಿಂದ ತಿಳಿಯಲು, ಮಾತುಗಳಿಂದ ಹೇಳಲು ಸಾಧ್ಯ ವಿಲ್ಲ. ಭಗವಂತನು ಜಗತ್ಕಾರಣ, ಜಗದಂತರ್ಯಾಮಿ, ಜಗಚ್ಛರೀರಕ, ಜಗದತೀತ ಆಗಿದ್ದಾನೆ. ಚರಾಚರಾತ್ಮಕವಾದ ಸಕಲ ವಸ್ತುಗಳನ್ನು ಅವನು ಪೂರ್ಣವಾಗಿ ವ್ಯಾಪಿ ಸಿದ್ದಾನೆ.

ಲಕ್ಷ್ಮೀದೇವಿಯೊಡಗೂಡಿ ಜಗತ್ತನ್ನು ಸೃಜಿಸಿ, ರಕ್ಷಿಸಿ, ಅಳಿಸುವವನು ಶ್ರೀಮನ್ನಾರಾಯಣ. ತ್ರಿಮೂರ್ತಿಗಳಲ್ಲಿ ಸರ್ವಕ್ಕೂ ಕಾರಣ, ಸಕಲ ಕಲ್ಯಾಣ ಗುಣಾ ಕರ, ಸರ್ವದೋಷರಹಿತ, ಸರ್ವಾಧಾರ, ಸರ್ವಪ್ರಾಪ್ಯ, ಶ್ರಿಯಃಪತಿ ಆಗಿರುವ ವಿಷ್ಣು ಅಥವಾ ನಾರಾಯಣನೇ ಪರತತ್ತ್ವ. ಭಗವಂತನ ಬಲಗಡೆ ರುದ್ರ, ನಾಭಿಯಲ್ಲಿ ಬ್ರಹ್ಮ ಇದ್ದು ಮಹಿಮಾನ್ವಿತರೆನಿಸಿದ್ದಾರೆ. ನಿರತಿಶಯವಾದ ಜ್ಞಾನಾನಂದಾದಿ ಅನಂತ ಕಲ್ಯಾಣ ಗುಣವಿಶಿಷ್ಟನಾದ ಭಗವಂತನು ಅವನ ಪ್ರಸಾದವನ್ನುಂಟುಮಾಡುವ ಜ್ಞಾನ ಭಕ್ತಿಗಳನ್ನು ಅವನೇ ಅನುಗ್ರಹಿಸಿದ್ದಾನೆ. ಎಲ್ಲ ಚೇತನರೂ ಭಗವಂತನಿಗೆ ಶೇಷ ಭೂತರಾಗಿ ಅವನ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಲೀಲಾವಿಭೂತಿ, ನಿತ್ಯವಿಭೂತಿ ಎರಡೂ ಸತ್ಯ. ಭಗವಂತನ ಚರಣಾರವಿಂದ ಸಮಾಶ್ರಯಣವೇ ಪರಮಹಿತ. ಅವನಲ್ಲಿ ಮಾಡಿದ ಪ್ರಪತ್ತಿಯು ಮೋಕ್ಷಕ್ಕೆ ಉಪಾಯ.

ಇಂದ್ರಿಯಗಳಿಂದ ಭಗವಂತನನ್ನು ತಿಳಿಯಲು ಆಗುವುದಿಲ್ಲ. ಅವನು ಚೇತನಾ ಚೇತನಗಳಿಂದ ಬೇರೆ, ವಿಲಕ್ಷಣ, ಜ್ಞಾನಾನಂದ ಘನ ಆಗಿದ್ದಾನೆ. ಭೂತ ವರ್ತ ಮಾನ ಭವಿಷ್ಯತ್ಕಾಲಗಳಲ್ಲಿ ಅವನಿಗೆ ಸದೃಶ, ಅಧಿಕ ಆದವರು ಇಲ್ಲ. ಭೂಮಿ,

ಅಂತರಿಕ್ಷ ಮುಂತಾದ ಸರ್ವಲೋಕಗಳಲ್ಲಿ ಎಲ್ಲ ಸ್ಥಳಗಳಲ್ಲಿಯೂ ಅವನು ವ್ಯಾಪಿಸಿದ್ದಾನೆ. ಯಾರ ಕಣ್ಣಿಗೂ ಕಾಣಿಸದೆ ಎಲ್ಲ ಚಿದ್‌ಚಿತ್ ವಸ್ತುಗಳ ಒಳಗೆ ಹೊರಗೆ ತನ್ನ ಸ್ವರೂಪದಿಂದಲೇ ವ್ಯಾಪಿಸಿದ್ದಾನೆ.

ಅವನು ಸಕಲ ಚೇತನಾ ಚೇತನ ಪದಾರ್ಥಗಳಿಗೂ ಧಾರಕ, ನಿಯಾಮಕ, ಆತ್ಮ, ಸ್ವಾಮಿ, ಶೇಷಿ ಆಗಿದ್ದಾನೆ. ಎಲ್ಲದರೊಳಗೂ ಅಂತರ್ಯಾಮಿಯಾಗಿದ್ದು ಎಲ್ಲವನ್ನೂ ಶರೀರವನ್ನಾಗಿ ಹೊಂದಿ ಸರ್ವ ಶರೀರಿ, ವಿಶ್ವಶರೀರಕ ಆಗಿದ್ದಾನೆ. ಜಗತ್ತಿನ ಸ್ವರೂಪ, ಸ್ಥಿತಿ, ಪ್ರವೃತ್ತಿಗಳು ಭಗವಂತನ ಅಧೀನವಾಗಿವೆ. ಸರ್ವಾತ್ಮನಾದ ಭಗವಂತನು ಎಲ್ಲ ಪದಾರ್ಥ–ಪ್ರಾಣಿಗಳಲ್ಲಿ ಇರುವುದರಿಂದ ಆಯಾ ಹೆಸರುಗಳಿಂದ ಅವನೇ ವಾಚ್ಯನಾಗಿದ್ದಾನೆ. ಅವನಿಗೆ ಪ್ರತಿಕೂಲರಾದವರು ಎಷ್ಟೇ ಉತ್ಕೃಷ್ಟರಾಗಿದ್ದರೂ ಅವನನ್ನು ತಿಳಿಯಲಾರರು. ಅವನಿಗೆ ಅನುಕೂಲರಾದವರು ಎಷ್ಟೇ ನಿಕೃಷ್ಟರಾಗಿದ್ದರೂ ಅವನನ್ನು ತಿಳಿಯಲು ಶಕ್ಯರಾಗಿರುತ್ತಾರೆ.

ಸೃಷ್ಟಿಗೆ ಮುನ್ನ ಸೂಕ್ಷ್ಮ ಚಿದಚಿದ್ವಿಶಿಷ್ಟನಾದ ಪರವಾಸುದೇವನ ರೂಪವನ್ನು ಹೊಂದಿದ್ದು, ಅನಂತರ ಪ್ರಕೃತಿ, ಮಹತ್ತು ಎಂಬೆರಡು ಶರೀರಗಳನ್ನು, ಮುಂದೆ ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಅಹಂಕಾರಗಳನ್ನೂ ಶರೀರವಾಗಿ ಹೊಂದಿ, ಆಮೇಲೆ ತ್ವಕ್, ಚಕ್ಷು, ಶ್ರೋತ್ರ, ಜಿಹ್ವೆ, ಘ್ರಾಣ, ವಾಕ್, ಪಾದ, ಪಾಣಿ, ಪಾಯು, ಉಪಸ್ಥ, ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳೆಂಬ ಶರೀರವನ್ನು ಹೊಂದಿ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಪಂಚಭೂತರೂಪನಾಗಿ, ಚಂದ್ರಸೂರ್ಯರೂಪನಾಗಿ, ಜನಿಸಿ ಜೀವ ಶರೀರಕನಾಗಿ, ಶೇಷನ ಮೇಲೆ ನಾರಾಯಣನಾಗಿ ಸಮುದ್ರದಲ್ಲಿ ಶಯನಿಸಿದ್ದಾನೆ.

ಅವನನ್ನು ಬಿಟ್ಟು ನಾವಿಲ್ಲ. ನಮ್ಮನ್ನು ಬಿಟ್ಟು ಅವನಿಲ್ಲ. ನಮ್ಮ ಆತ್ಮ ಅವನಿಗೆ ಭೋಗ್ಯ, ಅವನ ಆತ್ಮ ನಮಗೆ ಭೋಗ್ಯ. ಅವನು ಭಕ್ತರೊಡನೆ ಸಂಶ್ಲೇಷವನ್ನು ಹೊಂದಿ ನಲಿಯುತ್ತಾನೆ. ಅಂತರಾತ್ಮನಾಗಿ ಇದ್ದರೂ ಶರೀರ ದೋಷಗಳು ಆತ್ಮನಿಗೆ ಅಂಟದಿರುವಂತೆ, ಆಯಾ ಪದಾರ್ಥಗಳ ದೋಷಗಳಿಂದ ಅವನು ದೂರನಾಗಿದ್ದಾನೆ. ವಿಶ್ವ ಶರೀರಿಗೆ ಶರೀರ ಭೂತವಾದ ಚೇತನಾ ಚೇತನಗಳ ದೋಷಗಳು ಅಂಟುವುದಿಲ್ಲ. ಅವನಿಗೆ ತಲೆಬಾಗಿ ಶರಣಾಗದ ಯಾರೂ ಉದ್ಧಾರವಾಗಲಾರರು.

ಯಾವ ಹೆಸರನ್ನು ಹೇಳಿದರೂ ಆ ಹೆಸರು ಆ ಜೀವಾತ್ಮನ ಅಥವಾ ಪದಾರ್ಥದ ಮೂಲಕ ಆ ಸರ್ವಶೇಷಿಯನ್ನೇ ನಿರೂಪಿಸುತ್ತದೆ. ಅಸಾಧಾರಣ ಸ್ವರೂಪಿಯಾದ ಅವನೇ ಎಲ್ಲವೂ ಆಗಿದ್ದಾನೆ. ಎಲ್ಲವೂ ಅವನಿಗೆ ಪ್ರಕಾರವಾಗಿದೆ. ಈ ಶರೀರ–ಶರೀರಿ ಅಥವಾ ಪ್ರಕಾರ–ಪ್ರಕಾರಿ ಭಾವದ ಅರಿವಿನಿಂದ ನಮ್ಮಲ್ಲಿ ಶೇಷತ್ವ ಜ್ಞಾನ ಉದಯಿಸುತ್ತದೆ. ಭಗವಂತನು ಸರ್ವಶೇಷಿ, ಸರ್ವರಕ್ಷಕ ಆಗಿರುವನೆಂಬುದನ್ನು ಮನಗಾಣಲೆಂದೇ ಎಲ್ಲ ತತ್ತ್ವಚಿಂತನೆಗಳೂ ಇವೆ. ಈಶ್ವರನು ವಿಶೇಷಾಂಶವಾದರೆ ಜೀವಜಗತ್ತು ವಿಶೇಷಣಾಂಶ, ಅವನ ಗುಣ ರೂಪಗಳನ್ನು ಯಾವರೀತಿಯಲ್ಲಾದರೂ ನೆನೆಯಬಹುದು.

ಭಗವಂತನು ಜ್ಞಾನ ಶಕ್ತಿ ಬಲ ಐಶ್ವರ್ಯ ವೀರ್ಯ ತೇಜಸ್ಸುಗಳೆಂಬ ಪರತ್ವ ಸೂಚಕವಾದ ಷಡ್ಗುಣಗಳ ಜೊತೆಗೆ ಕಾರುಣ್ಯ, ಮಾಧುರ್ಯ, ಗಾಂಭೀರ್ಯ, ಸೌಶೀಲ್ಯ, ವಾತ್ಸಲ್ಯ, ಸೌಲಭ್ಯ, ಆರ್ಜವ ಗುಣಗಳನ್ನೂ ಹೊಂದಿದ್ದಾನೆ. ಲೋಕದ ಸಮಸ್ತರೂ ಮೇಲು ಕೀಳೆಂಬ ಭಾವನೆ, ತಾರತಮ್ಯ ಇಲ್ಲದೆ ಸೇವಿಸಲು ಸುಲಭನಾಗಿದ್ದಾನೆ. ಪ್ರಯೋಜನಗಳಿಗಾಗಿ ಭಜಿಸುವವರಿಗೆ ಪ್ರಯೋಜನಗಳನ್ನೆಲ್ಲ ಅನುಗ್ರಹಿಸಿದರೂ ಅವರಿಗೆ ದೂರನಾಗಿರುತ್ತಾನೆ. ಆದರೆ ಪ್ರಯೋಜನವನ್ನು ಆಶಿಸದೆ ಭಜಿಸುವವರಿಗೆ ಅವನು ಅತ್ಯಂತ ಹತ್ತಿರದಲ್ಲಿದ್ದು ಸುಲಭನಾಗಿರುತ್ತಾನೆ.

ಭಗವಂತನು ದೋಷಶೂನ್ಯನಾದ ಗುಣಶಾಲಿ. ಚ್ಯುತಿಗೊಳಗಾಗದ ಸ್ವಭಾವದವನಾಗಿ ಚಿದಚಿದ್ಗತ ದೋಷಗಳಿಂದ ಅಸಂಸ್ಪೃಷ್ಟನಾಗಿದ್ದಾನೆ. ಎಲ್ಲರಲ್ಲೂ ಸ್ನೇಹ ಭಾವವುಳ್ಳವನಾಗಿದ್ದಾನೆ. ಎಲ್ಲರನ್ನೂ ಸಮನಾಗಿ ಕಾಣುತ್ತಾನೆ. ಯಾರಲ್ಲೂ ಪಕ್ಷಪಾತ ಮಾಡುವುದಿಲ್ಲ. ಸರ್ವರ ಸರ್ವಾಭೀಷ್ಟಗಳನ್ನು ಕರುಣಿಸುತ್ತಾನೆ. ಆಶ್ರಿತ ವಿರೋಧಿಗಳ ನಿರಸನಕ್ಕಾಗಿ ಅನವರತವೂ ಆಯುಧಗಳನ್ನು ಎತ್ತಿ ಹಿಡಿದಿರುತ್ತಾನೆ.

ಅವಾಂಗ್ಮಾನಸ ಗೋಚರನಾಗಿರುವ ಭಗವಂತನು ತನ್ನ ಪರಮ ಸೌಶೀಲ್ಯದ ಕಾರಣ ಅರ್ಚಾವತಾರಿಯಾಗಿ ಈ ಲೋಕದಲ್ಲಿ ಎಲ್ಲ ಜನರೂ ಎಲ್ಲ ಕಾಲದಲ್ಲಿಯೂ ಸೇವಿಸಲು ಅನುಕೂಲವಾಗುವಂತೆ ಅನೇಕ ಪುಣ್ಯ ಕ್ಷೇತ್ರಗಳಲ್ಲಿ ನೆಲಸಿದ್ದಾನೆ. ಅಪಾರ ಪ್ರೀತಿ ಕಾರುಣ್ಯಗಳಿಂದ ಚೇತನರ ಮನಸ್ಸನ್ನು ಪ್ರವೇಶಿಸಿ, ಅಲ್ಲಿಯೇ ನೆಲಸಿ, ವಿಷಯಾಂತರದಲ್ಲಿ ಆಸಕ್ತಿ ಇಲ್ಲದಂತೆ ಮಾಡುತ್ತಾನೆ. ಭಗವಂತನ ಸಂಶ್ಲೇಷವು ಲಭಿಸಿ ಸ್ಥಿರವಾಗಿರಲು, ಶೇಷತ್ವಜ್ಞಾನ ವಿಕಾಸಗೊಳ್ಳಲು, ಅವನ ಕರುಣೆಯೇ ಕಾರಣ. ಅವನ ಪ್ರೇರಣೆಯಿಂದಲೇ ನಾವು ಅವನ ಕಲ್ಯಾಣಗುಣಗಳನ್ನು ಬಾಯಿನಿಂದ ಹಾಡಬಲ್ಲೆವು. ದಯೆಯ ಮೂರ್ತಿಯಾದ ಭಗವಂತನು, ಜನರು ತಮ್ಮನ್ನು ಉದ್ಧಾರ ಮಾಡಿಕೊಳ್ಳುವ ಉಪಾಯವನ್ನು ಪಾರ್ಥನ ಮೂಲಕ ಅವನ ಸಾರಥಿಯಾಗಿ ಲೋಕಕ್ಕೆ ಉಪದೇಶಿಸಿದ್ದಾನೆ.

ಸರ್ವಜ್ಞ, ಸರ್ವಶಕ್ತ, ಸರ್ವನಿಯಾಮಕ ಆಗಿರುವ ಪರಮಾತ್ಮನು ಸರ್ವ ರಕ್ಷಕನೂ ಆಗಿದ್ದಾನೆ. ಚೇತನರಿಗೆ ಆಶ್ರಯನಾಗಿರುವವನು ಅವನೊಬ್ಬನೇ. ತನ್ನ ಆಶ್ರಿತರ ಇಚ್ಛೆಗೆ ಅನುಗುಣವಾದ ರೂಪವನ್ನು ತಳೆದು ಅವರ ವಿರೋಧಿಗಳನ್ನು ನಾಶ ಮಾಡಿ ರಕ್ಷಿಸುವ ಸ್ವಭಾವ ಅವನದು.

ಸರ್ವೇಶ್ವರನಾದ ಶ್ರೀಮನ್ನಾರಾಯಣನು ಸಕಲ ನಯನ ಚಿತ್ತಾಪಕರ್ಷಕ, ಭುವನಮೋಹಕ ಆದ ದಿವ್ಯಾದ್ಭುತ ಸುಂದರ ರೂಪವನ್ನು ಹೊಂದಿದ್ದಾನೆ. ಅವನ ದಿವ್ಯ ಸೌಂದರ್ಯವು ವರ್ಣಿಸಲು ಅಸದಳವಾದುದು.

ಆಯತ ವಿಶಾಲ ಶೀತಲ ಮಧುರ ಧವಳಗಳೂ, ಅತಿ ಸುಂದರ ಸನ್ನಿವೇಶಗಳನ್ನುಳ್ಳವೂ ಆದ ಅರಳಿದ ತಾವರೆಯಂತಿರುವ ದಿವ್ಯ ನೇತ್ರಗಳು ; ಕಲ್ಪಕವೃಕ್ಷದ ಲತೆಯಂತಿರುವ ದಿವ್ಯನಾಸಿಕ ; ಸುಂದರವಾದ ಹವಳದ ಕೊಂಡಿಯಂತೆ, ಪಕ್ವವಾದ

ಓಂಡೆ ಹಣ್ಣಿನಂತೆ ಕೆಂಪಗಿರುವ ಅಧರ ಚೆಂದುಟಿ ; ಮನ್ಮಥನ ಕಬ್ಬಿನ ಬಿಲ್ಲಿನಂತಿರುವ ಹುಬ್ಬು; ಸ್ಥಿರವಾಗಿ ಹೊಳೆಯುವ ಮಿಂಚಿನಂತೆ, ಮುತ್ತುಗಳ ಹಾರದಂತೆ ಮಿರುಗುವ ಮಂದಹಾಸ ; ಚಿಗುರಿನಂತಿರುವ ಕಿವಿಗಳಲ್ಲಿ ಮಕರಾಕಾರವುಳ್ಳ ಕರ್ಣ ಕುಂಡಲಗಳು ; ರ್ಶನೀಯವಾದ ಶುಕ್ಲ ಪಕ್ಷದ ಅಷ್ಟಮಿ ಚಂದ್ರನನ್ನು ಅನುಕರಿಸುವ ಹಣೆ ; ರತಿಶಯ ದೀಪ್ತಿಯುಕ್ತವಾದ ಕಿರೀಟ ; ಸಂತಾಪವನ್ನೆಲ್ಲಾ ಹೋಗಲಾಡಿಸುವ ಾದಗಳು ; ಮರಕತಮಣಿಯಸ್ತಂಭಗಳಂತಿರುವ ದೀರ್ಘವಾದ ಚತುರ್ಬಾಹುಗಳು– ವುಗಳಿಂದ ಶೋಭಿಸುವ ನಿರ್ಮಲ, ಪರಿಪೂರ್ಣ, ವಿಶಿಷ್ಟನಾಗಿ ಬೆಳಗುತ್ತಿದ್ದಾನೆ. ವನನ್ನೂ ಅವನ ಸೌಂದರ್ಯವನ್ನೂ ಸ್ತುತಿಸದ ನಾಲಗೆಯು ವ್ಯರ್ಥ.

ಜಗತ್ತನ್ನು ರಕ್ಷಿಸುವ ಉದ್ದೇಶದಿಂದ, ದಿವ್ಯ ರೂಪನಾಮಗಳಿಂದ ಅನೇಕ ವತಾರಗಳನ್ನು ತಾಳುತ್ತಾನೆ. ಆಶ್ರಿತರನ್ನು ರಕ್ಷಿಸಿ, ತನ್ನನ್ನು ಸೇವಿಸುವ ಅಂತರಂಗ ಕ್ತರ ಮೇಲೆ ತನ್ನ ಕೃಪೆಯನ್ನು ವರ್ಷಿಸುತ್ತಾನೆ. ಸ್ವಾಮಿಯ ಸೌಲಭ್ಯವು ್ರಕಾಶಕ್ಕೆ ಬರುವುದು ಅವನ ಅವತಾರಗಳ ಲೀಲಾವಿಹಾರಗಳಲ್ಲಿ.

ಭಗವಂತನು ಎಲ್ಲ ಚೇತರುಗಳಿಗೂ ಪರಮ ಪ್ರಾಪ್ಯ, ಪ್ರಾಪಕ ಆಗಿದ್ದಾನೆ. ವಿದ್ಯಾಕಾಮ ಕರ್ಮಗಳನ್ನು ಹೋಗಲಾಡಿಸಿಕೊಂಡು ಭಗವಂತನನ್ನು ನಿರಂತರವಾಗಿ ನುಭವಿಸಲು ಚೇತನನು ಅವನ ದಯೆಯನ್ನೇ ಅವಲಂಬಿಸಬೇಕು. ಅವನನ್ನು ಪಡೆ ಯಲು ಇರುವ ಕ್ಲೇಶಗಳನ್ನೆಲ್ಲಾ ಪರಿಹರಿಸುವವನೂ ಅವನೇ. ಅವನ ಪಾದಗಳನ್ನು ಟ್ಟು ಬೇರೆ ರಕ್ಷಣೆ ನಮಗೆ ಇಲ್ಲ. ಅವನು ಸರ್ವಸುಲಭ, ಸ್ವಪ್ರಾಪ್ತಿಗೆ ಸ್ವಯಂ ಾಧನ ಆಗಿದ್ದಾನೆ.

## i) ಜೀವಾತ್ಮ

ಉಪಾಸ್ಯನಾದ ಪರಮಾತ್ಮನಿಗಿಂತ ಉಪಾಸಕನಾದ ಜೀವಾತ್ಮನು ಬೇರೆಯಾಗಿ ್ದಾನೆ. ಜ್ಞಾನ ಭಕ್ತಿಪ್ರದನಾದ ಪರಮಾತ್ಮನಿಗೂ, ಅವುಗಳನ್ನು ಪಡೆಯುವ ೀವಾತ್ಮನಿಗೂ ಭೇದವಿದೆ. ಚೇತನಾಚೇತನಗಳು ಭಗವಂತನಿಗೆ ಶರೀರವಾಗಿವೆ. ತ್ಮಸ್ವರೂಪವು ಅಚೇತನವಾದ ಪ್ರಕೃತಿಗಿಂತ ವಿಲಕ್ಷಣವಾಗಿದೆ. ಜೀವನು ಗವಂತನಿಗೆ ಶೇಷಭೂತನಾಗಿದ್ದಾನೆ. ಅವನು ಜ್ಞಾನಸ್ವರೂಪಿ ಮತ್ತು ಜ್ಞಾತಾ. ್ನ ಜ್ಞಾನದ ಮೂಲಕ ವ್ಯಾಪಕತ್ವ ಹೊಂದಿದ್ದಾನೆ. ಬಲಿಷ್ಠವಾದ ಪ್ರಕೃತಿಯ ಶದಿಂದ, ಜ್ಞಾನ ಮತ್ತು ಕರ್ಮೇಂದ್ರಿಯಗಳಿಂದ, ಹಿಂಸೆಯನ್ನು ಅನುಭವಿಸುತ್ತಿ ್ದಾನೆ. ಪ್ರಕೃತಿಯ ಸಂಬಂಧದಿಂದಲೇ ಇವನಿಗೆ ಭಗವಂತನ ಸಾಕ್ಷಾತ್ಕಾರ ಆಗಿಲ್ಲ. ಪ್ರತಿಬಂಧಕದ ವಿನಾಶವೇ ಆತ್ಮ ಸಾಕ್ಷಾತ್ಕಾರ ರೂಪವಾದ ಮೋಕ್ಷ. ದೇಹ, ಂದ್ರಿಯ, ಮನಸ್ಸು, ಪ್ರಾಣಗಳು ನಾಶವಾದರೂ ಆತ್ಮವು ನಾಶವಾಗದೆ ಸ್ಥಿರವಾಗಿ ುತ್ತದೆ. ಆತ್ಮಸ್ವರೂಪವನ್ನು ತಿಳಿಯಲು ಇಂದ್ರಿಯ ನಿಗ್ರಹ ಅವಶ್ಯಕ. ಅಲ್ಪ, ್ಥಿರ ಆದ ಪ್ರಕೃತಿಯ ಸಂಗವನ್ನು ಬಿಟ್ಟಾಗ ಆತ್ಮವು ಶುದ್ಧವಾಗುತ್ತದೆ. ಪ್ರಾಕೃತ

ವಾದ ಸರ್ವ ವಸ್ತುಗಳಲ್ಲಿಯೂ ಸಂಬಂಧವಿಲ್ಲದವರಾಗಿ ರುಚಿವಾಸನಾರಹಿತರಾಗಿದ್ದರೆ ಮಾತ್ರ ಮೋಕ್ಷ ಸಿಗುತ್ತದೆ.

ಜೀವ-ಈಶ್ವರುಗಳಲ್ಲಿ ಭೇದ ಸತ್ಯವಾದುದು. ಸರ್ವಶೇಷಿ, ಸರ್ವಾಧಾರ, ಸರ್ವನಿಯಾಮಕ, ಸರ್ವಶರೀರಿ ಆದ ಪರಮಾತ್ಮನನ್ನು ಸೇರುವುದು ಅಂದರೆ ಅವನ ಸಂಶ್ಲೇಷವನ್ನು ಪಡೆದು, ಸರ್ವದೇಶಕಾಲ ಅವಸ್ಥೆಗಳಲ್ಲಿ ಅವನಿಗೆ ಸರ್ವ ವಿಧವಾದ ನಿತ್ಯಕೈಂಕರ್ಯ ಮಾಡುವುದು, ಪರಮಾತ್ಮನಿಗೆ ಶೇಷನಾಗಿರುವ ಜೀವಿಯ ಪರಮ ಪುರುಷಾರ್ಥ. ಚೇತನರನ್ನು ರಕ್ಷಿಸುವ ಭಗವಂತನನ್ನು ಬಿಟ್ಟು ಜೀವಾತ್ಮನಿಗೆ ಬೇರೆ ಪ್ರಾಪ್ಯ ವಸ್ತುವಿಲ್ಲ.

ಐಹಿಕವಾದ ಐಶ್ವರ್ಯ, ಸ್ವರ್ಗಾದಿ ಪಾರಲೌಕಿಕ ಪ್ರಯೋಜನ, ಆತ್ಮಾನುಭವ ರೂಪವಾದ ಕೈವಲ್ಯ, ಇವು ಪುರುಷಾರ್ಥವಲ್ಲ. ಆದುದರಿಂದ ವಿಷಯ ಸುಖ, ಆತ್ಮಾನುಭವ ಸುಖ ಎರಡನ್ನೂ ತ್ಯಜಿಸಿ ಸ್ವಾಮಿಯಲ್ಲಿ ಭಗವತ್ಕೈಂಕರ್ಯವನ್ನು ಮಾತ್ರ ಬೇಡಿಕೊಳ್ಳಬೇಕು. ಭಗವಂತನ ಶೇಷತ್ವವು ಭಾಗವತ ಶೇಷತ್ವದಲ್ಲಿ ಪರ್ಯಾವಸಾನ ಹೊಂದಬೇಕು.

ಹೀಗೆ ದೇಹ, ಇಂದ್ರಿಯ, ಮನಸ್ಸು, ಬುದ್ಧಿಗಳಿಗಿಂತ ವಿಲಕ್ಷಣ, ಜ್ಞಾನ ಸ್ವರೂಪ, ಪರಮಾತ್ಮನಿಂದ ಬೇರೆ, ಭಗವಂತನಿಗೆ ಶೇಷ ಭೂತ ಆದ ಜೀವನಿಗೆ, ಭಗವಂತನ ನಿತ್ಯಕೈಂಕರ್ಯಕ್ಕೆ ಅನಾದಿಯಾದ ಅವನ ಪಾಪವು ಪ್ರತಿಬಂಧಕವಾಗಿದೆ. ಭಗವಂತನನ್ನು ಸೇವಿಸಿ ಅವನ ಪ್ರಸಾದದಿಂದ ಪ್ರತಿಬಂಧಕಗಳನ್ನು ಹೋಗಲಾಡಿಸಿ ಕೊಂಡು, ಅವನ ನಿತ್ಯಕೈಂಕರ್ಯ ಮಾಡುವುದೇ ಜೀವಿಯ ಪರಮ ಪುರುಷಾರ್ಥ.

### (iii) ಉಪಾಯ

ಪರಮ ಪುರುಷಾರ್ಥವಾದ ಭಗವಂತನನ್ನು ಪಡೆಯಲು ಅವನೇ ಪ್ರಧಾನ ಉಪಾಯ. ಭಗವಂತನು ಸಿದ್ಧೋಪಾಯನಾದರೆ, ಅವನ ಪ್ರಸನ್ನತೆಯನ್ನು ಗಳಿಸಲು ನಾವು ಅನುಸರಿಸುವ ಭಕ್ತಿ ಪ್ರಪತ್ತಿಗಳು ಸಾಧ್ಯೋಪಾಯಗಳು. ಸಕಲ ಫಲ ಗಳನ್ನೂ ಅನುಗ್ರಹಿಸಿ ನಮ್ಮನ್ನು ರಕ್ಷಿಸುವ ಭಗವಂತನ ನಿರವಧಿಕವಾದ ಕರುಣೆಯೇ ನಮ್ಮ ರಕ್ಷಣೆಗೆ ಮುಖ್ಯವಾದ ಕಾರಣ. ಭಕ್ತಿ ಪ್ರಪತ್ತಿಗಳ ಸಹಕಾರದಿಂದ ಅವನ ದಯೆ ನಮ್ಮ ಮೇಲೆ ಬೀಳುತ್ತದೆ.

ಜೀವಿಯ ಸ್ವರೂಪ, ಇಂದ್ರಿಯಗಳು ಮತ್ತು ಅವುಗಳ ವ್ಯಾಪಾರಗಳು ಭಗವಂತನ ಸಂಕಲ್ಪಕ್ಕೆ ಅಧೀನವಾಗಿರುವುದರಿಂದ ಜೀವನು ಸ್ವತಂತ್ರವಾಗಿ ಏನನ್ನೂ ಮಾಡಲಾರ. ಜೀವಿಯ ಪ್ರಯತ್ನಗಳೆಲ್ಲ ಪರಮಾತ್ಮನಿಂದ ಆಗಬೇಕೇ ಹೊರತು, ಸ್ವಪ್ರಯತ್ನದಿಂದಲ್ಲ. ಜೀವರು ಉಪಾಯಾನುಷ್ಠಾನವನ್ನು ಕೈಗೊಳ್ಳಲು, ಮೋಕ್ಷೋಪಾಯವನ್ನು ಅನುಷ್ಠಿಸಲು ಅವನ ಕರುಣೆ-ದಯೆಗಳೇ ಕಾರಣ.

ಚೇತನರು ಭಗವಂತನಲ್ಲಿ ಆಸಕ್ತಿ ಹೊಂದಿರದೆ. ಇತರ ವಿಚಾರಗಳಲ್ಲಿ ಆಸಕ್ತಿ

ರೆಗೆ ಸಂಸಾರ ತಪ್ಪಿದ್ದಲ್ಲ. ಭಗವಂತನಿಗೆ ವ್ಯತಿರಿಕ್ತವಾದ ವಿಷಯಗಳನ್ನು
ೆಂದು ತಿಳಿದು ಪೂರ್ಣವಾಗಿ ತ್ಯಜಿಸಬೇಕು. ಭಗವಂತನನ್ನು ಬಿಟ್ಟು
ಗಳಲ್ಲಿ ಅನಾಸಕ್ತಿಹೊಂದಿ, ಅವನನ್ನು ಪಡೆಯಬೇಕೆಂಬ ತೀವ್ರ ಆಕಾಂಕ್ಷೆ
ತಿ ಪೂರ್ವಕವಾಗಿ ವರಿಸುವುದು, ಅವನ್ನಲ್ಲೇ ತನ್ನನ್ನು ಸಮರ್ಪಿಸಿ
ಚೇತನನು ಮಾಡಬೇಕಾದ ಕೆಲಸ. ಜೀವಿಯು ಮೋಕ್ಷಕ್ಕಾಗಿ
ಸಾಧನಾನುಷ್ಠಾನಗಳಿಂದ ಪ್ರಸನ್ನನಾದ ಭಗವಂತನಿಂದ ಪರಮ ಫಲದ
ಪದರಿಂದ ಸಿದ್ಧೋಪಾಯ-ಸಾಧ್ಯೋಪಾಯಗಳೆರಡಕ್ಕೂ ಮಹತ್ವವಿದೆ.
ಸ್ಥಿರ ಆದ ಆತ್ಮನಿಗೆ ಕರ್ಮಾನುಗುಣವಾಗಿ ಬಂದಿರುವ ಕ್ಷಣಿಕವಾದ
ಕ್ತಿ ತಾಳದೆ, ದೇಹಾತ್ಮ ವಿವೇಕವನ್ನು ಪಡೆದುಕೊಳ್ಳಬೇಕು ಅಭ್ಯಾಸ,
ಮೂಲಕ ವಿಷಯಾಸಕ್ತಿಯನ್ನು ತ್ಯಾಗಮಾಡಿ, ಅಹಂಕಾರ ಮಮಕಾರ
ಕದಲ್ಲಿ ಹಾಗೂ ದೇಹಕ್ಕೆ ಸಂಬಂಧಿಸಿದವರಲ್ಲಿ ಅಭಿಮಾನವನ್ನು ಬಿಟ್ಟು
ಆಶ್ರಯಿಸಿ ಅವನಲ್ಲಿ ಶರಣಾಗತಿಮಾಡಬೇಕು. ತನ್ನನ್ನು ಪ್ರೀತಿ
ಸೇವಿಸುವವರನ್ನು ಭಗವಂತನೂ ಪ್ರೀತಿಸುತ್ತಾನೆ.

ನನ್ನು ಪಡೆಯಲು ಭಕ್ತಿ, ಪ್ರಪತ್ತಿಗಳೆಂಬ ಎರಡು ಮಾರ್ಗಗಳಿವೆ.
ನ್ನ ಜಯಿಸಿ ರಾಗದ್ವೇಷಗಳನ್ನು ಬಿಟ್ಟು, ಮನಸ್ಸನ್ನು ಶುದ್ಧಿಗೊಳಿಸಿ,
ಗೆ ಭಗವಂತನು ವಶನಾಗುತ್ತಾನೆ. ಇದಕ್ಕೆ ಭಗವಂತನ ದಯೆ ಆಗ
ರಿಯಗಳನ್ನು ಜಯಿಸಿದಾಗ ಆತ್ಮಪ್ರಜ್ಞೆ ಪ್ರತಿಷ್ಠಿತವಾಗಿ ಏಕಮನಸ್ಕ
ನನ್ನು ಭಜಿಸಲು ಶಕ್ತಿ ಬರುತ್ತದೆ. ಸ್ತುತಿಗೆ ವಿಷಯನಾದ ಭಗವಂತನ
ಮ ಸಂಕೀರ್ತನದಿಂದ ಭಗವತ್ಕೈಂಕರ್ಯ ವಿರೋಧಿಯಾದ ಪಾಪ
ಕೊಂಡು ಅವನನ್ನು ಸೇರುವವರಿಗೆ ಯಮಭಟರ ಭಯ ಇರುವುದಿಲ್ಲ.
ಾದ ಭಗವಂತನು ತನ್ನನ್ನು ಸ್ತುತಿಸುವವರಲ್ಲಿ ಅಪಾರವಾದ ಅನುಗ್ರಹ
ಭಗವಂತನ ನಾಮೋಚ್ಚಾರಣೆಯಷ್ಟೇ ಫಲವು ಅವನು ನೆಲಸಿರುವ
ಹೆಸರುಗಳನ್ನು ಹೇಳುವುದರಿಂದಲೂ ಸಿಗುತ್ತದೆ. ಭಗವಂತನ ಆತ್ಮ
ಕ್ಷಿಲ್ಲ ಮನಸ್ಸಿನಲ್ಲಿ ನೆನೆಯುವುದು, ನಿರಂತರವಾಗಿ ಸ್ಮರಣೆಮಾಡುವುದು
ಯ ಪ್ರಕಾರ. ಭಗವಂತನ ನಾಮಗಳನ್ನು ಸ್ಮರಿಸುವುದರಿಂದ ಪುಣ್ಯ
ಾದ ಕರ್ಮಗಳು, ಅಜ್ಞಾನ, ಅನ್ಯಥಾ ಜ್ಞಾನಗಳು, ರುಚಿವಾಸನೆ
ಹೆದರಿ ಓಡುತ್ತವೆ.

ನ ಅರ್ಚನೆ ಎಂದರೆ ಅವನನ್ನು ಮನಮುಟ್ಟಿ ಪೂಜಿಸಿ, ಭಜಿಸಿ,
ಾಡುವುದು. ಇದೂ ಭಕ್ತಿಯ ಪ್ರಕಾರ. ಭಗವಂತನನ್ನು ಅರ್ಘ್ಯ,
, ದೀಪ, ಪುಷ್ಪ, ಮಂತ್ರಗಳಿಂದ ಭಕ್ತಿಪೂರ್ವಕವಾಗಿ ಅರ್ಚಿಸಿ ಧನ್ಯ
ಅವನ ದಿವ್ಯನಾಮವನ್ನು ಉಚ್ಚರಿಸಿ, ಅವನ ಪಾದಗಳಿಗೆ ಪ್ರಣಾಮ
ಮನಕರಗುವಂತೆ ಅವನಿಗೆ ಮೊರೆಯಿಡಬೇಕು. ಚೇತನರ ಅಪೇಕ್ಷೆ

ಯನ್ನು ನಿರೀಕ್ಷಿಸಿ, ಆರ್ತಿಯಿಂದ ಬೇಡಿದ ನಂತರವೇ ಭಗವಂತನು ಅವರನ್ನು ರಕ್ಷಿಸು ತ್ತಾನೆ. ಗಾಢವಾದ ಭಕ್ತಿಗೆ ಮಾತ್ರ ಭಗವಂತನು ಒಲಿದು ತನ್ನ ಸಾಕ್ಷಾತ್ಕಾರವನ್ನು ನೀಡುತ್ತಾನೆ. ತನಗೆ ಪ್ರಿಯನಾದ ಭಕ್ತನ ಮನಸ್ಸಿನಲ್ಲಿ ಕರುಣಾಕರನಾದ ಭಗವಂತನು ನಿರಂತರವಾಗಿ ನೆಲೆಸುತ್ತಾನೆ. ಭಗವಂತನಲ್ಲಿ ಭಕ್ತಿ ಭಾವ ಬೆಳೆಯಬೇಕಾದರೆ ಅವನ ಅನುಗ್ರಹ ಬೇಕೇ ಬೇಕು. ನಾನು, ನನ್ನದು ಎಂಬ ಭಾವವನ್ನು ತ್ಯಜಿಸಿ, ಎಲ್ಲವೂ ಅವನದೇ ಎಂದು ತಿಳಿದು ಅವನಿಗೆ ಶರಣು ಹೋಗಬೇಕು. ಅವನಲ್ಲಿ ಅನನ್ಯ ಭಾವ ಹೊಂದಿ, ನಮ್ಮನ್ನೂ, ನಮ್ಮಲ್ಲಿರುವ ಸಮಸ್ತವನ್ನೂ ಸಮರ್ಪಣ ಮಾಡಿಕೊಳ್ಳದಿದ್ದರೆ, ನಾವು ಮಾಡುವ ಕರ್ಮ, ಜ್ಞಾನ, ಭಕ್ತಿಗಳು ಯಾವುವೂ ಸಿದ್ಧಿಸುವುದಿಲ್ಲ. ಪರಮ ವಿಶ್ವಾಸದಿಂದ ನಮ್ಮನ್ನು, ನಮ್ಮ ರಕ್ಷಣೆಯ ಭಾರವನ್ನು, ರಕ್ಷಣೆಯ ಫಲವನ್ನು ಭಗವಂತನಿಗೆ ಒಪ್ಪಿಸುವುದು ಶರಣಾಗತಿಯ ತಿರುಳು.

ಪ್ರಪತ್ತಿ ಅಥವಾ ಶರಣಾಗತಿಯು ಸುಕರ, ಸರ್ವಾಧಿಕಾರ ಆಗಿವೆ. ಭಗವಂತ ನಿಗೂ ತನಗೂ ಇರುವ ಸಂಬಂಧ, ತನ್ನ ಕಾರ್ಪಣ್ಯ, ಅವನಲ್ಲಿ ಮಹಾವಿಶ್ವಾಸ. ಇವು ಇದ್ದರೆ ಪ್ರಪತ್ತಿಗೆ ಸಾಕು. ಜ್ಞಾನಶಕ್ತ್ಯಾದಿಗಳಿಂದ ಚೇತನನು ನೇರವಾಗಿ ಭಗವಂತ ನಲ್ಲಿ ತನ್ನ ರಕ್ಷಣೆಯ ಭಾರವನ್ನು ಒಪ್ಪಿಸಬಹುದು. ಅವು ಇಲ್ಲದವನು ವೇದಾಂತ ಸಾರಜ್ಞ, ಪರಮೈಕಾಂತಿ ಆದ ಆಚಾರ್ಯರನ್ನು ಪುರುಷಕಾರವಾಗಿ ಆಶ್ರಯಿಸಿ ಅವರ ಮೂಲಕ ಭಗವಂತನನ್ನು ಆಶ್ರಯಿಸಬಹುದು. ಶರಣಾಗತಿಯಲ್ಲಿ ಸ್ವರೂಪ, ಭರ, ಫಲ ಸಮರ್ಪಣೆಗಳೆಲ್ಲ ಸೇರಿವೆ. ಜಾತಿ, ಕುಲ, ಲಿಂಗ, ಜ್ಞಾನಗಳ ಭೇದವಿಲ್ಲದೆ ಆರ್ತರಾದವರೆಲ್ಲಾ ಭಗವಂತನಲ್ಲಿ ಶರಣಾಗತಿ ಮಾಡಬಹುದು. ಭಗವಂತನು ಪ್ರಪನ್ನರಿಗೆ ಅವರವರ ಅಪೇಕ್ಷೆಗೆ ಅನುಗುಣವಾಗಿ ಮೋಕ್ಷನೀಡುತ್ತಾನೆ.

ಹೀಗೆ ಅನಾದಿಕಾಲದಿಂದ ಸಂಸಾರದಲ್ಲಿ ತೊಳಲುತ್ತಿರುವ ಚೇತನನು ತನ್ನ ಮತ್ತು ಪರಮಾತ್ಮನ ಸ್ವರೂಪವನ್ನು, ತನಗೂ ಅವನಿಗೂ ಇರುವ ನಿತ್ಯ ಸಂಬಂಧ ವನ್ನು ಅರಿತು, ಅವನ ಅನುಗ್ರಹದಿಂದಲೇ ಸಾಧನಾನುಷ್ಠಾನಗಳನ್ನು ಕೈಕೊಂಡು, ಅವನನ್ನು ಸ್ತುತಿಸಿ, ಭಜಿಸಿ, ಅವನಲ್ಲಿಯೇ ಅನನ್ಯಭಾವದಿಂದ ತನ್ನನ್ನೂ, ತನ್ನದೆಂಬು ದೆಲ್ಲವನ್ನೂ ಸಮರ್ಪಣಮಾಡಿ, ಅವನ ಪ್ರಸಾದವನ್ನು ಪಡೆದುಕೊಂಡು, ದೇಹಾವ ಸಾನಕಾಲದಲ್ಲಿ ಅರ್ಚಿರಾದಿ ಮಾರ್ಗದಲ್ಲಿ ಹೋಗಿ, ಸ್ವಸ್ವರೂಪಾವಿರ್ಭಾವವನ್ನು ಹೊಂದಿ, ಆ ಪರಮಾತ್ಮನ ದಿವ್ಯಾನುಭವದ ಹಾಗೂ ನಿತ್ಯಕೈಂಕರ್ಯದ ಮಹದಾ ನಂದವನ್ನು ಪಡೆದುಕೊಳ್ಳುವುದು ಹೇಗೆ ಎಂಬುದೆಲ್ಲವೂ ನಮ್ಮಾಳ್ವಾರರ ದಿವ್ಯ ಪ್ರಬಂಧವಾದ ತಿರುವಾಯ್ಮೊಳಿಯಲ್ಲಿ ಹಿಂದೆ ಹೇಳಿದಂತೆ ನಿರೂಪಿಸಲ್ಪಟ್ಟಿದೆ.

# ಪುರುಷಾರ್ಥಗಳು

ಪೌರುಷ–ಪ್ರಯತ್ನಗಳಿಂದ, ಉದ್ದೇಶಿತ ಗುರಿಯ ಕಡೆ ಧಾವಿಸುವ ಏಕಾಗ್ರತೆಯಿಂದ ಸಾಧಿಸಬೇಕಾದುದು ಪುರುಷಾರ್ಥ ಎನಿಸುತ್ತದೆ. ಈ ಪ್ರಪಂಚದಲ್ಲಿ ಜೀವಿಸಿರುವ ಪ್ರಾಣಿಗಳಿಗೆಲ್ಲ ಒಂದು ಧ್ಯೇಯ, ಗುರಿ ಇದ್ದು, ಅವು ಆಕಡೆ ಹೋಗಲು ಯತ್ನಿಸುತ್ತಿರುತ್ತವೆ. ಹಸುವಿಗೆ ಕಾಮಧೇನು, ಎತ್ತಿಗೆ ನಂದಿ, ಕುದುರೆಗೆ ಉಚ್ಚೈಶ್ರವಸ್ಸು, ಆನೆಗೆ ಐರಾವತ, ಮರಕ್ಕೆ ಕಲ್ಪವೃಕ್ಷ, ಹೂವಿಗೆ ಪಾರಿಜಾತ, ಪಕ್ಷಿಗೆ ಗರುಡ, ಹಾವಿಗೆ ಆದಿಶೇಷ–ಆಗಬೇಕೆಂಬ ಪರಮ ಗುರಿ ಇದ್ದು, ಅವು ಆ ಮಟ್ಟವನ್ನು ತಲಪಬೇಕೆಂದು ಅನವರತವೂ ಶ್ರಮಿಸುತ್ತವೆ. ವಿವೇಕ, ಸ್ವಾತಂತ್ರ್ಯಗಳಿಂದ ಮಾನವರಿಗೆ ಗುರಿ ಏನೆಂಬುದನ್ನು ಯಾರೂ ಶಾಶ್ವತವಾಗಿ ನಿರ್ಧರಿಸಿಲ್ಲ. ಆದರೂ ಹೇಯವಾದುದನ್ನು ತ್ಯಜಿಸಿ, ಪ್ರೇಯವಾದುದನ್ನು ಹಿತಮಿತವಾಗಿ ಭೋಗಿಸಿ, ಶ್ರೇಯವಾದುದನ್ನು ಸಂಪಾದಿಸುವುದೇ ಮಾನವ ಜೀವನದ ಗುರಿ ಎನ್ನಬಹುದು.

ಜೀವನದ ಗುರಿಯು ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಧರ್ಮವು ಸಾಧನ ಹಾಗೂ ಸಾಧ್ಯ ಆದುದು. ಅರ್ಥ, ಕಾಮಗಳ, ನಶ್ವರ, ಮಿತ, ದುಃಖಮಿಶ್ರ, ಅಶಾಶ್ವತ ಆದುವು. ಆದರೆ ಶಾಶ್ವತ, ಅಮಿತ, ದುಃಖಮಿಶ್ರವಿಲ್ಲದ, ಸುಖ ಎನಿಸಿದ, ಮೋಕ್ಷವೇ ನಿಜವಾದ ಪುರುಷಾರ್ಥ. ಸಮಾಜದ ಆರ್ಥಿಕ, ರಾಜಕೀಯ ರಂಗಗಳಲ್ಲಿ ಸೂಕ್ಷ್ಮ ಸ್ಥಾನಮಾನಗಳನ್ನು ಗಳಿಸುವುದು, ಇಂದ್ರಿಯ ಭೋಗದ ಸುಖ ಸಂತೋಷಗಳನ್ನು ಅನುಭವಿಸುವುದು, ಇವೆರಡೂ ನೀತಿಮಾರ್ಗದಿಂದಲೇ ಆಗಿ, ಕೊನೆಯಲ್ಲಿ ಅವಿದ್ಯೆ, ಕರ್ಮ, ವಾಸನಾರುಚಿ, ಪ್ರಕೃತಿ ಸಂಬಂಧ ಇವುಗಳಿಂದ ಅಂದರೆ ಇಹದ ಸಂಸಾರ ಚಕ್ರದ ಪುನರ್ಜನ್ಮದಿಂದ ಬಿಡುಗಡೆ ಹೊಂದುವ ಮುಕ್ತಿಗಾಗಿ ಶ್ರಮಿಸಬೇಕೆಂಬುದೇ ಉಪನಿಷತ್ತು, ಗೀತೆ, ಬ್ರಹ್ಮಸೂತ್ರ ಎಂಬೀ ಪ್ರಸ್ಥಾನತ್ರಯದಲ್ಲಿನ ಉಪದೇಶಸಾರ. ದೇಹ ಪೋಷಣೆಗಾಗಿ ಲೌಕಿಕ ಕರ್ಮ, ಆತ್ಮೋದ್ಧಾರಕ್ಕಾಗಿ ಆಧ್ಯಾತ್ಮಿಕ ಸಾಧನೆ, ಎರಡೂ ಇರುವ ಜೀವನ ಕ್ರಮವನ್ನು ಮಾನವರೆಲ್ಲರೂ ಅವಲಂಬಿಸಬೇಕು.

## ೧. ಧರ್ಮ

ಧಾರಣೆ ಮಾಡಿಕೊಂಡ ನಿಯಮ, ಕರ್ತವ್ಯ, ಬುದ್ಧಿ ಪೂರ್ವಕವಾಗಿ ಸ್ವೀಕರಿಸಿದ

ನಡವಳಿಕೆ, ಧರ್ಮ ಎನಿಸುತ್ತದೆ. ಐಹಿಕ ವಿಕಾಸಕ್ಕಾಗಿ ಇಹ ಲೋಕದಲ್ಲಿ ಪಾಲನೆ-ಪೋಷಣೆ ನೀಡುವ ಶಕ್ತಿಯನ್ನು ಪಡೆದಿದ್ದು, ಸಂಪೂರ್ಣ ಮಾನವ ಜಾತಿಗೆ ಬೇಕಾದ ಆಧ್ಯಾತ್ಮಿಕ ವಿಕಾಸವನ್ನು ಸಾಧಿಸಿ, ಪರಲೋಕವನ್ನು ಗಳಿಸಿಕೊಡಲು ಸಾಧಕವಾದ ಮಾನವ ಪಥವೇ ಧರ್ಮ. ಈ ಲೋಕವೆಲ್ಲ ಪರಮಾತ್ಮನ ಶರೀರವಾದುದರಿಂದ ಇದರ ಮೂಲಕವೇ ಅವನನ್ನು ಪಡೆಯಲೆತ್ನಿಸುವುದು ಸಾಧುವಾದುದು. ದೇವರಿಗಾಗಿ, ದೇವರಿಂದ, ದೇವರಲ್ಲಿ ಇರುವ ಈ ಇಹ ಜೀವನದಿಂದ ದೂರಾಗಲು ಯತ್ನಿಸುವುದು ಸರಿಯಲ್ಲ. ಇಹದಲ್ಲಿ ತಾನೂ ಸೊಗಸಾಗಿ ಬಾಳಿ, ನೆರೆಯವರನ್ನೂ ಸೊಗಸಾಗಿ ಬಾಳಿಸಿ, ಪರದಲ್ಲಿ ಅವಿಚ್ಛಿನ್ನವಾದ ಆನಂದವನ್ನು ಪಡೆಯುವ ಜೀವನ ಕಲೆ-ಸಾಮರ್ಥ್ಯಗಳ ದಿವ್ಯಮಾರ್ಗವನ್ನೇ ಧರ್ಮ ಎನ್ನಬಹುದು.

ಮಾನವ ಹೃದಯದಲ್ಲಿ ಹಾಗೂ ಈ ಜಗತ್ತಿನಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಭಗವಂತನನ್ನು ಪಡೆಯಲು ಅಂದರೆ ಬ್ರಹ್ಮ ಸಾಕ್ಷಾತ್ಕಾರವಾಗಲು ಕರ್ಮ, ಜ್ಞಾನ, ಉಪಾಸನೆಗಳು ಉತ್ತಮವಾದ ಉಪಾಯಗಳು. ಸತ್ಕರ್ಮದಲ್ಲಿ ನಿರತನಾದವನು ರಾಗದ್ವೇಷ, ಕಾಮಕ್ರೋಧಾದಿಗಳಿಗೆ ಅಡಿಯಾಗಲಾರ. ಜ್ಞಾನಿಯಾದವನು ಉದಾರಿಯಾಗಿರುತ್ತಾನೆ. ಉಪಾಸಕನು ಎಲ್ಲರಲ್ಲಿಯೂ ಪ್ರೇಮವನ್ನೇ ತೋರಿಸುತ್ತಾನೆ. ತಾನೊಬ್ಬ ದಕ್ಷ, ಒಳ್ಳೆಯವ, ಬುದ್ಧಿವಂತ ಆದರೆ ಸಾಕು ಎಂಬ ಅಲ್ಪ ತೃಪ್ತಿ, ಸ್ವಾರ್ಥಗಳನ್ನು ಹೊಂದದೆ, ಮಾನವರೆಲ್ಲರನ್ನೂ ಶೂರ, ಬುದ್ಧಿವಂತ ಒಳ್ಳೆಯ ಆಗಿ ಮಾಡಬೇಕಾದರೆ, ಎಲ್ಲರಲ್ಲಿಯೂ ಪರಿಶುದ್ಧವಾದ ಕರ್ಮಾನುಷ್ಠಾನ ನಿಷ್ಕಲ್ಮಷವಾದ ಪೂರ್ಣ ಜ್ಞಾನ, ಭಗವಂತನ ಉಪಾಸನೆ ಅಥವಾ ಭಕ್ತಿಯ ಆಚರಣೆ ಇರುವಂತಹ ಅವ್ಯವಸ್ಥೆಯನ್ನು ಮಾಡಬೇಕು. ಇವು ಮೂರೂ ಇರುವ ಕಾರಣ ವೇದಗಳು ಧರ್ಮಕ್ಕೆ ಆಧಾರವಾಗಿವೆ.

1) ಜೀವ, ಜಗತ್ತು, ಜಗನ್ನಿಯಾಮಕ ಎಂಬ ಮೂರು ತತ್ತ್ವವನ್ನು ಸರಿಯಾಗಿ ಅರಿತುಕೊಳ್ಳುವುದೇ ಜ್ಞಾನ. ಜೀವಾತ್ಮನ ಜ್ಞಾನದಿಂದ ವೈಯಕ್ತಿಕ ಸುಧಾರಣೆ, ಜಗತ್ತಿನ ಜ್ಞಾನದಿಂದ ಸಾಮಾಜಿಕ ಸುಧಾರಣೆ, ಜಗನ್ನಿಯಾಮಕನ ಜ್ಞಾನದಿಂದ ಮೋಕ್ಷ ಸಾಧನೆ ಆಗಿ ಜೀವನವು ಸಾರ್ಥಕ, ಸಫಲ ಆಗುತ್ತದೆ. ಜೀವವು ಪರಮಾತ್ಮನ ಶೇಷ, ಅಧೀನ ಆಗಿದ್ದು, ಅವನನ್ನೇ ಅವಲಂಬಿಸುತ್ತ, ಅವನ ಉದ್ದೇಶ ಪೂರೈಕೆಗಾಗಿಯೇ ಇರುತ್ತದೆ ಎಂಬ ಜ್ಞಾನ ಜೀವನದಲ್ಲಿ ಉದಯಿಸಿದರೆ, ಪರಮಾತ್ಮನಲ್ಲದೆ ಇತರ ವಸ್ತು, ವ್ಯಕ್ತಿ, ವಿಷಯಗಳಲ್ಲಿ ವೈರಾಗ್ಯ ಹುಟ್ಟಿ, ಚಿತ್ತಶುದ್ಧಿ, ಇಂದ್ರಿಯಗಳ ಮೇಲೆ ಹತೋಟಿ, ಹರಿತವಾದ ಬುದ್ಧಿ, ಸಮಾಧಾನವಾದ ಮನಸ್ಸು ಬರುವ ಸಂಭವ ಉಂಟು. ವಿಚಾರ ಪ್ರಧಾನವಾದ ಈ ಜ್ಞಾನ ಮಾರ್ಗ ಬಹು ಕಠಿಣ.

2) ಶರೀರದಲ್ಲಿ ಆತ್ಮನು ನೆಲಸಿರುವವರೆಗೆ ಸಮಾಜದಿಂದ ಜೀವಿಯು ಏನಾದರೂ ತೆಗೆದುಕೊಳ್ಳುತ್ತಲೇ ಇರಬೇಕಾದುದರಿಂದ, ವ್ಯಕ್ತಿಯೂ ಸಮಾಜಕ್ಕೆ ಏನಾದರೂ ಕೊಡುತ್ತಿರಬೇಕು. ತನಗೆ ಅಗತ್ಯವಿದ್ದಷ್ಟು ತೆಗೆದುಕೊಂಡು ತನ್ನಿಂದ

ಸಾಧ್ಯವಿದ್ದಷ್ಟು ಇತರರಿಗೆ ನೀಡಬೇಕು. ಬೇರೆಯವರಿಗಾಗಿ ಏನನ್ನೂ ಕೊಡದೆ, ಬೇರೆಯವರಿಂದ ಏನನ್ನೂ ಪಡೆಯಬಾರದು. ಜಗತ್ತಿಗೆ ಋಣಿ, ಹೊರೆ ಆಗಿ ಬಾಳುವುದು ತರವಲ್ಲ. ದೇವ, ಋಷಿ, ಪಿತೃ, ನರ, ಭೂತ ಎಂಬೀ ಐದು ಮೂಲಗಳಿಂದ ನಾವು ಪಡೆಯುತ್ತಿರುವ ಸಹಾಯಕ್ಕಾಗಿ ನಾವು ನಮ್ಮ ಕರ್ತವ್ಯ ಕರ್ಮಗಳನ್ನೆಲ್ಲ ಕೈಂಕರ್ಯ ಅಥವಾ ಯಜ್ಞದೃಷ್ಟಿಯಿಂದ ಮಾಡಿ ಕೃತಕೃತ್ಯ, ಋಣಮುಕ್ತ ಆಗಬೇಕು. ಜ್ಞಾನವು ಸಾರ್ಥಕವಾಗಬೇಕಾದರೆ, ಜ್ಞಾನಕ್ಕೆ ಅನುಗುಣವಾದ ನಿತ್ಯ, ನೈಮಿತ್ತಿಕ, ಐಚ್ಛಿಕ, ಸತ್ಕರ್ಮಗಳನ್ನು ಮಾಡುತ್ತ, ಪುಣ್ಯ ಸಂಪಾದನೆ ಮಾಡಿ ಬದುಕಬೇಕು. ನಿಷಿದ್ಧವಲ್ಲದ, ಕಾಮ್ಯಕವಲ್ಲದ, ಫಲಸಂಗವಿಲ್ಲದ, ಶಕ್ತಿಗೆ ಅನುಸಾರವಾದ, ಕರ್ಮ ಮಾಡುವುದೇ ಕರ್ಮಯೋಗ. ಇದರಿಂದ ಚಿತ್ತಶುದ್ಧಿಯಾಗಿ ಜ್ಞಾನ ಉಂಟಾಗಿ ಭಕ್ತಿ ಹುಟ್ಟುತ್ತದೆ.

3) ಬೇಟೆಗಾರನ ಶಬ್ದದಿಂದ ಜಿಂಕೆ, ಹೆಣ್ಣಾನೆಯ ಸ್ಪರ್ಶದಿಂದ ಗಂಡಾನೆ, ದೀಪದ ರೂಪದಿಂದ ದೀಪದ ಹುಳು, ಹೂವಿನ ಪರಿಮಳ ಗಂಧದಿಂದ ದುಂಬಿ, ಗಾಳಕ್ಕೆ ಸಿಕ್ಕಿಸಿದ ಹುಳುವಿನ ರುಚಿಯಿಂದ ಮೀನು, ಹೀಗೆ ಐದು ವಿಷಯಗಳ ಇಂದ್ರಿಯಗಳಿಗೆ ಅಧೀನರಾದವರ ಬದುಕು ಹೀನಾಯವಾಗುತ್ತದೆ. ಆದುದರಿಂದ ಶಬ್ದ, ಸ್ಪರ್ಶ, ರೂಪ, ಗಂಧ, ರಸ ಎಂಬ ಐದು ಇಂದ್ರಿಯ ವಿಷಯಗಳಿಂದ ಚಿತ್ತವನ್ನು ಬೇರ್ಪಡಿಸಿ, ಅದನ್ನು ಒಳಕ್ಕೆ ಎಳೆದುಕೊಂಡು ಸರ್ವವ್ಯಾಪಕ, ಸರ್ವಶರಣ್ಯ ಆದ ಪರಮಾತ್ಮನಲ್ಲಿ ಏಕಾಗ್ರತೆಯಿಂದ ನಿಲ್ಲಿಸಿ, ಅವನ ಸಾಮೀಪ್ಯವನ್ನು ಅನುಭವಿಸುವ ಕ್ರಿಯೆಯೇ ಉಪಾಸನೆ ಅಥವಾ ಭಕ್ತಿ. ಜೀವಜಗತ್ತುಗಳ ವಿಕಾಸದ ರಹಸ್ಯ ಶಕ್ತಿಗೆ, ಮಾನವನ ಕೃತಜ್ಞತಾ ಭಾವನೆಯ ಗೌರವಾರ್ಪಣೆಯೇ ಆರಾಧನೆ, ಪೂಜೆ ಎನಿಸುತ್ತದೆ. ಭೂಮಿ, ಪ್ರಾಣಿ, ಮಾನವ, ಲಿಂಗ, ದೈವ ಎಂದು ಐದು ಸಂಬಂಧದ ವಸ್ತುಗಳು ಪೂಜೆಗಾಗಿ ಆರಿಸಲ್ಪಡುತ್ತವೆ. ಪೂಜೆಯಲ್ಲಿ ಧ್ಯಾನಮಾಡಲು ಒಂದು ಸ್ಥಳ, ಒಂದು ಕಾಲ, ಒಂದು ಮೂರ್ತಿ, ಒಂದು ಮಂತ್ರ ಅಥವಾ ಮಹಾವಾಕ್ಯ ಇವು ನಾಲ್ಕು ಮುಖ್ಯ ಸಾಧನಗಳು.

ಒಟ್ಟಿನಲ್ಲಿ ಮಾನವನಲ್ಲಿರುವ ಒಂದೇ ಅಂತರಂಗದ್ರವ್ಯವು ನಿರ್ದಿಷ್ಟ ವಸ್ತುವೊಂದರ ಕಡೆಗೆ, ಬುದ್ಧಿಯ ದ್ವಾರದಿಂದ ಹರಿದಾಗ ಜ್ಞಾನ, ದೇಹೇಂದ್ರಿಯಾದಿ ದ್ವಾರದಿಂದ ಹರಿದಾಗ ಕರ್ಮ, ಹೃದಯದದ್ವಾರದಿಂದ ಹರಿದಾಗ ಭಕ್ತಿ ಅಥವಾ ಉಪಾಸನೆ ಎನಿಸುತ್ತದೆ. ಯಾವುದು ಸುಲಭವೋ ಅದನ್ನು ಆರಿಸಿ ಅನುಸರಿಸಬಹುದು.

ಜ್ಞಾನವು ಧರ್ಮದ ತಲೆ ಅಥವಾ ಶಿರಸ್ಸು, ಕರ್ಮವು ಕೈಕಾಲು ಅಥವಾ ಕರ, ಉಪಾಸನೆಯು ಹೃದಯ. ವ್ಯಕ್ತಿಯು ಶಿರದ ವಿಕಾಸದಿಂದ ಮೇಧಾವಿ, ಕರದ ವಿಕಾಸದಿಂದ ಶೂರ, ಹೃದಯದ ವಿಕಾಸದಿಂದ ಸಂತ ಆಗುತ್ತಾನೆ. ಹೀಗೆ ಶಿರಕರ ಹೃದಯ ಈ ಮೂರೂ ವಿಕಾಸಗೊಂಡ ಮಾನವರು ಮಾತ್ರ ಆತ್ಮೋದ್ಧಾರ ಮತ್ತು ಲೋಕಕಲ್ಯಾಣ ಎರಡನ್ನೂ ಸಾಧಿಸಬಲ್ಲರು. ಇಂತಹ ವ್ಯಕ್ತಿಗಳು ಹೆಚ್ಚಾಗಿದ್ದರೆ

ದೇಶಕ್ಕೆ ಒಳ್ಳೆಯ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ದೊರಕಿ ಜನರಿಗೆ ಸುಖ ಶಾಂತಿ ಸಮಾಧಾನಗಳು ಸಿಗುವುದರಲ್ಲಿ ಸಂದೇಹವಿಲ್ಲ.

## 2. ಅರ್ಥ

ಸಾಧನ, ಸಲಕರಣೆಗಳು ಅರ್ಥ ಎನಿಸುತ್ತವೆ. ಪುರುಷಾರ್ಥಗಳಲ್ಲಿ ಇದು ಬಹು ಮುಖ್ಯವಾದುದು. ಭೌತಿಕ ಆವಶ್ಯಕತೆಗಳನ್ನು ಪೂರೈಸಿಕೊಂಡು, ಸುಖ ಶಾಂತಿ ಸಂತೋಷಗಳಿಂದ ಜೀವಿಸಿ, ಪರರಿಗೆ ಸೇವೆ ಸಲ್ಲಿಸಲು ಹಣ ಸಂಪಾದನೆಯು ಅನಿವಾರ್ಯ ಹಾಗೂ ಅವಶ್ಯಕ. ಆದರೆ ಈ ಸಂಪಾದನೆಯು ಅನ್ಯಾಯ ಮಾರ್ಗ ದಲ್ಲಿ ಅಸತ್ಯ ವ್ಯವಹಾರದಿಂದ, ಜೂಜು, ಲಾಟರಿ, ಕಾಳಸಂತೆಗಳ ಮೂಲಕ, ಪರರನ್ನು ವಂಚಿಸಿ, ಶೋಷಿಸಿ ಆಗದೆ, ಧರ್ಮಮಾರ್ಗದಿಂದಲೇ ಆಗಬೇಕು ಎಂಬುದೇ ಎಲ್ಲರ ಹಿರಿಯಾಸೆ.

## 3. ಕಾಮ

ಕಾಮ ಎಂದರೆ ವಿಷಯಾಭಿಲಾಷೆ, ಇಚ್ಛೆ ಎಂದರ್ಥ. ಇದು ಪುರುಷಾರ್ಥಗಳಲ್ಲಿ ಬಹಳ ಪ್ರಭಾವಶಾಲಿಯಾದುದು. ಕಾಮವು ಯಶಸ್ವಿ, ಸುಖಕರ ಆಗಿ ನಡೆಯಲು ಅರ್ಥವು ಅಗತ್ಯವಾದುದು. ಈ ಅರ್ಥ ಕಾಮಗಳೆರಡೂ ಧರ್ಮದ ಮಾರ್ಗದರ್ಶನದಲ್ಲಿ ಹೋಗಬೇಕು. ಧರ್ಮಮಾರ್ಗದಿಂದ ಸಂಪಾದಿಸಿದ ಹಣವನ್ನು ಆತ್ಮೋದ್ಧಾರಕ್ಕೆ ಘಾತಕವಾಗದಂತೆ, ಪರರಿಗೆ ಅಹಿತವಾಗದಂತೆ, ಉಪಯೋಗಿಸುವ ಆಸೆ, ಇಚ್ಛೆ ಎಲ್ಲರಲ್ಲೂ ಬರಬೇಕು. ಪಾಪಮಯವಾದ ಇಚ್ಛೆಗಳಿಗೆ ಕಾಮದಲ್ಲಿ ಎಡೆಯಿರಬಾರದು. ಐಹಿಕ ಜೀವನವನ್ನು ಸರಸ, ಸುಂದರ, ಸುಖ, ಶಾಂತಿಮಯ ಆಗಿಸಲು ಅವಶ್ಯವಾದ ಇಚ್ಛೆಗಳು ಇದ್ದರೆ ಅದು ತಪ್ಪಾಗಲಾರದು. ಗಾರ್ಹಸ್ಥ್ಯ ಆಶ್ರಮದಲ್ಲಿ ಉಂಟಾಗುವ ಸ್ತ್ರೀ ಪುರುಷರ ದೇಹ ಸಂಬಂಧದ ಇಚ್ಛೆಯೂ ಸಹ ಕಾಮವೇ. ಆದರೆ ಸ್ತ್ರೀ ಪುರುಷರ ಲೈಂಗಿಕ ಜೀವನವು ಉಚ್ಛೃಂಖಲವಾಗದೆ ಸಂಯಮದಿಂದ ನಡೆದರೆ ಆಗ ಅದು ಮೋಕ್ಷಕ್ಕೆ ಬಾಧಕವಾಗುವುದಿಲ್ಲ. ಭೂಲೋಕ–ಸ್ವರ್ಗ ಲೋಕಗಳ ಭೋಗಭಾಗ್ಯಗಳು ಶಾಶ್ವತವಾದುವಲ್ಲವಾದಕಾರಣ, ಮಾನವರು ಶಾಶ್ವತ ಸುಖವನ್ನು ಹೊಂದಲು ಆಶಿಸ ಬೇಕು, ಇಚ್ಛಿಸಬೇಕು.

## 4. ಮೋಕ್ಷ

ಇದೇ ಶ್ರೇಷ್ಠವಾದ ಪುರುಷಾರ್ಥ. ಅವಿದ್ಯೆ ಮತ್ತು ದುಷ್ಕರ್ಮಗಳ ಫಲವಾಗಿ ಉಂಟಾದ ಆಶಾಪಾಶ, ಹುಟ್ಟು ಸಾವು, ಭೀತಿವ್ಯಾಮೋಹ, ಕಷ್ಟನಿಷ್ಠುರ, ಚಿಂತೆ ಉಪದ್ರವ, ಅಹಂಕಾರ ಮಮಕಾರ, ಪುಣ್ಯಪಾಪ, ಇವುಗಳಿರುವ ಸಂಸಾರ ಬಂಧನ ದಿಂದ ಬಿಡುಗಡೆ ಸಿಕ್ಕಿ, ಬಾಳು ಹಗುರವಾದ ಹೂವಿನ ಹೊರೆ ಎಂದು ಮನಸ್ಸಿಗೆ

ಅನಿಸಿದಾಗ, ಮೋಕ್ಷ ಸಿಕ್ಕಿದೆ ಎಂದು ಭಾವಿಸಬಹುದು. ಮೋಕ್ಷವೆಂಬ ಸ್ಥಿತಿಯ ಜೀವಾತ್ಮನು, ಪ್ರಾಕೃತಿಕ ಪ್ರಕೋಪಗಳಿಂದ, ದುಷ್ಟ ಪ್ರಾಣಿಗಳಿಂದ, ಸ್ವಂತ ಅಜ್ಞಾ ದಿಂದಾಗುವ ತಾಪಗಳಿಂದ, ಇಂದ್ರಿಯ ಮನಸ್ಸು ಬುದ್ಧಿಗಳ ಬಿಗಿಮುಷ್ಟಿಯಿಂ ದೇಹ ಬಂಧನದಿಂದ, ಬಿಡುಗಡೆ ಹೊಂದಿ, ಬ್ರಹ್ಮಾನಂದವನ್ನು ಅನುಭವಿಸು ಅಶರೀರನಾಗಿರುತ್ತಾನೆ. ಈ ಸ್ಥಿತಿಯನ್ನು ತಲಪಬೇಕಾದರೆ ಜ್ಞಾನ ಕರ್ಮ ಉಪಾ ಗಳಿಂದ ಕೂಡಿದ ಧಾರ್ಮಿಕ ಜೀವನವನ್ನು ಕಾಯಾ ವಾಚಾ ಮನಸಾ ಅಂದರೆ ತ್ರಿಕರ ಶುದ್ಧಿಯಿಂದ ಸರಿಯಾಗಿ ಪಾಲಿಸಬೇಕು. ಆದಿ ಭೌತಿಕ ತಾಪ-ಕಾಮನೆಗಳ ವಿವೇಚ ಆಧ್ಯಾತ್ಮಿಕ ತೃಪ್ತಿ ಆನಂದಗಳ ಪ್ರಾಪ್ತಿ, ಆಗುವುದೇ ಮೋಕ್ಷಾವಸ್ಥೆ ಎನ್ನಬಹುದು.

ಮುಖ್ಯವಾಗಿ ತಾನು ಅನುಸರಿಸಬೇಕಾದ ಶ್ರೇಷ್ಠ ಮಾರ್ಗವನ್ನು ಧಾರ ಮಾಡಿಕೊಂಡು, ಸಾಧನ ಸಲಕರಣೆಗಳ ಮೂಲಕ ವಿಷಯಾಭಿಲಾಷೆಯನ್ನು ಪೂರ್ತಿ ಕೊಂಡ ಬಳಿಕ, ಜನನ ಮರಣಗಳ ಸಂಕೋಲೆಯಿಂದ ಬಿಡುಗಡೆ ಹೊಂದುವು ಪುರುಷಾರ್ಥದ ಮುಖ್ಯ ಸಾರಾಂಶ.

# ಮೋಕ್ಷ ಸಾಧನಗಳು

## 1. ವರ್ಣಧರ್ಮ

ಒಂದು ವರ್ಗಕ್ಕೆ ಸೇರಿದ ವ್ಯಕ್ತಿ, ತನ್ನ ನಿರ್ದಿಷ್ಟ ಕೆಲಸವನ್ನು ಮಾಡುವುದರಿಂದ, ಎಲ್ಲ ವರ್ಗಗಳಿಗೂ ಅವರವರ ಆವಶ್ಯಕತೆಗಳಿಗನುಗುಣವಾಗಿ ಸೇವೆ ಸಿಕ್ಕಂತಾಗುತ್ತದೆ. ಇದರಿಂದ ಸಮಾಜದ ದಕ್ಷತೆ, ಕ್ಷೇಮ, ಸುಗಮ ಕಾರ್ಯನಿರ್ವಹಣೆ, ಸಮೃದ್ಧಿ, ಭೌತಿಕ ಆಧ್ಯಾತ್ಮಿಕ ಪೂರ್ಣತೆ ಸಾಧ್ಯವಾಗುತ್ತದೆ. ಸಮಷ್ಟಿ ಲೋಕದ ಹೆಚ್ಚಿನ ಪ್ರಯೋಜನ ದೊಂದಿಗೆ ವ್ಯಷ್ಟಿಯ ಉತ್ಕರ್ಷವನ್ನೂ ಸಾಧಿಸಬೇಕೆಂಬುದೇ ವರ್ಣಧರ್ಮದ ಆಧಾರ ತತ್ತ್ವ. ಮಾನವರ ಈ ಚತುರ್ಭಾಗ ವ್ಯವಸ್ಥೆಯು ಸ್ವಾಭಾವಿಕವಾದುದು ಹಾಗೂ ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವಂತಹುದು. ಒಂದು ರಾಷ್ಟ್ರವು ಅಭಿವೃದ್ಧಿ ಹೊಂದಿ ಸುಖ ಶಾಂತಿಗಳಿಂದ ಇರಬೇಕಾದರೆ ಅಲ್ಲಿ ನಾಲ್ಕು ಬಗೆಯ ಜನರು ಇದ್ದು, ಅವರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಅಭಿರುಚಿ–ಯೋಗ್ಯತೆಗಳಿಗೆ ತಕ್ಕಂತೆ, ತಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ಮಾಡುತ್ತಿರಬೇಕು. ಇಲ್ಲದಿದ್ದರೆ ದೇಶದಲ್ಲಿ ಅಭದ್ರತೆ, ಅನಾಯಕತೆ ಉಂಟಾಗುವುದು ಸಹಜ.

ಯಾವ ವೃತ್ತಿಯಲ್ಲಿ ನಮಗೆ ಅಭಿರುಚಿ–ಆಸಕ್ತಿಗಳು ಇರುತ್ತದೆಯೋ, ಯಾವುದ ಕ್ಕಾಗಿ ನಾವು ಅನೇಕ ವರ್ಷಗಳ ಕಾಲ ತರಬೇತು ತೆಗೆದುಕೊಂಡಿದ್ದೇವೆಯೋ, ಅದನ್ನು ಬಿಡದೆ, ಅದಕ್ಕಾಗಿ ನಮ್ಮ ಸರ್ವಸ್ವವನ್ನೂ ಧಾರೆ ಎರೆಯಲು ಸಿದ್ಧರಿರಬೇಕು. ಪ್ರತಿ ಯೊಂದು ವೃತ್ತಿಗೂ ಸಂಬಂಧಿಸಿರುವ ಧರ್ಮವನ್ನು ಅದರಲ್ಲಿ ಇರುವವರೆಲ್ಲರೂ ಅತ್ಯವಶ್ಯಕವಾಗಿ ಪಾಲಿಸಬೇಕು.

ಮನುಷ್ಯನಿಗೆ ಯಾವಯಾವ ಗುಣಗಳು, ಯಾವಯಾವ ಶಕ್ತಿಗಳು, ಎಂಥೆಂಥ ಒಲವುಗಳು, ಎಂಥೆಂಥ ಹುಮ್ಮಸ್ಸುಗಳು, ಸ್ವಾಭಾವಿಕವಾಗಿಯೇ ಬಂದಿರುತ್ತವೆಯೋ, ಆಗುಣ ಶಕ್ತಿಗಳನ್ನು ಹಾಗೂ ಅಂತಃಪ್ರವೃತ್ತಿಗಳನ್ನು, ಅವನು ಲೋಕದ ಹಿತ ಪ್ರಯೋಜನಗಳಿಗಾಗಿ ಪೂರ್ಣವಾಗಿ ವಿನಿಯೋಗಿಸುವುದು ಅವನ ಧರ್ಮಕರ್ತವ್ಯ. ಸ್ವಧರ್ಮದಲ್ಲಿ ಅವನಿಗೆ ಪ್ರಕೃತಿಯು ಬೆಂಬಲವಿದ್ದು, ಅವನು ಮಾಡುವ ಕೆಲಸಗಳೆಲ್ಲ ಬೇಗ ಬೇಗ ಆಗುವುದರಿಂದ, ಅವನಿಗೆ ತೃಪ್ತಿ ಉಂಟಾಗಿ, ಲೋಕದ ಜನತೆಗೆ ಹೆಚ್ಚಿನ ಲಾಭ ಸಿಗುತ್ತದೆ. ಸ್ವಧರ್ಮದಲ್ಲೇ ನಿರತನಾದವನಿಗೆ ಅವನಲ್ಲಿರುವ ಕೆಲವು ಗೊತ್ತಾದ ಗುಣಶಕ್ತಿ ಪ್ರವೃತ್ತಿಗಳು, ಆಗಾಗ ಉಪಯೋಗಿಸುವುದರ ಫಲವಾಗಿ, ದೃಢವಾಗಿ

ಬೆಳೆದು ಬಲಗೊಳ್ಳುವುದರಿಂದ, ಸ್ವಹಿತ ಪರಹಿತ ಎರಡೂ ಸಾಧಿಸುತ್ತದೆ. ಸ್ವಧರ್ಮ ವನ್ನು ಬದಲಾಯಿಸುವುದರಿಂದ ಹಿಂದಿದ್ದ ಗುಣ ಶಕ್ತಿ ಸಾಮರ್ಥ್ಯಗಳೆಲ್ಲ ಕೃಶವಾಗಿ, ಹೊಸಗುಣಶಕ್ತಿ ಸಾಮರ್ಥ್ಯಗಳು ಬರುವುದು ನಿಧಾನವಾಗಿ, ಮಾಡುವ ಕೆಲಸಗಳು ಸರಿಯಾಗದೆ, ಸ್ವಹಿತ, ಪರಹಿತ ಎರಡಕ್ಕೂ ಧಕ್ಕೆ ಬರುವ ಸಂಭವವೇ ಹೆಚ್ಚು.

ಸಮಾಜದಲ್ಲಿರುವ ನಾನಾ ಬಗೆಯ ಜನರಲ್ಲಿ, ನಾನಾ ಬಗೆಯ ಗುಣ ಶಕ್ತಿ ಸಾಮರ್ಥ್ಯಗಳು, ವಿಶಿಷ್ಟ ಸ್ವಭಾವಗಳು ಇರುತ್ತವೆ. ಅವೆಲ್ಲ ಆಯಾ ರೀತಿಯಲ್ಲಿ ಅಂತಹ ಜನರಲ್ಲಿ ಕ್ರಿಯಾ ಸ್ವರೂಪವನ್ನು ಪಡೆದರೆ, ವ್ಯಕ್ತಿಗೂ ಸುಖ, ಸಮಾಜಕ್ಕೂ ಹಿತ ಆಗಿ ಎಲ್ಲರ ಮೇಲ್ಮೆ ಲಭಿಸುತ್ತದೆ ಎಂಬುದು ಹಿಂದೂ ಋಷಿಗಳ ದೃಢ ನಂಬಿಕೆ ಆಗಿದ್ದುದರಿಂದ, ಹಿಂದೂ ಸಮಾಜದಲ್ಲಿ ಜನರು ನಾಲ್ಕು ವಿಧದಲ್ಲಿ ದುಡಿಯುವಂತೆ ವ್ಯವಸ್ಥೆ ಮಾಡಿದ್ದರು.

"ಬ್ರಾಹ್ಮಣೋಸ್ಯ ಮುಖಮಾಸೀತ್ । ಬಾಹೂ ರಾಜನ್ಯಃಕೃತಃ । ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಂ ಶೂದ್ರೋ ಅಜಾಯತ ।" ಎಂಬಂತೆ ವಿರಾಟ್ ಪುರುಷನಾದ ಭಗವಂತನ ಶರೀರದ ಬೇರೆ ಬೇರೆ ಅಂಗಗಳ ರೂಪದಲ್ಲಿ ನಾಲ್ಕು ವರ್ಣ ಗಳು ವರ್ಣಿಸಲ್ಪಟ್ಟಿವೆ. ಇವು ಪರಸ್ಪರ ಹೊಂದಿಕೊಂಡು ಕೆಲಸ ಮಾಡಿ, ಒಂದ ನ್ನೊಂದು ಪೋಷಿಸಿ, ರಕ್ಷಿಸಿದಾಗ, ಎಲ್ಲವೂ ವರ್ಧಿಸಿ, ಒಟ್ಟು ಶರೀರವು ಪುಷ್ಟಿ ಗೊಳ್ಳುತ್ತದೆ.

1) **ಬ್ರಾಹ್ಮಣ :** ಶರೀರದ ಮುಖದಲ್ಲಿ ಅಡಗಿರುವ ಮೂಗು, ಕಿವಿ, ಕಣ್ಣು, ನಾಲಗೆ, ಚರ್ಮ ಎಂಬ ಐದು ಜ್ಞಾನೇಂದ್ರಿಯಗಳೂ, ವಾಣಿ ಎಂಬ ಕರ್ಮೇಂದ್ರಿಯವೂ ಸೇರಿ, ಇಡೀ ಶರೀರದಲ್ಲಿ ಜ್ಞಾನಕ್ಕೆ ಸಂಬಂಧಿಸಿದ ಕಾರ್ಯಗಳನ್ನೆಲ್ಲ ನಡೆಸುತ್ತ, ತನ್ನ ಮನಸ್ಸಿನಲ್ಲಿ ಇರುವುದನ್ನು ಬೇರೆಯವರಿಗೆ ಸೂಚಿಸುತ್ತದೆ.

ದೇಶ ಎತ್ತ ಕಡೆ ಚಲಿಸಬೇಕು, ಏನನ್ನು ಸಾಧಿಸಬೇಕು, ಯಾವುದು ಯೋಗ್ಯ, ಸಾಧು ಆದುದು, ಎಂಬುದನ್ನೆಲ್ಲ, ಜಗದ ಜಂಜಡದಿಂದ ದೂರವಾಗಿದ್ದು, ಆಲೋಚಿಸುವವರು, ಬ್ರಹ್ಮಚರ್ಯಪಾಲನೆಯಿಂದ ಬ್ರಹ್ಮ ಜ್ಞಾನವನ್ನು ಸಂಪಾದಿಸಿ ದವರು, ಪೂರ್ಣ ವಿದ್ಯಾವಂತ ಮತ್ತು ಬುದ್ಧಿವಂತ ಆಗಿ, ಆಧ್ಯಾತ್ಮಿಕ ವಿಚಾರಗಳ ಜ್ಞಾನವನ್ನು ಪ್ರಚಾರ ಮಾಡಿ, ಅಜ್ಞಾನವನ್ನು ತೊಲಗಿಸಿ, ಸಮಾಜವನ್ನು ಉದ್ಧರಿ ಸಲು ಶ್ರಮಿಸುವವರು, ಬ್ರಾಹ್ಮಣ ಎನಿಸಿಕೊಳ್ಳುತ್ತಾರೆ. ಈ ಗುಣ ಇಲ್ಲದವರು, ಬ್ರಾಹ್ಮಣವಂಶದಲ್ಲಿ ಹುಟ್ಟಿದರೂ, ಬ್ರಾಹ್ಮಣರೆನಿಸಿಕೊಳ್ಳಲಾರರು. ವೇದಗಳಲ್ಲಿ ಪ್ರಾವೀಣ್ಯ, ಶಾಸ್ತ್ರಜ್ಞಾನ. ಸಾಹಿತ್ಯಾಭಿರುಚಿ, ಚಿಂತನಶೀಲತೆ, ಅಂದರೆ ಧರ್ಮ, ವಿಜ್ಞಾನ, ವಿದ್ವತ್ತು, ನೀತಿ, ಬ್ರಾಹ್ಮಣರ ಪಾಲಿಗೆ ಬಂದಿರುವ ಕಾರ್ಯ.

2) **ಕ್ಷತ್ರಿಯ :** ಶರೀರದ ರಕ್ಷಣೆಯನ್ನು ಮಾಡುವ ಕೆಲಸ ಬಾಹುಗಳಿಗೆ ಸೇರಿ ದುದು. ದೇಶದಲ್ಲಿ ಅನಾಯಕತೆ, ಅಭದ್ರತೆ ತಲೆದೋರದಂತೆ, ಹೊರಗಿನಿಂದ ಬರುವ ಶತ್ರು ಗಳಿಗೆ ದೇಶ ಬಲಿಯಾಗದಂತೆ, ನೋಡಿಕೊಳ್ಳಲು ಒಂದು ಸುವ್ಯವಸ್ಥಿತವಾದ ಆಡಳಿತ,

ನ್ಯಾಯಾಲಯ, ಆರಕ್ಷಕರು, ಸೈನಿಕರು ಇರಲೇಬೇಕಾಗುತ್ತದೆ. ಎಲ್ಲರಿಗೂ ಅಭಯ–ಆಶ್ವಾಸನೆಗಳನ್ನು ನೀಡಿ, ಎಲ್ಲರ ಯೋಗಕ್ಷೇಮದ ಹೊಣೆಗಾರಿಕೆಯನ್ನು ವಹಿಸಿಕೊಂಡು, ದಾನ ಮಾಡುವುದು ಕ್ಷತ್ರಿಯನ ಲಕ್ಷಣಗಳು. ಶೂರ ವೀರಧೀರ ಆಗಿದ್ದು, ಅಸತ್ಯ–ಪಕ್ಷಪಾತಗಳಿಂದ ಕೂಡಿದ ಅನ್ಯಾಯವನ್ನು ತೊಲಗಿಸಿ, ಸುವ್ಯವಸ್ಥೆ, ನ್ಯಾಯ, ಸಮಾನತೆಗಳನ್ನು ಉಂಟುಮಾಡಿ, ಸಮಾಜವನ್ನು ರಕ್ಷಿಸಲು ಹೆಣಗುವವನು ಕ್ಷತ್ರಿಯನೆನಿಸುತ್ತಾನೆ. ರಾಜನೀತಿ, ಕ್ರಿಯಾಶೀಲತೆ, ಆಡಳಿತ, ಯುದ್ಧ, ಶಾಂತಿ, ಕ್ಷತ್ರಿಯರ ಪಾಲಿಗೆ ಬಂದ ಕಾರ್ಯ.

**3) ವೈಶ್ಯ :** ಶರೀರದ ಮಧ್ಯ ಭಾಗದ ಮುಂಡದಲ್ಲಿ, ಜೀವನ ನಡೆಸಲು ಅವಶ್ಯವಾದ ಹೃದಯ, ಶ್ವಾಸಕೋಶ, ಜಠರ, ಜೀರ್ಣಾಂಗ, ಮಲಮೂತ್ರ ವಿಸರ್ಜನಾಂಗ, ಜನನೇಂದ್ರಿಯ ಎಂಬೀ ಮುಖ್ಯ ಅಂಗಗಳಿವೆ. ಆಹಾರವನ್ನು ಜೀರ್ಣಿಸಿಕೊಂಡು, ದೇಹದ ಎಲ್ಲಾ ಭಾಗಗಳಿಗೂ ರಕ್ತವನ್ನು ಸರಬರಾಜು ಮಾಡುವುದು ಈ ಭಾಗದ ಮುಖ್ಯ ಕೆಲಸ. ಕೃಷಿ ವಾಣಿಜ್ಯ ವ್ಯವಹಾರಗಳಲ್ಲಿ ಕುಶಲತೆ ಪಡೆದುಕೊಂಡು, ನೀತಿ ನಿಯಮಗಳಿಗೆ ಅನುಸಾರವಾಗಿ, ಜನರ ಸಂಪತ್ತನ್ನು ಅಭಿವೃದ್ಧಿಗೊಳಿಸಿ, ಜನರಿಗೆ ಬೇಕಾದುದನ್ನು ವಿತರಿಸಲು ಅಥವಾ ಹಂಚಲು ಶ್ರಮಿಸುವವನು ವೈಶ್ಯನೆನಿಸುತ್ತಾನೆ. ಅರ್ಥವ್ಯವಸ್ಥೆ, ಕೈಗಾರಿಕೆ, ವ್ಯಾಪಾರ, ವೃತ್ತಿ, ವೈಶ್ಯರ ಕೆಲಸ.

**4) ಶೂದ್ರ :** ಸಂಪೂರ್ಣ ಶರೀರವು ನಿಂತಿರುವುದೇ ಎರಡು ಪಾದಗಳ ಮೇಲೆ. ನಿರ್ದಿಷ್ಟ ಸ್ಥಾನಕ್ಕೆ ದೇಹವನ್ನು ಕೊಂಡೊಯ್ಯುವುದೂ ಪಾದಗಳೇ. ಆದುದರಿಂದ ಶರೀರದಲ್ಲಿ ಪಾದಗಳ ಸ್ಥಾನವು ಕೀಳು ದರ್ಜೆಯದೆಂದು ಭಾವಿಸುವುದು ಸರಿಯಲ್ಲ. ತೀರ ಅಲ್ಪಮತಿಯಾಗಿ ಹೆಚ್ಚು ಶಿಕ್ಷಣ ಪಡೆಯಲಾರದ, ಸೂಕ್ಷ್ಮಮತಿಗೆ ಗ್ರಾಹ್ಯವಾದ ಭಾವನೆಗಳನ್ನು ಅರಿಯಲಾರದ, ಮೈಮುರಿದು ದುಡಿಮೆ ಮಾಡಲು ಮಾತ್ರ ಸಮರ್ಥನಾದವನು ಶೂದ್ರ. ಅಂದರೆ ದೇಹವನ್ನು ದೃಢವಾಗಿ ಬೆಳೆಸಿ, ಕಷ್ಟಸಹಿಷ್ಣುವಾಗಿ, ಕೃಷಿ–ಗೋವುಗಳನ್ನು ರಕ್ಷಿಸಿ, ಅಭಿವೃದ್ಧಿಗೊಳಿಸಿ, ದೇಶದ ಸಂಪತ್ತನ್ನು ಉತ್ಪತ್ತಿ ಮಾಡಿ ಸಮಾಜದಲ್ಲಿ ಅಭಾವವಿಲ್ಲದಂತಾಗಿಸಿ, ಸೇವೆಯ ಮೂಲಕ ಸಮಾಜದಲ್ಲಿ ಸುಖ ಸಂತೋಷಗಳು ಇರುವಂತೆ ಮಾಡಲು ಶ್ರಮಿಸುವವನು ಶೂದ್ರನೆನಿಸುತ್ತಾನೆ. ಶ್ರಮ, ಸೇವೆ ಶೂದ್ರನ ಪಾಲಿಗೆ ಬಂದ ಕೆಲಸ.

ಒಟ್ಟಿನಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ಪ್ರಧಾನವೆನಿಸುವ ನಾಲ್ಕು ಅಂಗಗಳೂ ಭವ್ಯವಾದ ಶರೀರಕ್ಕೆ ಅವಶ್ಯವಾದುವು. ಇವುಗಳಲ್ಲಿ ಯಾವುದೇ ಒಂದು ಅಂಗವು ಹೆಚ್ಚು–ಕಮ್ಮಿ ಆದರೆ, ಪ್ರಬಲ–ಕೃಶ ಆದರೆ, ಶರೀರವು ಅಪೂರ್ಣವೆನಿಸಿ, ಅದರ ಸ್ಥಿತಿ ಹದಗೆಡುತ್ತದೆ. ಆದುದರಿಂದ ದೇಹದ ಎಲ್ಲ ಅಂಗಗಳೂ ಪರಸ್ಪರ ಆಶ್ರಿತವಾದುವು ಎಂದೇ ಭಾವಿಸಬೇಕು.

ಹೀಗೆ ಸಮಾಜದಲ್ಲಿ ನಾಲ್ಕು ವರ್ಣದವರೂ ಪರಸ್ಪರ ಆಶ್ರಿತರೇ ಹೊರತು ವೈರಿಗಳಲ್ಲ. ಹಕ್ಕುಗಳಿಗಿಂತ ಹೊಣೆಗಾರಿಕೆಯೇ ಮುಖ್ಯವಾಗಿರುವ ಈ

ಚಾತುರ್ವರ್ಣ್ಯ ವ್ಯವಸ್ಥೆಯಿಂದ ಋಣಗಳನ್ನು ತೀರಿಸಿ ಸದ್ಗತಿ ಪಡೆಯಲು ಅನುಕೂಲ ಕಲ್ಪಿಸಲಾಗಿದೆ. ಬ್ರಾಹ್ಮಣರಿಗೆ ಯಜನಯಾಗ, ಕ್ಷತ್ರಿಯರಿಗೆ ದುಷ್ಟ ಶಿಕ್ಷಣ-ಶಿಷ್ಟ ಪರಿಪಾಲನ, ವೈಶ್ಯರಿಗೆ ವ್ಯವಹಾರ ಕೌಶಲ್ಯ, ಶೂದ್ರರಿಗೆ ಸೇವೆ, ಎಂಬೀ ಧರ್ಮಗಳು ವಿಹಿತವಾಗಿದ್ದುವು.

ಯಾವ ವ್ಯಕ್ತಿಯು, ಯಾವ ದೇಶದಲ್ಲಿ, ಯಾವ ಕಾಲದಲ್ಲಿ, ಯಾವ ಸಂದರ್ಭದಲ್ಲಿ, ಎಂತಹ ಕೆಲಸ ಮಾಡಬೇಕಾಗುತ್ತದೆಂದು ಯಾರಿಗೂ ಮೊದಲೇ ತಿಳಿದಿರುವುದಿಲ್ಲ. ಆದುದರಿಂದ ಆಧುನಿಕ ಕಾಲದ ಜಟಿಲವಾದ ಪರಿಸ್ಥಿತಿಯಲ್ಲಿ ಬ್ರಾಹ್ಮಣನ ಬುದ್ಧಿಶಕ್ತಿ ಮತ್ತು ಆತ್ಮ ಸಂಯಮ, ಕ್ಷತ್ರಿಯನ ಧೈರ್ಯ, ಕೆಚ್ಚು ಮತ್ತು ಬಾಹು ವೀರ್ಯ, ವೈಶ್ಯನ ವ್ಯವಹಾರ ಕುಶಲತೆ, ಸ್ವಲಾಭ ಚಿಂತನೆ ಮತ್ತು ಉಪಾಯ ಯೋಜನೆ, ಶೂದ್ರನ ದೇಹದಾರ್ಢ್ಯ ಮತ್ತು ದುಡಿಯುವ ಸೇವಾ ಮನೋಭಾವ– ಎಂಬೀ ನಾಲ್ಕು ವರ್ಣಗಳ ಮುಖ್ಯಾಂಶಗಳೂ ಸಮಾಜದ ಎಲ್ಲ ಸದಸ್ಯರಲ್ಲೂ ಮೈಗೂಡಿ, ಅವರು ಕರ್ಮಕರ್ತವ್ಯಗಳನ್ನು ಪ್ರಾಮಾಣಿಕತೆಯಿಂದ ಮಾಡಿದರೆ, ಇಹ ಲೋಕವೇ ಸ್ವರ್ಗಸದೃಶವಾಗಬಲ್ಲದು. ಈ ದೃಷ್ಟಿಯಿಂದಲೇ ಗುರುಕುಲ ಶಿಕ್ಷಣವು ವ್ಯವಸ್ಥೆಯಾಗಿದ್ದಿತು.

ಆಧುನಿಕ ಕಾಲದಲ್ಲಿ ಈ ವರ್ಣ ವ್ಯವಸ್ಥೆಯು ಅನೇಕರಿಗೆ ರುಚಿಸುತ್ತಿಲ್ಲ. ಆದರೆ ಜನರು ಇಚ್ಛಿಸಲಿ, ಇಚ್ಛಿಸದಿರಲಿ, ಪ್ರತಿಯೊಂದು ಸಮಾಜದಲ್ಲಿಯೂ ಬುದ್ಧಿ ಜೀವಿಗಳು, ಶಕ್ತಿ ಜೀವಿಗಳು, ವ್ಯಾಪಾರೋದ್ಯಮ ಜೀವಿಗಳು, ಹಾಗೂ ಶ್ರಮ ಜೀವಿಗಳು ಇದ್ದೇ ಇರುತ್ತಾರೆ, ಇರಬೇಕಾಗುತ್ತದೆ. ಅಷ್ಟೇ ಅಲ್ಲದೆ ಒಂದೇ ಸಂಸಾರ, ಸಂಘ, ಸಂಸ್ಥೆ, ತರಗತಿಗಳಲ್ಲೂ ಈ ನಾಲ್ಕು ಗುಣ–ಸ್ವಭಾವದವರು ಇರುವುದನ್ನು ನಾವು ಗುರುತಿಸಬಹುದು.

ಈ ವರ್ಗಗಳಲ್ಲಿ ಒಂದರಿಂದ ಇನ್ನೊಂದನ್ನು ಬೇರ್ಪಡಿಸಿರುವುದು ನಿಸರ್ಗ ಅಥವಾ ಪ್ರಕೃತಿ. ಪ್ರತಿಯೊಂದು ವರ್ಗಕ್ಕೂ ತಮ್ಮದೇ ಆದ ಕ್ಷೇಮಲಾಭ ಮತ್ತು ಪರಿಶ್ರಮಕ್ಷೇತ್ರ, ತಮಗೇ ವಿಶಿಷ್ಟವಾದ ಪರಿಪೂರ್ಣತಾಭಾವನೆ ಮತ್ತು ಶ್ರೇಷ್ಠತೆ ಇವೆಲ್ಲ ಇರುತ್ತವೆ. ಆದುದರಿಂದ ಸಾರವತ್ತಾದ ಚಾತುರ್ವರ್ಣ್ಯ ಧರ್ಮವು ಸರಿಯಾಗಿ ಪಾಲಿಸಲ್ಪಡುತ್ತಿದ್ದ ಕಾಲದಲ್ಲಿ ಹಿಂದೂ ದೇಶವು ಸ್ವತಂತ್ರವಾಗಿದ್ದು, ವಿದ್ಯೆ, ಕೈಗಾರಿಕೆ, ವಾಣಿಜ್ಯ, ಕೃಷಿಗಳಲ್ಲಿ ಬಹಳ ಅಭಿವೃದ್ಧಿ ಹೊಂದಿದ್ದು, ಜನರು ಸುಖ ಶಾಂತಿಗಳಿಂದ ಜೀವಿಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ.

## 2. ಆಶ್ರಮ ಧರ್ಮ

ಪ್ರಥಮಾ ಮಾಯುಷೋ ಭಾಗಂ ವಸಿತ್ವಾದ್ಯಂ ಗುರೋಃಕುಲೇ ।
ದ್ವಿತೀಯ ಮಾಯುಷೋ ಭಾಗಂ ಕೃತದಾರೋ ಗೃಹೇವಸೇತ್ ॥

ವನೇಷುಚ ವಿಹೃತ್ಯೈವಂ ತೃತೀಯಂ ಭಾಗಮಾಯುಷಃ ।
ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾ ಸಂಗಾನ್ ಪರಿವ್ರಜೇತ್ ॥

ಎಂಬಂತೆ ಮಾನವನು ದೇವನೆಡೆಗೆ ಮಾಡುವ ಪಯಣದ ಘಟ್ಟಗಳನ್ನು ಸೂಚಿಸುವ ಆಶ್ರಮವು, ವ್ಯಕ್ತಿ ಜೀವನದ ನಾಲ್ಕು ಸೋಪಾನ, ನಿಲ್ದಾಣ, ಹಂತಗಳನ್ನು ವಿವರಿಸಿ, ಅವುಗಳಿಗೆ ಅನುಗುಣವಾದ ಕೆಲಸಗಳನ್ನು ಮಾಡಿದರೆ, ಸಮಾಜದಲ್ಲಿ ಸುಖ ಶಾಂತಿ ಸಮಾಧಾನಗಳು ಇರಲು ಸಾಧ್ಯ ಎಂದು ಹೇಳುತ್ತದೆ. ಇದರಿಂದ ವ್ಯಕ್ತಿಗೂ ಆಧ್ಯಾತ್ಮಿಕ ವಿಕಾಸ ಹೊಂದಲು ಸಾಧ್ಯವಾಗುತ್ತದೆ.

1) **ಬ್ರಹ್ಮಚರ್ಯ :** ಜನನದಿಂದ ಆರಂಭಿಸಿ ಇಪ್ಪತ್ತೈದು ವರ್ಷ ಪೂರ್ತಿಯಾಗುವವರೆಗಿನ ಮಗುವಿನ ಮೊದಲಿನ ಈ ವಿದ್ಯಾರ್ಥಿ ಜೀವನದ ಆಶ್ರಮವು, ಎಲ್ಲ ಬಗೆಯ ಶಕ್ತಿಗಳನ್ನೂ ಅಭಿವೃದ್ಧಿ ಪಡಿಸಿಕೊಳ್ಳುವ ಸಲುವಾಗಿ ಇದ್ದು ಮಹತ್ವವೆನಿಸಿ ಕೊಂಡಿದೆ. ಬ್ರಹ್ಮಚರ್ಯ ಅಂದರೆ ಭಗವಂತನಲ್ಲಿ ವಿಹರಿಸುವುದು ಅಥವಾ ಓಡಾಡು ವುದು, ಬ್ರಹ್ಮಚರ್ಯಕ್ಕೆ ಬಾಧಕ–ಮಾರಕ ಆದ ಇಂದ್ರಿಯಗಳನ್ನು ನಿಗ್ರಹಿಸುವುದು ಎಂದು ಅರ್ಥ. ಕೇವಲ ವಿವಾಹ, ಸ್ತ್ರೀಸ್ಪರ್ಶ, ವೀರ್ಯ ಸ್ತಂಭನ ಆಗದಿರುವುದು ಮಾತ್ರ ಬ್ರಹ್ಮಚರ್ಯ ಎನಿಸಲಾರದು. ಬ್ರಹ್ಮವನ್ನು ಕುರಿತು ನಡೆದ ಸಂಶೋಧನೆ, ಅನುಸಂಧಾನ, ಅನ್ವೇಷಣೆ, ಆರಾಧನೆ ಇವುಗಳಲ್ಲಿ ನಿರತರಾಗುವುದು ಬ್ರಹ್ಮಚರ್ಯ ಎನಿಸುತ್ತದೆ. ಬ್ರಹ್ಮಚರ್ಯದ ಸಿದ್ಧಿಗಾಗಿ ಉಪನಯನ ಮಾಡಲಾಗುತ್ತದೆ.

ಈ ಆಶ್ರಮದಲ್ಲಿ ಪ್ರಾಪಂಚಿಕ ಹವ್ಯಾಸಗಳಿಂದ ಮತ್ತು ಪ್ರಲೋಭನಕಾರಿ ವಾತಾವರಣದಿಂದ ದೂರವಿದ್ದು, ಸಾತ್ವಿಕವಾದ ಆಧ್ಯಾತ್ಮಿಕ ವಾತಾವರಣದಲ್ಲಿ, ಸ್ವತಃ ಶ್ರಮಸಹಿಷ್ಣುಗಳಾಗಿ, ಬೌದ್ಧಿಕ ಹಾಗೂ ಮಾನಸಿಕ ಶಕ್ತಿಗಳನ್ನು ಏಕೀಕರಿಸಿ, ವೈದಿಕ ಹಾಗೂ ಲೌಕಿಕ ವಿದ್ಯೆಗಳನ್ನು ಮಕ್ಕಳು ಕರಗತ ಮಾಡಿಕೊಳ್ಳುತ್ತಾರೆ. ಸರಳ ಜೀವನ, ಉನ್ನತ ವಿಚಾರ ಎಂಬ ಭಾರತೀಯ ಜೀವನದ ಆದರ್ಶವನ್ನು ಪಾಲಿಸುತ್ತಾರೆ. ಬ್ರಹ್ಮನಿಷ್ಠ, ಶ್ರೋತ್ರಿಯ, ಸದ್ವಿಚಾರಿ, ಸದಾಚಾರಿ, ಆದ ಆಚಾರ್ಯರ ಮಾರ್ಗ ದರ್ಶನದಲ್ಲಿ ಸರ್ವವಿಧ ಶಕ್ತಿಗಳನ್ನೂ ಸಂಪಾದಿಸಿಕೊಂಡು, ವಿದ್ವಾಂಸ, ಸಚ್ಚರಿತ್ರ, ಸಮರ್ಥ ಆಗುತ್ತಾರೆ. ಪೂರ್ಣವಿಕಸಿತ ಬುದ್ಧಿ, ಬಲಿಷ್ಠವಾದ ಮನಸ್ಸು, ವಿಶಾಲ ವಾದ ಹೃದಯ, ದೃಢವಾದ ಶರೀರ, ಪರಿಪುಷ್ಟವಾದ ವಾಣಿ, ಪ್ರಾಣಶಕ್ತಿ, ಅದ್ಭುತ ಜ್ಞಾನ, ಇವೆಲ್ಲವನ್ನೂ ಹೊಂದಿ ಸರ್ವರ ಗೌರವ–ಆದರಗಳಿಗೆ ಪಾತ್ರರಾಗುತ್ತಾರೆ.

ಮುಖ್ಯವಾಗಿ ಈ ಆಶ್ರಮವು ವ್ಯವಸ್ಥಿತ ಶಿಸ್ತುಜೀವನ, ಗುರುಕುಲ ವಾಸ, ವೇದಶಾಸ್ತ್ರ ಪುರಾಣೇತಿಹಾಸಗಳ ಅಧ್ಯಯನ, ಹಾಗೂ ಅಧ್ಯಾಪನಗಳಿಗಾಗಿಯೇ ಮೀಸಲಾಗಿದ್ದು, ಮುಂದಿನ ಫಲಪ್ರದ ಘಟ್ಟಗಳಿಗೆಲ್ಲ ತಳಹದಿಯಾಗಿದೆ. ತಾಯಿ ತಂದೆ, ಗುರುಹಿರಿಯರಲ್ಲಿ ವಿಧೇಯತೆ, ಬಂಧು ಬಾಂಧವರಲ್ಲಿ ಸ್ನೇಹವಾತ್ಸಲ್ಯ, ಇವೇ ಬ್ರಹ್ಮಚಾರಿಯ ಲಕ್ಷಣಗಳು. ಈ ಕಾಲದಲ್ಲಿ ಅವನು ಆಹಾರ, ವಿಹಾರ, ಆಚಾರಗಳ ಲ್ಲೆಲ್ಲ ಶುದ್ಧವಾಗಿದ್ದು, ಸಂಯಮವನ್ನು ಪಾಲಿಸಬೇಕು. ಮಾನವರನ್ನು ಧರ್ಮದಿಂದ

ದೂರ ತಳ್ಳುವ ಕಳವು, ಸುಳ್ಳು, ಕುಡಿತ, ವ್ಯಭಿಚಾರ, ಕೊಲೆ, ಎಂಬೀ ಪಂಚಮಹಾ ಪಾತಕಗಳಿಂದ ದೂರವಾಗಿರಬೇಕು. ಮಧುಮಾಂಸ ಭೋಜನ, ಗಂಧಪುಷ್ಪರಸನಾರೀ ಸೇವನೆ, ಪ್ರಾಣಿಹಿಂಸೆ, ನೃತ್ಯಗೀತವಾದ್ಯ ದ್ಯೂತ, ಪರನಿಂದೆ ಇವುಗಳನ್ನೆಲ್ಲ ತ್ಯಜಿಸಿ, ಛತ್ರಿ ಪಾದರಕ್ಷೆಗಳನ್ನು ಧರಿಸದೆ, ಹಾಸಿಗೆ ಮಂಚಗಳನ್ನು ಉಪಯೋಗಿಸದೆ, ಏಕಾಂಗಿಯಾಗಿ ನೆಲದ ಮೇಲೆ ಮಲಗಿ, ರೇತಸ್ಯಂದನಕ್ಕೆ ಅವಕಾಶ ಕೊಡದೆ, ಬ್ರಹ್ಮಚರ್ಯವನ್ನು ಸರಿಯಾಗಿ ಪಾಲಿಸಬೇಕು. ವಿವೇಕದಿಂದ ವ್ಯವಹರಿಸಿ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗದಿಂದ ದೂರವಿರಬೇಕು. ಭಗವಂತನನ್ನು ಸೂರ್ಯನಾರಾಯಣನ ಮೂಲಕ ಪ್ರಾರ್ಥಿಸುವ ಸಂಧ್ಯಾವಂದನೆಯನ್ನು ತ್ರಿಕಾಲದಲ್ಲಿಯೂ ಮಾಡಬೇಕು. ಭಕ್ತಿ–ಸೇವೆಗಳಿಂದ ಜ್ಞಾನ–ಸಂಸ್ಕೃತಿಗಳನ್ನು ಸಂಪಾದಿಸಿದಾಗ, ಹೃದಯದೇಗುಲದಲ್ಲಿ ಪರಮಾತ್ಮನು ಯಾವಾಗಲೂ ನೆಲಸಿರಲು ಅವಕಾಶವಾಗುತ್ತದೆ.

ಈ ಆಶ್ರಮದ ಅವಧಿ 25 ವರ್ಷಗಳಿದ್ದರೂ, ಯಾವುದಾದರೂ ಒಂದು ಉನ್ನತ ಧ್ಯೇಯದ ಸಲುವಾಗಿ, ಜೀವನವನ್ನು ಮೀಸಲಿಡುವ ದೃಢವಾದ ಮನೋಭಾವ ಹಾಗೂ ಮನೋನಿಗ್ರಹ ಸಾಮರ್ಥ್ಯ ಇರುವವರು, ತಮಗೆ ಸೂಕ್ತ ತೋರುವಷ್ಟು ಕಾಲ ಬ್ರಹ್ಮಚರ್ಯ ಆಶ್ರಮದಲ್ಲೇ ಇರಲೂ ಅವಕಾಶವಿದೆ.

**2) ಗಾರ್ಹಸ್ಥ್ಯ :** ಇಪ್ಪತ್ತೈದರಿಂದ ಐವತ್ತು ವರ್ಷಗಳವರೆಗೆ ಇರುವ ಈ ಕುಟುಂಬ ಜೀವನದ ಆಶ್ರಮವೂ ಬಹುಮುಖ್ಯವಾದುದು. ಬ್ರಹ್ಮಚರ್ಯ ಆಶ್ರಮದಲ್ಲಿ ಯುವಕ–ಯುವತಿಯರು ಗಳಿಸಿದ ಅಥವಾ ಅಭಿವೃದ್ಧಿ ಪಡಿಸಿಕೊಂಡ ಶಕ್ತಿ ಸಾಮರ್ಥ್ಯಗಳನ್ನು ತಮ್ಮ ಹಾಗೂ ತಮ್ಮ ಸಮಾಜ, ರಾಷ್ಟ್ರ, ಜಗತ್ತುಗಳ ಹಿತಕ್ಕಾಗಿ ಉಪಯೋಗಿಸಲು ಈ ಆಶ್ರಮವಿದೆ. ಸೇವೆ, ತ್ಯಾಗಗಳಿಗೆ ಇಲ್ಲಿ ವಿಶೇಷ ಅವಕಾಶವಿದೆ.

ಋಣ ತೀರಿಸಲು ನಿರ್ಮಿತವಾಗಿರುವ ಯಜ್ಞಗಳ ಮೂಲಕ ಎಲ್ಲ ಜೀವಿಗಳಿಗೂ ಉಪಕಾರ ಮಾಡಿ, ಅವರ ಸ್ನೇಹ ಬೆಳೆಸಲು ಈ ಆಶ್ರಮದಲ್ಲಿ ಅವಕಾಶವಿದೆ. ಬ್ರಹ್ಮಚರ್ಯ, ವಾನಪ್ರಸ್ಥ, ಸಂನ್ಯಾಸ ಈ ಮೂರೂ ಆಶ್ರಮದ ಜನರೆಲ್ಲ ತಮ್ಮ ಉದರ ಪೋಷಣೆಗಾಗಿ ಗೃಹಸ್ಥರನ್ನೇ ಅವಲಂಬಿಸಿರುತ್ತಾರೆ. ಸಮಾಜದ ಆಗುಹೋಗುಗಳು ಗೃಹಸ್ಥರ ಮೇಲೇ ನಿಂತಿದೆಯೆಂದರೂ ತಪ್ಪಾಗಲಾರದು. ಭೋಗವಿಲಾಸಗಳಿಗೆ ಬಲಿಬೀಳದೆ, ಉತ್ಸಾಹದಿಂದ ಜೀವಕೋಟಿಗೆ ಸೇವೆಸಲ್ಲಿಸುತ್ತ, ತಾವೂ ನಕ್ಕು ಇತರರನ್ನೂ ನಗಿಸುತ್ತ, ಸಂಯಮದಿಂದ ಸಹಜೀವನವನ್ನು ನಡೆಸುವ ಈ ಗೃಹಸ್ಥಾಶ್ರಮವು ಸ್ವರ್ಗ ಸದೃಶವಾದುದು. ವಿವಾಹದಿಂದ ಹೆಣ್ಣಿನ ಪಾಣಿಗ್ರಹಣಮಾಡಿದ ಗಂಡು, ಗೃಹಸ್ಥನೆನಿಸಿ ತನ್ನ ಜೀವನದಲ್ಲಿ ಹೆಣ್ಣಿನ ಜವಾಬ್ದಾರಿಯನ್ನು ವಹಿಸಿಕೊಂಡು ಅವಳನ್ನು ಮೇಲಕ್ಕೆ ಎತ್ತುತ್ತಾನೆ. ಮುಖ್ಯವಾಗಿ ಮದುವೆಮಾಡಿಕೊಂಡು ಸುಖಮಯ ಸಾಂಸಾರಿಕ ಜೀವನವನ್ನು ನಡೆಸಲು, ಸತ್ಸಂತಾನವನ್ನು ಪಡೆದು ಅವರನ್ನು ಬುದ್ಧಿ

ವಂತ, ಗುಣವಂತರನ್ನಾಗಿ ಮಾಡಿ ವಂಶವನ್ನು ಮುಂದುವರೆಸಲು, ನ್ಯಾಯ ಮಾರ್ಗದಲ್ಲಿ ಹಣವನ್ನು ಸಂಪಾದಿಸಿ ಅದನ್ನು ಸದುದ್ದೇಶಗಳಿಗಾಗಿ ವೆಚ್ಚಮಾಡಲು ಹಾಗೂ ಅತಿಥಿ ಅಭ್ಯಾಗತರನ್ನು ಆದರಿಸಲು ಈ ಆಶ್ರಮವಿದೆ. ತಾನು ತಿಳಿದುಕೊಂಡ ಧರ್ಮಜ್ಞಾನವನ್ನು ಕ್ರಿಯಾ ರೂಪಕ್ಕೆ ತರುವುದು ಈ ಆಶ್ರಮದ ಮುಖ್ಯೋದ್ದೇಶ.

ಭಗವಂತನ ಮಕ್ಕಳಾದ ದೀನದಲಿತ ದುಃಖಿಜನರನ್ನು ಸಂತೈಸಿ, ಅವರನ್ನು ಸೋದರರೆಂದು ಭಾವಿಸಿ, ಅವರಿಗೆ ಸೇವೆ ಸಹಾಯ ನೀಡುವುದು ಭಗವಂತನ ಸೇವೆಯೇ ಆಗಿರುತ್ತದೆ ಎಂಬುದನ್ನು ಅರಿತು ಆಚರಿಸಬೇಕು.

**3) ವಾನಪ್ರಸ್ಥ :** ಐವತ್ತರಿಂದ ಎಪ್ಪತ್ತೈದು ವರ್ಷಗಳವರೆಗಿನ ಈ ವನವಾಸದ ಬಾಳಿನ ಆಶ್ರಮವು ಆಧ್ಯಾತ್ಮಿಕ ಸಾಧನೆಯೊಂದಿಗೆ ರಾಷ್ಟ್ರದ ಮಕ್ಕಳ ಹಾಗೂ ಯುವಜನರ ಶಿಕ್ಷಣ ನೀಡಲು ಇರುವಂತಹುದು. ಈ ಆಶ್ರಮದಲ್ಲಿ ಕಾಲಿಟ್ಟವರು ನಾಡಿನ ಭವಿಷ್ಯದ ಶಿಲ್ಪಿಗಳಾದ ಇಂದಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಶಿಕ್ಷಣ ನೀಡಬೇಕು. ಅರಗಿಸಿಕೊಂಡ ಪರಿಪಕ್ವವಾದ ಜ್ಞಾನ ಮತ್ತು ಕ್ರಿಯಾತ್ಮಕ ಜೀವನದಿಂದ ಗಳಿಸಿದ ಸ್ವಾನುಭವವಿರುವ, ಸಾಂಸಾರಿಕ ಮಾಯಾಮೋಹ ತೀರಿಹೋಗಿರುವ, ವಾನಪ್ರಸ್ಥಿಗಳೇ ಗುರುಕುಲಗಳಲ್ಲಿ ಅಧ್ಯಾಪನ ಮಾಡಲು ಅರ್ಹರಾದವರು. ಇವರ ಜೊತೆಯಲ್ಲಿ ಬಂದಿರುವ ಪತ್ನಿ, ಸೋದರಿ, ಸಹಕರ್ಮಚಾರಿಣಿಯರಾಗಿದ್ದು ತಮ್ಮ ಕೈಲಾದ ಸೇವೆಸಲ್ಲಿಸಿ ಸಾಧನೆ ಮಾಡುತ್ತಾರೆ.

ಐವತ್ತನೆಯ ವರ್ಷದಲ್ಲಿ ತಾವಾಗಿ ಸಾರ್ವಜನಿಕ ಜೀವನದಿಂದ ನಿವೃತ್ತರಾಗುವುದರಿಂದ ಯುವಜನರಿಗೆ ಜೀವಿಕೆಯ ಸಾಧನಗಳು ಸಹಜವಾಗಿ ಲಭಿಸಲು ಅನುಕೂಲವಾಗುತ್ತದೆ. ವೃದ್ಧ, ಅಶಕ್ತ ಆದರೂ ನಿವೃತ್ತರಾಗದೆ, ಜನರ ಸೇವೆಮಾಡದೆ, ಅವರ ಕಷ್ಟ-ನೋವುಗಳನ್ನು ನಿವಾರಿಸದೆ, ಅವರ ಕೆಲಸಗಳಿಗೆಲ್ಲಾ ಹಣವನ್ನು ವಸೂಲು ಮಾಡಿ, ಸೇವಾವಿಸ್ತರಣ ಮತ್ತಿತರ ಸೌಲಭ್ಯಗಳನ್ನು ಕೇಳುವುದು ಅಕ್ರಮ, ಅನ್ಯಾಯ, ಅಧರ್ಮ ಆಗಿರುತ್ತದೆ.

ಮುಖ್ಯವಾಗಿ ಹೆಚ್ಚು ಜ್ಞಾನವನ್ನು ಸಂಪಾದಿಸಲು, ಧ್ಯಾನ-ಚಿಂತನಮಾಡಲು, ಇತರರಿಗೆ ಮಾರ್ಗದರ್ಶನಮಾಡಲು, ಯೋಗ್ಯವಾದ ಆಶ್ರಮವಿದು ಎನ್ನಬಹುದು.

ಹಿಂದಿನ ಎರಡೂ ಆಶ್ರಮಗಳಲ್ಲಿ ಹೊಂದಿದ್ದ ಮಾನವೀಯ ಸಂಬಂಧ, ಹಿತ-ಅಹಿತ, ಎಲ್ಲವನ್ನೂ ತನ್ನ ಕುಟುಂಬ, ಕುಲ, ವಂಶ, ಜಾತಿ, ಜನಾಂಗಗಳಿಗಾಗಿಯೇ ಮೀಸಲಾಗಿಡುವ ಬದಲು, ಅವುಗಳ ವ್ಯಾಪ್ತಿಯು ಸೀಮಾತೀತವಾಗಿ ಇರುವಂತೆ ಮಾಡಿ, ಯುವಜನರಿಗೆಲ್ಲ ಮೇಲ್ಪಂಕ್ತಿಯಾಗಿರಬೇಕಾದ ಕಾಲವಿದು. ಪರರಿಗಾಗಿ ಮರುಗುವ ಹೃದಯ, ಕ್ಲಿಷ್ಟ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸುವ ಕಾರ್ಯತತ್ಪರತೆ, ಅಡ್ಡ ಬರುವ ಅಡ್ಡಿ ಆತಂಕಗಳಿನ್ನೆಲ್ಲ ಎದುರಿಸುವ ದೃಢನಿರ್ಧಾರ, ಇವೆಲ್ಲವನ್ನೂ ಬೆಳೆಸಿಕೊಂಡು ಆತ್ಮೋದ್ಧಾರಕ್ಕಾಗಿ ಶ್ರಮಿಸಬೇಕಾದ ಆಶ್ರಮವಿದು.

**4) ಸಂನ್ಯಾಸ :** ಎಪ್ಪತ್ತೈದನೆ ವರ್ಷದ ನಂತರ ಸ್ವೀಕರಿಸುವ, ಲೌಕಿಕ

ಭೋಗವನ್ನು ತ್ಯಜಿಸಿದ, ಇದು ಮಾನವ ಜೀವನದ ಕೊನೆಯ ಹಂತದ ಆಶ್ರಮ. ಪ್ರಾಪಂಚಿಕ ವಸ್ತುಗಳಿಂದ ಸಂಪೂರ್ಣ ನಿರ್ಲಿಪ್ತನಾಗಿದ್ದು ಮಾಡಬೇಕಾಗಿರುವ ಕರ್ತವ್ಯ ಕರ್ಮಗಳನ್ನು ಸ್ವಪ್ರಯೋಜನದ ಚಿಂತೆಯಿಲ್ಲದೆ ಮಾಡುವವನೇ ಸಂನ್ಯಾಸಿ. ಸಾಂಸಾರಿಕ ಮೋಹವನ್ನು ಪೂರ್ಣವಾಗಿ ತ್ಯಾಗಮಾಡಿ, ಆಧ್ಯಾತ್ಮಿಕ ಸಾಧನೆ ಮಾಡುತ್ತ, ಲೋಕೋಪಕಾರಕ್ಕಾಗಿ ಹಾಗೂ ಸದ್ಧರ್ಮದ ಪ್ರಚಾರ ಮಾಡುವುದಕ್ಕಾಗಿ ಇರುವ ಆಶ್ರಮವಿದು. ಎಲ್ಲ ದೇಶ, ಭಾಷೆ, ಜನಾಂಗಗಳಿಗೂ ಸೇರಿದವನೆಂದು ಭಾವಿಸಿ ಕೊಂಡು, ವರ್ಷದಲ್ಲಿ ಹೆಚ್ಚು ಕಾಲ ದೇಶ ಪರ್ಯಟನಮಾಡುತ್ತಿದ್ದು, ಮಾನವರಿಗೆಲ್ಲ ಸತ್ಯವಾದ ಜ್ಞಾನ, ಕರ್ಮ, ಉಪಾಸನೆಗಳನ್ನು ಬೋಧಿಸುವುದು ಸಂನ್ಯಾಸಿಯ ಮುಖ್ಯ ಕರ್ತವ್ಯ.

ಮಠ-ಆಶ್ರಮಗಳನ್ನು ಕಟ್ಟಿಕೊಂಡು, ಕಿರೀಟ ಆಭರಣಗಳನ್ನು ಧರಿಸಿ, ರಾಜ ವೈಭವದಿಂದ ಜನರು ಹೊತ್ತ ಪಲ್ಲಕ್ಕಿಗಳಲ್ಲಿ, ವಿದೇಶೀ ಕಾರುಗಳಲ್ಲಿ ಕುಳಿತು ಮೆರವಣಿಗೆ ಹೋಗುವುದು, ಷಡ್ರಸೋಪೇತವಾದ ಭೋಜನವನ್ನು ಸವಿಯುವುದು, ದಾನರೂಪ ದಲ್ಲಿ ಅಪಾರ ಹಣ ಸಂಪಾದಿಸಿ ಹೆಚ್ಚು ಆಸ್ತಿಯನ್ನು ಮಾಡುವುದು, ಶಿಷ್ಯರಿಂದ ಬಂದ ಹಣ ಆಸ್ತಿಗಳನ್ನು ತಮ್ಮ ಬಂಧು ಬಳಗದವರಿಗೆ ಕೊಡುವುದು, ಮಠಗಳಲ್ಲಿ ಗೃಹಸ್ಥ ಆಶ್ರಮದ ಕಾರ್ಯಗಳನ್ನು ನಡೆಸುವುದು, ಹೆಚ್ಚು ಹಣ ಸಂಪಾದಿಸುವ ಒಂದೇ ಉದ್ದೇಶದಿಂದ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ನಡೆಸುವುದು, ಜಗತ್ತಿನ ವೈಭವಗಳಿಗೇ ಅಂಟಿಕೊಂಡಿರುವುದು, ವಂದಿಮಾಗಧರಿಂದ ಹೊಗಳಿಸಿಕೊಂಡು ಬಿನ್ನವತ್ತಲೆಗಳನ್ನು ಸ್ವೀಕರಿಸುವುದು-ಇವು ನಿಜವಾದ ಸಂನ್ಯಾಸಿಯ ಲಕ್ಷಣಗಳಲ್ಲ.

ಮುಖ್ಯವಾಗಿ ಮಾನವನು ದೇವನಾಗಲು ಮೀಸಲಾಗಿರುವ ಈ ಆಶ್ರಮದಲ್ಲಿ ಇರುವವರಿಗೆ ದೈಹಿಕ ಶಕ್ತಿ-ಸಾಮರ್ಥ್ಯಗಳು ಕಡಿಮೆಯಾಗಿದ್ದರೂ, ಹಿಂದಿನ ಮೂರು ಆಶ್ರಮಗಳಲ್ಲಿ ಮಾಡಿದ ಸಮಾಜ ವೀಕ್ಷಣೆ, ಧ್ಯಾನಚಿಂತನ, ಗ್ರಂಥಗಳ ಅಧ್ಯಯನ-ಅಧ್ಯಾಪನ, ಇವುಗಳೆಲ್ಲದರಿಂದ ಸಂಪಾದಿಸಿದ ಜ್ಞಾನಾನುಭವಗಳ ಸಂಪತ್ತಿನಿಂದ ಸಫಲ ಜೀವನವನ್ನು ನಡೆಸುತ್ತ, ಆತ್ಮಸಾಕ್ಷಾತ್ಕಾರ ಪಡೆಯಲು ಸಿದ್ಧತೆ ಮಾಡಿಕೊಂಡು, ಮೋಕ್ಷವನ್ನು ಪಡೆಯಲು ಯತ್ನಿಸಬೇಕು.

ನಶ್ವರವಾದ ಪ್ರಪಂಚವನ್ನು ಹೆಚ್ಚಾಗಿ ಹಚ್ಚಿಕೊಳ್ಳದೆ, ಮೋಕ್ಷದ ಕಡೆಗೆ ಗಮನವಿರುವ ಶ್ರೇಷ್ಠ ಜ್ಞಾನಿಯು, ಮಾಗಿದ ಹಣ್ಣು ತೊಟ್ಟಿನಿಂದ ಕಳಚಿಕೊಳ್ಳು ವಂತೆ ಸಂಸಾರ ಬಂಧನದಿಂದ ತಪ್ಪಿಸಿಕೊಂಡು ಪ್ರಪಂಚದಿಂದ ಬೇರೆಯಾಗಿರಲು ಯತ್ನಿಸಬೇಕು. ಸ್ವಪ್ರಯೋಜನದ ಚಿಂತೆಯಿಲ್ಲದೆ ಕರ್ತವ್ಯ ಕರ್ಮಗಳನ್ನು ಮಾಡುವ ಶ್ರೇಷ್ಠ ಜೀವಿಯು ಚರಾಚರ ವಸ್ತುಗಳಲ್ಲೆಲ್ಲ ಸಮತೆ, ದೈವತ್ವಗಳನ್ನು ಕಾಣುತ್ತಾನೆ. ಅವನಲ್ಲಿ ಯಾವುದೇ ರೀತಿಯ ಪಕ್ಷಪಾತ ಬುದ್ಧಿ ಇರುವುದಿಲ್ಲ. ಅವನು ಯಾವುದನ್ನೂ ತನಗಾಗಿ ಸಂಗ್ರಹಿಸಿ ಇಡುವುದಿಲ್ಲ. ಭಿಕ್ಷಾಟನ ವೃತ್ತಿಯನ್ನು ಅನುಸರಿಸಿ ಜೀವಿಸುತ್ತ, ಭೂಕಂಪ, ಪ್ರವಾಹ, ಕ್ಷಾಮ, ಸಾಂಕ್ರಾಮಿಕರೋಗ, ಹಿಂಸಾಚಾರ, ಅತ್ಯಾಚಾರ,

ಮುಂತಾದ ಸಂಕಷ್ಟ ಸಮಯಗಳಲ್ಲಿ ಜನರ ಸೇವೆಗಾಗಿ ಅವನು ಧಾವಿಸುತ್ತಾನೆ. ತಾನು ಮಾಡುವುದೆಲ್ಲ ಭಗವಂತನ ಪೂಜೆ, ಸೇವೆ ಎಂದೇ ತಿಳಿದು ಯಜ್ಞ ದೃಷ್ಟಿಯಿಂದ ಮಾಡಿ ಆ ಮೂಲಕ ತನ್ನ ಮೇಲಿದ್ದ ದೇವ, ಋಷಿ, ಪಿತೃ, ನರ, ಭೂತ ಎಂಬ ಐದು ರೀತಿಯ ಋಣದಿಂದಲೂ ಮುಕ್ತನಾಗುತ್ತಾನೆ. ತನ್ನ ವಿಚಾರ, ಆಚಾರ, ಉಚ್ಚಾರಗಳ ಮೂಲಕ ಸಾಮಾನ್ಯಜನರಲ್ಲಿ ಸರಿಯಾದ ತಿಳಿವಳಿಕೆ, ಮನೋಭಾವ, ಸಂಬಂಧ, ಜೀವನಕಲೆ ಮುಂತಾದುವನ್ನು ಪ್ರಚಾರಮಾಡಿ, ಯಾರಿಗೂ ನೋವು-ಅನ್ಯಾಯ ಆಗದಂತೆ, ಎಲ್ಲರಿಗೂ ಹಿತ-ಸುಖ ಆಗುವಂತೆ, ಸಾರ್ಥಕ ಜೀವನ ನಡೆಸುತ್ತ, ಇಹದಲ್ಲಿಯೇ ಮೋಕ್ಷ ಸದೃಶ ಜೀವನವನ್ನು ನಡೆಸುತ್ತಾನೆ.

ಶಾರೀರಕ, ಪ್ರಾಪಂಚಿಕ ಬಂಧನಗಳಿಂದ ಮುಕ್ತಿಯನ್ನು ಬಯಸುವುದಕ್ಕೆ ಮೊದಲು ಮಾನವನು ತನ್ನ ಕರ್ತವ್ಯಗಳನ್ನು ನಿರ್ವಹಿಸಿ ಋಣವನ್ನು ತೀರಿಸಬೇಕು ಎಂಬ ತತ್ತ್ವದ ಮೇಲೆ ಆಶ್ರಮಧರ್ಮದ ಯೋಜನೆ ಇದೆ. ಮೊದಲಿನ ಬ್ರಹ್ಮಚರ್ಯ ಆಶ್ರಮವು ಸರ್ವರಿಗೂ ಅನಿವಾರ್ಯವಾದರೂ, ಉಳಿದ ಮೂರು ಆಶ್ರಮಗಳು ಅವರವರ ಯೋಗ್ಯತೆ-ಅರ್ಹತೆಗಳನ್ನು ಅವಲಂಬಿಸಿ, ಐಚ್ಛಿಕವಾಗಿ ಸ್ವೀಕರಿಸುವಂಥವು. ಮಾನವರೆಲ್ಲರೂ ಬ್ರಹ್ಮಚರ್ಯದಿಂದ ಬ್ರಹ್ಮಜ್ಞಾನವನ್ನೂ, ಗಾರ್ಹಸ್ಥ್ಯದಿಂದ ಲೋಕಾನುಭವವನ್ನೂ ಸಂಪಾದಿಸಿ, ವಾನಪ್ರಸ್ಥನಾಗಿ, ಸಂನ್ಯಾಸದ ಮೂಲಕ ಆಧ್ಯಾತ್ಮಿಕದ ಕಡೆ ಕಾಲು ಹಾಕುವುದು ಸರಿಯಾದ ಮಾರ್ಗ.

## 3. ಪಂಚಮಹಾಯಜ್ಞಗಳು

ಧರ್ಮದ ತತ್ತ್ವಗಳು ವಿಚಾರವಾದರೆ, ಅದರ ಶ್ರೇಷ್ಠತಮ ಕ್ರಿಯಾ ರೂಪವೇ ಯಜ್ಞ ಎನಿಸುತ್ತದೆ. ಮಾನವನ ಸಂಪೂರ್ಣ ಜೀವನವು ಯಜ್ಞರೂಪವಾಗ ಬೇಕೆಂಬುದನ್ನು ನಮ್ಮ ಪ್ರಾಚೀನ ಋಷಿಗಳು ಆಡಿ, ಮಾಡಿ, ತೋರಿಸಿದ್ದಾರೆ. ಸತ್ಯ, ದಯೆ, ಅಹಿಂಸೆ, ದಾನ ಇವೆಲ್ಲ ಯಜ್ಞದ ಪ್ರಧಾನ ಲಕ್ಷಣಗಳು. ಹಿಂದೂ ಧರ್ಮದಲ್ಲಿ ಯಜ್ಞಕ್ಕೆ ಪ್ರಾಧಾನ್ಯ ನೀಡಲಾಗಿದೆ.

ಕೃತಜ್ಞತೆಯು ಮಾನವನ ನೈಸರ್ಗಿಕ ಗುಣ. ಇದು ಹೆಚ್ಚಾದಷ್ಟೂ ನಾಗರಿಕ ಸ್ಥಿತಿ ಉತ್ತಮಗೊಳ್ಳುತ್ತದೆ. ನಾವು ಭೂಮಿಗೆ ಬಂದಂದಿನಿಂದ, ಈ ಬ್ರಹ್ಮಾಂಡವು ಕೊಟ್ಟುದನ್ನು ತಿಂದು ನಾವು ಬೆಳೆಯುತ್ತಿದ್ದೇವೆ. ಪಂಚಭೂತಗಳು ಹಾಗೂ ಎಲ್ಲ ಜೀವಜಂತುಗಳು ನಮಗೆ ನಾನಾ ರೀತಿಯಲ್ಲಿ ಉಪಕಾರ-ಸಹಾಯ ಮಾಡುತ್ತಿವೆ. ಅವುಗಳಿಂದ ತೆಗೆದುಕೊಳ್ಳುವುದು ನಾವು ಸಾಲ ಮಾಡಿದಂತೆ. ಆದುದರಿಂದ ಆ ಸಾಲ ಅಥವಾ ಋಣದಲ್ಲಿ ಸಾಧ್ಯವಿದ್ದಷ್ಟನ್ನಾದರೂ ತೀರಿಸಲು ಸರ್ವ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದಲೇ ಹಿರಿಯರು ಪಂಚಯಜ್ಞಗಳನ್ನು ಮಾಡಿ ಋಣ ಮುಕ್ತರಾಗಬೇಕೆಂದು ಹೇಳುತ್ತ ಬಂದಿದ್ದಾರೆ.

## 1) ಬ್ರಹ್ಮ ಯಜ್ಞ

ಇದನ್ನು ಜ್ಞಾನ ಯಜ್ಞವೆಂದೂ ಕರೆಯಬಹುದು. ವೇದಶಾಸ್ತ್ರ ಪುರಾಣ ಕಾವ್ಯ ಇತಿಹಾಸ ಪ್ರಬಂಧಗಳ ಅಧ್ಯಯನ ಮತ್ತು ಅಧ್ಯಾಪನ, ಸಂಧ್ಯಾವಂದನೆ, ಸ್ತೋತ್ರ ಪಾರಾಯಣ ಈ ಯಜ್ಞದಲ್ಲಿ ಸೇರುತ್ತದೆ. ಜೀವಾತ್ಮನನ್ನು ತೊರೆಯದೆ, ಪರಮಾತ್ಮನನ್ನು ಮರೆಯದೆ, ಭೌತಿಕ ಜೀವನವನ್ನು ಪರಿಶುದ್ಧಗೊಳಿಸಿ, ಶಾಂತಿ ಸಮಾಧಾನಗಳನ್ನು ಅನುಭವಿಸುವ ಚೈತನ್ಯವನ್ನು ತಂದು ಕೊಡುವುದೇ ಸಂಧ್ಯಾ ವಂದನೆ. ಬ್ರಹ್ಮ ಯಜ್ಞದಲ್ಲಿ ಶರೀರದ ಅಂಗಗಳನ್ನು ಬಲಿಷ್ಠ ಹಾಗೂ ಪವಿತ್ರ ಆಗಿಸಬೇಕೆಂಬ ಸಂಕಲ್ಪವಿದೆ, ಚಿದಚಿದೀಶ್ವರ ಎಂಬ ಅನಾದಿ ತತ್ತ್ವಗಳ ಸತ್ಯಜ್ಞಾನ ವನ್ನು ಪಡೆಯಬೇಕೆಂಬ ಆದರ್ಶವಿದೆ, ಮನಸ್ಸನ್ನು ವಿಶಾಲಗೊಳಿಸಿಕೊಂಡು ಎಲ್ಲೆಡೆ ಯಲ್ಲಿಯೂ ಇರುವ ಪರಮಾತ್ಮನ ಅಸ್ತಿತ್ವದ ಅನುಭೂತಿಯನ್ನು ಪಡೆದುಕೊಳ್ಳ ಬೇಕೆಂಬ ಕಾಮನೆ ಇದೆ, ವೇದಗಳ ಆದೇಶದಂತೆ ಜೀವನವನ್ನು ನಡೆಸಬೇಕೆಂಬ ಹಂಬಲವಿದೆ.

ಮುಖ್ಯವಾಗಿ ನಮ್ಮ ಪ್ರಾಚೀನ ಋಷಿಗಳು ಒಂದು ರೀತಿಯಲ್ಲಿ ಆಧ್ಯಾತ್ಮಿಕ ವೀರರು ಆಗಿದ್ದು ನಮಗೆ ಉತ್ತಮವಾದ ಜ್ಞಾನ ನಿಧಿಯನ್ನು ಬಿಟ್ಟು ಹೋಗಿದ್ದಾರೆ. ಅದನ್ನು ಸರಿಯಾಗಿ ಓದಿ ತಿಳಿದುಕೊಂಡು ಆ ಮೇಲೆ ಇತರರಿಗೆ ತಿಳಿಸಿದರೆ ಮಾತ್ರ ಆ ಮಹರ್ಷಿಗಳಿಗೆ ತೃಪ್ತಿಯಾಗುತ್ತದೆ. ಇದೇ ಬ್ರಹ್ಮಯಜ್ಞ ಅಥವಾ ಋಷಿ ಯಜ್ಞದ ಸಾರ. ಇದು ನಾಲ್ಕು ಆಶ್ರಮದವರೂ ಮಾಡಬೇಕಾದುದು.

## 2) ದೇವ ಯಜ್ಞ

ನಾವು ಈ ಭೂಲೋಕದಲ್ಲಿರುವುದಕ್ಕೆ ಏನು ಬೇಕೋ ಅದನ್ನೆಲ್ಲ ಅಣಿ ಮಾಡಿಟ್ಟು, ಬಂದ ಮೇಲೆ ಯಾವ ಕಾಲಕ್ಕೆ ಏನುಬೇಕೋ ಅದನ್ನೆಲ್ಲ ಒದಗಿಸಿಕೊಟ್ಟು, ನಮ್ಮನ್ನು ಸದಾ ಅಪಾಯಗಳಿಂದ ರಕ್ಷಿಸುತ್ತಿರುವ ದೇವರಿಗೆ ನಾವು ಕೃತಜ್ಞತಾ ಪೂರ್ವಕವಾಗಿ ಪ್ರಾರ್ಥನೆಯನ್ನು ಸಲ್ಲಿಸುವುದು ಒಂದು ಯಜ್ಞ.

ಈ ದೇವ ಯಜ್ಞದಲ್ಲಿ ಪೂಜೆ, ಧ್ಯಾನ, ತಪಸ್ಸು, ಹೋಮ, ಹವನ ಎಲ್ಲ ಸೇರುತ್ತದೆ. ಸೂರ್ಯೋದಯ ಹಾಗೂ ಸೂರ್ಯಾಸ್ತಗಳ ಸಮಯದಲ್ಲಿ ಮಾಡುವ ಹವನ ಹೋಮಗಳಲ್ಲಿ ಅಂದರೆ ಸಮಿತ್ತು, ತುಪ್ಪ ಮುಂತಾದ ವಸ್ತುಗಳನ್ನು ಮಂತ್ರ ಯುಕ್ತವಾಗಿ ಅಗ್ನಿಯಲ್ಲಿ ಸಮರ್ಪಿಸಿದಾಗ, ಉಂಟಾದ ಹೊಗೆಯು ವಾತಾವರಣದಲ್ಲಿನ ರೋಗಾಣುಗಳನ್ನು ಹೋಗಲಾಡಿಸಿ, ಸುಗಂಧವನ್ನು ಹರಡಿ, ಸಾವಿರಾರು ಜನರ ದೇಹಕ್ಕೆ ಆರೋಗ್ಯವನ್ನು, ಮನಸ್ಸಿಗೆ ಉಲ್ಲಾಸವನ್ನು ನೀಡುತ್ತದೆ. ಜೊತೆಗೆ ಸ್ವಾರ್ಥ ಭಾವನೆಯನ್ನು ನಾಶಗೊಳಿಸಿ, ಹೃದಯ ವೈಶಾಲ್ಯತೆಯನ್ನುಂಟು ಮಾಡಿ, ಈಶ್ವರಾರ್ಪಣ ಬುದ್ಧಿ ಬರುವಂತೆ ಮಾಡುತ್ತದೆ. ಸದಾ ಸಂಚಾರ ಮಾಡುತ್ತಿರುವ

ಹಾಗೂ ಅವಶ್ಯ ವಸ್ತುಗಳನ್ನೆಲ್ಲ ಶೇಖರಿಸಿ ಇಟ್ಟುಕೊಳ್ಳಲಾಗದ ಸಂನ್ಯಾಸಿಗಳನ್ನು ಬಿಟ್ಟು ಉಳಿದ ಮೂರು ಆಶ್ರಮದವರು ಇದನ್ನು ಮಾಡಬೇಕು.

### 3) ಪಿತೃಯಜ್ಞ

ನಮ್ಮ ಜನಕ್ಕೆ ಹಾಗೂ ಈಗಿನ ಸ್ಥಿತಿಗೆ ಕಾರಣರಾದವರು ನಮ್ಮ ಮಾತಾ ಪಿತೃಗಳು. ಅವರು ನಮ್ಮ ಕಣ್ಣು ಮುಂದೆ ಇಲ್ಲದಿದ್ದರೂ, ಅವರು ಯಾವ ಲೋಕ ದಲ್ಲೇ, ಯಾವ ದೇಹದಲ್ಲೇ ಇರಲಿ ಅವರಿಗೆ ಒಳಿತಾಗಲೆಂದು ಪ್ರಾರ್ಥಿಸುವುದು ನಮ್ಮ ಆದ್ಯ ಕರ್ತವ್ಯ.

ಮರಣ ಹೊಂದಿದ ಮಾತಾಪಿತೃಗಳಿಗೆ ಶ್ರಾದ್ಧ, ಪಿಂಡ ದಾನ, ತಿಲತರ್ಪಣ ಮಾಡುವುದು ಮುಖ್ಯ ಎಂಬುದು ಹೆಚ್ಚು ಜನರ ನಂಬಿಕೆ. ಆದರೆ ಇವುಗಳಿಂದ ಪುಣ್ಯಾತ್ಮರಾದವರಿಗೆ ಪ್ರಯೋಜನವಿಲ್ಲ, ಪಾಪಾತ್ಮರಾದವರಿಗೆ ಇವು ವ್ಯರ್ಥ ಎಂದು ಹೇಳುವವರೂ ಇದ್ದಾರೆ.

ಪ್ರತಿಯೊಬ್ಬ ಜೀವನೂ ತಾನು ಮಾಡಿದ ಸತ್ಕರ್ಮ, ದುಷ್ಕರ್ಮಗಳಿಗೆ ತಾನೇ ಜವಾಬ್ದಾರ. ಪ್ರತಿಯೊಬ್ಬ ಜೀವನಿಗೂ ಅವನವನ ಕರ್ಮಾನುಸಾರವಾಗಿ ಊರ್ಧ್ವಗತಿ ಅಥವಾ ಅಧೋಗತಿ ಪ್ರಾಪ್ತವಾಗುತ್ತದೆ. ಆದುದರಿಂದ ಅಂಥವರಿಗಾಗಿ ಇತರರು ಮಾಡುವ ಯಾವ ಕರ್ಮವೂ, ಭಗವಂತನ ಕರ್ಮ ಫಲದ ನ್ಯಾಯ ಸಿದ್ಧಾಂತವನ್ನು ಬದಲಾಯಿಸಲಾರದು. ಪುಣ್ಯಾತ್ಮರಾಗಿದ್ದವರಿಗೆ ಊರ್ಧ್ವ ಗತಿಯನ್ನು ಪಡೆಯಲು ಇಲ್ಲಿ ಹಾಕುವ ಪಿಂಡ, ತಿಲತರ್ಪಣಗಳು ಅನಾವಶ್ಯಕ. ಪಾಪಾತ್ಮರಾದವರಿಗೆ ಇಲ್ಲಿ ಮಾಡುವ ಶ್ರಾದ್ಧಾದಿ ಕರ್ಮಗಳಿಂದ ಅಧೋಗತಿಯನ್ನು ತಪ್ಪಿಸುವುದು ಸಾಧ್ಯವಿಲ್ಲ. ಈ ಕಾರಣದಿಂದ ಶ್ರಾದ್ಧ, ಪಿಂಡಪ್ರದಾನ, ತಿಲತರ್ಪಣಗಳು ಅರ್ಥಹೀನ ಆಡಂಬರ ಕ್ರಿಯೆಗಳೆಂಬುದು ಆಧುನಿಕ ವಿಚಾರವಂತರ ಅಭಿಪ್ರಾಯ.

ಆದರೂ ಬಂಧುಮಿತ್ರರ ಜೊತೆಯಲ್ಲಿ ಸಹ ಭೋಜನ, ಯೋಗ್ಯ ಬ್ರಾಹ್ಮಣರಿಗೆ ಅನ್ನ, ವಸ್ತ್ರ, ಧನಗಳ ದಾನ, ಇವುಗಳಿಗೆ ಅವಕಾಶ ಮಾಡಿಕೊಡುವ ಶ್ರಾದ್ಧ ಕರ್ಮವು ಒಂದು ರೀತಿಯಲ್ಲಿ ಸಾಮಾಜಿಕ ಏಕತೆಗೆ ಸಹಾಯ ಮಾಡುತ್ತದೆಂದು ಒಪ್ಪಿ ಕೊಳ್ಳಬಹುದು.

ಶ್ರಾದ್ಧವೆಂದರೆ ಶ್ರದ್ಧೆಯಿಂದ ಸಲ್ಲಿಸುವ ಸೇವೆ, ತರ್ಪಣವೆಂದರೆ ತೃಪ್ತಿ ನೀಡುವ ಕಾರ್ಯ. ಈ ಎರಡು ಕಾರ್ಯಗಳೂ ಸಶರೀರಿಗಳಾಗಿ ಜೀವಂತವಾಗಿರುವ ಮಾತಾಪಿತೃಗಳಿಗೆ ಮಕ್ಕಳು ಸಲ್ಲಿಸಬೇಕಾದ ಸೇವೆಗಳೇ ಹೊರತು, ಮೃತರಾದವ ರಿಗಲ್ಲ. ತಾಯಿ ತಂದೆಯರನ್ನು ಪ್ರತಿನಿತ್ಯವೂ ಪ್ರಸನ್ನ, ತೃಪ್ತ, ಸುಖಿ ಆಗಿರು ವಂತೆ ಅವರು ಯಾವ ರೀತಿಯ ಕಷ್ಟ, ನೋವುಗಳನ್ನು ಅನುಭವಿಸದಂತೆ, ಇರಿಸು ವುದು ಅತಿ ಮುಖ್ಯವಾದುದು. ಜೀವಿಸಿರುವಾಗ ಯಾವ ರೀತಿಯ ಪ್ರೇಮ, ಸಹಾಯ, ಸಹಕಾರಗಳನ್ನು ಕೊಡದೆ, ಅವರೊಡನೆ ಉದಾಸೀನ–ತಿರಸ್ಕಾರಗಳಿಂದ

ವ್ಯವಹರಿಸಿ, ಸತ್ತ ನಂತರ ಅವರ ಹೆಸರಿನಲ್ಲಿ ದುಂದು ವೆಚ್ಚ ಮಾಡಿ ಬಂಧು ಮಿತ್ರರಿಂದ ಹೊಗಳಿಸಿಕೊಳ್ಳಲು ಯತ್ನಿಸುವುದು ಕೇವಲ ಡಂಭಾಚಾರವಾಗುತ್ತದೆ.

ಮುಖ್ಯವಾಗಿ ತಾಯಿತಂದೆಗಳಿಂದ ನಮಗೆ ಆಗಿರುವ ಉಪಕಾರವನ್ನು ಸ್ಮರಿಸಿ, ಅವರ ಹೆಸರು ಚಿರಸ್ಥಾಯಿಯಾಗಿ ಉಳಿಯುವಂತಹ ಸತ್ಕಾರ್ಯ, ದಾನಧರ್ಮ ಮಾಡುವುದೇ ಸರಿಯಾದುದು. ಮಾತಾಪಿತೃಗಳಿಗೆ ಶ್ರದ್ಧಾ ಭಕ್ತಿಗಳನ್ನು ತೋರಿಸದವನು ಕೃತಘ್ನ. ಅವನಲ್ಲಿ ಯಾವ ಪವಿತ್ರ ಭಾವನೆಗಳೂ ಉದಯಿಸಲಾರವು. ಅಂಥವರು ಜಗತ್ತನ್ನು ಖಂಡಿತವಾಗಿ ಉದ್ಧರಿಸಲಾರರು.

ಯೋಗ್ಯ ಸಂತಾನವನ್ನು ಸೃಷ್ಟಿಸಿ, ಅವರನ್ನು ಸುಶಿಕ್ಷಿತ, ಸುಸಂಸ್ಕೃತರನ್ನಾಗಿ ಬೆಳೆಸಿ, ಅವರಿಂದ ಮಾನವ ಸಮುದಾಯವು ಅಭಿವೃದ್ಧಿ ಹೊಂದುವಂತೆ ಮಾಡುವುದೂ ಪಿತೃಯಜ್ಞದಲ್ಲಿ ಸೇರುತ್ತದೆ.

ಇದು ಬ್ರಹ್ಮಚಾರಿ ಹಾಗೂ ಗೃಹಸ್ಥರಿಗೆ ಸಂಬಂಧಿಸಿದ ಯಜ್ಞ.

## 4) ನರ ಯಜ್ಞ

ಇದು ಮುಖ್ಯವಾಗಿ ಗೃಹಸ್ಥರಿಗೆ ಸಂಬಂಧಿಸಿದ ಯಜ್ಞ. ನಮ್ಮ ಸಾಮಾಜಿಕ ಜೀವನವು ಸುಸೂತ್ರವಾಗಿ ಸಾಗಬೇಕಾದರೆ, ಅನೇಕ ಮಾನವರು ನಮಗಾಗಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ದುಡಿಯುತ್ತಿದ್ದಾರೆ ಎಂಬುದು ಅನೇಕರ ಗಮನಕ್ಕೆ ಬಂದಂತೆ ತೋರುವುದಿಲ್ಲ. ಅರಿತೋ, ಅರಿಯದೆಯೋ ನಾವು ಇತರರ ಸಹಾಯವನ್ನು ಸ್ವೀಕರಿಸುತ್ತಿದ್ದೇವೆ ಹಾಗೂ ಅವರಿಗೆ ಋಣಿಯಾಗಿದ್ದೇವೆ. ಆದುದರಿಂದ ಆ ಮಾನವ ಕೋಟಿಗೆ ನಮ್ಮ ಪಾಲಿನ ಸೇವೆ ಸಹಾಯಗಳನ್ನು ಹಿಂದಿರುಗಿಸಿದಾಗ ಮಾತ್ರ ಸಾಲ ತೀರಿ, ಋಣಮುಕ್ತರಾಗಬಲ್ಲೆವು.

ಕರೆಯದೆ, ತಾವಾಗಿ, ಅಕಸ್ಮಾತ್ತಾಗಿ ಬಂದ ಸಂನ್ಯಾಸಿಗಳು, ಸದಾಚಾರಿಗಳಾದ ವಿದ್ವಾಂಸರು, ಬ್ರಹ್ಮಚಾರಿಗಳು, ಶಾರೀರಕ ರೋಗಿಗಳು, ಮಾನಸಿಕ ರೋಗಿಗಳು, ಅಸಹಾಯಕರು, ಅನಾಥರು, ಅಂಗವಿಕಲರು—ಇವರನ್ನೆಲ್ಲ ಆದರದಿಂದ ಸ್ವಾಗತಿಸಿ, ಅವರಿಗೆ ಅವಶ್ಯವಾದ ಆಹಾರ, ವಸ್ತ್ರ, ವಸತಿ, ಭೂಮಿ, ವಿದ್ಯೆ, ಹಣ, ಹೆಣ್ಣು, ಔಷಧ, ಶುಶ್ರೂಷೆಗಳನ್ನು ದೊರಕಿಸಿಕೊಡಲು ನಮ್ಮಿಂದ ಸಾಧ್ಯವಿದ್ದಷ್ಟು, ಸಹಾಯ, ವ್ಯವಸ್ಥೆ ಮಾಡಬೇಕು. ಯೋಗ್ಯರಾದ ಅತಿಥಿಗಳಿಂದ ಆತ್ಮೋದ್ಧಾರದ ಉಪದೇಶ ಪಡೆದು ವರ್ತಮಾನದ ಬಗ್ಗೆ ಹೆಚ್ಚಿನ ಜ್ಞಾನವನ್ನೂ ಹಾಗೂ ಆಧ್ಯಾತ್ಮ ಜ್ಞಾನವನ್ನು ಬೆಳೆಸಿಕೊಂಡು, ಹೃದಯ ವೈಶಾಲ್ಯತೆಯನ್ನು ತಂದುಕೊಳ್ಳಬೇಕು. ಅತಿಥಿ ಸತ್ಕಾರ ಮಾಡದೆ ಭುಂಜಿಸುವುದು ಗೃಹಸ್ಥನಿಗೆ ತಕ್ಕುದಲ್ಲ. ಆದುದರಿಂದ ಇದು ಅತಿಥಿ ಯಜ್ಞವೆಂದೂ ಕರೆಸಿಕೊಳ್ಳುತ್ತದೆ.

### 5) ಭೂತ ಯಜ್ಞ

ಮಾನವರೇ ಅಲ್ಲದೆ ಪಶು ಪಕ್ಷಿ, ಕ್ರಿಮಿಕೀಟ, ಜಂತು ಸಸ್ಯ, ಪಂಚಭೂತಗಳು ಇವೆಲ್ಲ ನಮಗೆ ಹಲವು ರೀತಿಯಲ್ಲಿ ಸಹಾಯ ಮಾಡುತ್ತಿವೆ. ನಿಸ್ಸಾರವಾದುದನ್ನು, ಅಸಹ್ಯವಾದುದನ್ನು ಸ್ವೀಕರಿಸಿ, ಸಾರ, ಸುಂದರವಾದುದನ್ನು ನಮಗೆ ನೀಡುವ ಅವುಗಳಿಗೆ ನಾವು ಪ್ರೀತಿ—ಸಹಾನುಭೂತಿಗಳನ್ನು ತೋರಿಸಿ, ಅವುಗಳ ಆರೈಕೆ ಮಾಡ ಬೇಕಾದುದು ನಮ್ಮ ಕರ್ತವ್ಯ. ಜೊತೆಗೆ ಅವುಗಳಿಗೆ ಅತ್ಯಂತ ಕಡಿಮೆ ನೋವು ಮತ್ತು ಪರಿಸರಕ್ಕೆ ಅತ್ಯಂತಕಡಿಮೆ ಹಾನಿ, ಆಗುವಂತೆ ಬದುಕಲು ಪ್ರಯತ್ನಿಸಬೇಕು.

ಒಟ್ಟಿನಲ್ಲಿ ಹಿಂದೂವಿನ ಬಾಳೆಂದರೆ ಯಜ್ಞದ ಮೇಲೆ ನಿಂತ ಬಾಳು. ಮಾನವರು ಈ ಯಜ್ಞ ದೃಷ್ಟಿಯನ್ನು ಮರೆತು, ಕೇವಲ ತಮಗಾಗಿ, ತಮ್ಮ ಹೆಂಡತಿ ಮಕ್ಕಳಿಗಾಗಿ ಬಾಳಿ ಬದುಕಿದರೆ, ಆ ಸ್ವಾರ್ಥ ಬಾಳು ಶೋಚನೀಯವಾಗಿ, ಭಗವಂತನ ಉದ್ದೇಶವೇ ವ್ಯರ್ಥವಾಗುತ್ತದೆ. ಅಂತಹ ಬಾಳಿನಿಂದ ಇಹಪರಗಳೆರಡರಲ್ಲಿಯೂ ಸುಖವಿರ ಲಾರದು.

ಯಜ್ಞ ಮಾಡುವಾಗ ಎಲ್ಲರೂ ಒಂದೇ ರೀತಿಯಾದ ಕೊಡುಗೆಯನ್ನು ನೀಡ ಬೇಕಾದುದಿಲ್ಲ. ಯಾರಲ್ಲಿ ಯಾವ ವಿಧವಾದ ಒಳ್ಳೆಯದು ಅಧಿಕವಾಗಿದೆಯೋ, ಅದನ್ನೇ ಇತರರು ಉಪಯೋಗಕ್ಕಾಗಿ ನೀಡಬಹುದು. ಕೊಡುವ ವಸ್ತುವಿಗಿಂತಲೂ, ವಸ್ತುವನ್ನು ಕೊಡುವ ಮನೋಭಾವ ಮುಖ್ಯವಾದುದು. ಸಾಧ್ಯವಾದಷ್ಟು ಹೆಚ್ಚಾಗಿ ಕೊಟ್ಟು, ಸಾಧ್ಯವಾದಷ್ಟು ಕಡಿಮೆಯಾಗಿ ಸ್ವೀಕರಿಸುವುದು ಆನಂದದ ಮೂಲ ಹಾಗೂ ಸದ್ಗತಿಗೆ ಕಾರಣ ಎನ್ನುವುದನ್ನು ಮರೆಯಬಾರದು. ದೇಶವನ್ನು ಬಡತನದಿಂದ ಮೇಲೆತ್ತುವುದಕ್ಕೆ, ಜನರ ಆರೋಗ್ಯ ವರ್ಧನೆಗೆ, ಮೂಢ ನಂಬಿಕೆಗಳ ನಿವಾರಣೆಗೆ, ಜನರಲ್ಲಿ ಆಶಾಭಾವನೆಯನ್ನು ಮೂಡಿಸುವುದಕ್ಕೆ, ಮಾನವರೆಲ್ಲರಲ್ಲೂ ಈ ಯಜ್ಞ ದೃಷ್ಟಿ ಬರಬೇಕಾದುದು ಅತ್ಯಾವಶ್ಯಕ. ಆಗ ಇಹವು ಸುಖಮಯ, ಪರವು ಸ್ವಯಂ ಸಿದ್ಧ ಆಗುವುದರಲ್ಲಿ ಸಂದೇಹವಿಲ್ಲ. ಇದನ್ನೇ ಸಾಮಾಜಿಕ ಪ್ರಜ್ಞೆ ಎನ್ನುತ್ತಾರೆ. ಇದು ಇರುವ ದೇಶದಲ್ಲಿ ಯಾವುದಕ್ಕೂ ಕೊರತೆ, ಅಭಾವ ಇರುವು ದಿಲ್ಲ.

## 4. ದಾನ

ದಮನ ದೇವತೆಗಳಿಗೆ, ದಯೆ ರಾಕ್ಷಸರಿಗೆ,ದಾನ ಮಾನವರಿಗೆ, ಮುಖ್ಯವೆಂದು ಬ್ರಹ್ಮನ ಮಾನಸಪುತ್ರರಾದ ನಾರದ ಮಹರ್ಷಿಗಳು ಉಪದೇಶಿಸಿದ್ದಾರೆ.

ಸುಖವಾಗಿ ಬಾಳಲು ಆಶಿಸುವ ಮಾನವನಿಗೆ ಹಣವೇ ಎಲ್ಲಕ್ಕಿಂತ ಮುಖ್ಯ ವಾದುದು. ಸುಖದ ಮೂಲವಾದ ಈ ಹಣವನ್ನು ಸಂಪಾದಿಸಲು ಮಾನವನು ಒಳಿತು, ಕೆಡಕು ಎರಡೂ ಮಾರ್ಗಗಳನ್ನು ಅವಲಂಬಿಸುತ್ತಾನೆ. ಹೀಗೆ ಗಳಿಸಿದ ಹಣ

ವನ್ನು ಸ್ವಾರ್ಥಕ್ಕಾಗಿ, ನೀಚಕಾರ್ಯಕ್ಕಾಗಿ ಬಳಸುವ ಪ್ರವೃತ್ತಿಯೂ ಕಾಣಬರುತ್ತಿದೆ. ಮೊದಲು ಸುಖದ ಮೂಲವಾಗಿದ್ದ ಹಣವು ಇತ್ತೀಚಿಗೆ ಪ್ರತಿಷ್ಠೆಯ ಸಂಕೇತವೂ ಆಗಿರುವುದು ಶೋಚನೀಯ ಸಂಗತಿ. ಅಂದರೆ ಹಣವು ಸದ್ವಿನಿಯೋಗವಾಗದೆ ದುರ್ವಿನಿಯೋಗವಾಗುತ್ತಿರುವ ಸಂದರ್ಭಗಳೇ ಹೆಚ್ಚಾಗಿವೆ. ಸ್ವಾರ್ಥಸಾಧನೆಗಾಗಿ, ಕಾಮನೆಗಳನ್ನು ಪೂರೈಸಿಕೊಳ್ಳಲು, ದುಂದುವೆಚ್ಚ ಮಾಡುವ ಜನರು ಸಾಮಾಜಿಕ ಅಭಿವೃದ್ಧಿ ಕಾರ್ಯಗಳಿಗೆ, ಧರ್ಮಕಾರ್ಯಗಳಿಗೆ ಧನಸಹಾಯ ಮಾಡಲು ಹಿಂಜರಿಯುತ್ತಾರೆ. "ತಾ ಎನ್ನುವುದು ತಾತನ ಕಾಲದಿಂದಲೂ ಉಂಟು, ಆದರೆ ಕೋ ಎನ್ನುವುದು ಕುಲಕೋಟಿಯಲ್ಲೇ ಇಲ್ಲ" ಎನ್ನುವ ಗಾದೆಯನ್ನು ನಿಜಮಾಡುವವರೂ ಇದ್ದಾರೆ. ಕೆಲವರು ಅಪರೂಪವಾಗಿ ಸದುದ್ದೇಶಕ್ಕಾಗಿ ದಾನ ಕೊಟ್ಟರೂ, ಅದರ ಹಿನ್ನೆಲೆಯಲ್ಲಿ ಪ್ರತಿಷ್ಠೆಯನ್ನು ಮೆರೆಸುವ, ಮಾನಸನ್ಮಾನಗಳನ್ನು ಪಡೆಯುವ ಇನ್ನೂ, ಹೆಚ್ಚು ಹಣ ಸಂಪಾದಿಸುವ, ಆಸೆ ಅಡಗಿರುವುದು ಕಾಣಬರುತ್ತದೆ. ಈ ರೀತಿಯ ದಾನ ಉತ್ತಮವೆನಿಸಲಾರದು.

ದಾನ ಮಾಡುವುದರಲ್ಲಿ ವ್ಯಕ್ತಿಯ ವಾತ್ಸಲ್ಯ, ತ್ಯಾಗಬುದ್ಧಿ, ನಿಷ್ಕಲ್ಮಷ ಮನಸ್ಸು, ನೈಜವಾದ ಅಂತಃಕರಣ, ಇವು ಮುಖ್ಯವಾದುವು. ತನಗೆ ಉಪಕಾರ ಮಾಡದಿರುವವರಿಗೆ, ಕೇವಲ ಕರ್ತವ್ಯ ಭಾವನೆಯಿಂದ ನೀಡುವುದು ಸಾತ್ವಿಕ ದಾನ ; ಪ್ರತ್ಯುಪಕಾರ ದೃಷ್ಟಿಯಿಂದ ಅಥವಾ ಫಲವನ್ನುದ್ದೇಶಿಸಿ ಮಾಡುವುದು ರಾಜಸ ದಾನ ; ದೇಶ, ಕಾಲ, ಪಾತ್ರಗಳನ್ನು ಗಮನಿಸದೆ ತಿರಸ್ಕಾರದಿಂದ ಕೊಡುವುದು ತಾಮಸ ದಾನ. ಇವುಗಳಲ್ಲಿ ಸಾತ್ವಿಕದಾನವೇ ಶ್ರೇಷ್ಠವಾದುದು. ನಾನು, ನನ್ನದು ಎಂಬ ಅಹಂಕಾರ, ಮಮಕಾರಗಳನ್ನು ತೊರೆದು ನಿಸ್ವಾರ್ಥ ಬುದ್ಧಿಯಿಂದ ದೀನ ದಲಿತರಿಗೆ, ಆವಶ್ಯಕತೆ ಇರುವವರಿಗೆ ದಾನ ಮಾಡುವುದು ಅತ್ಯಾವಶ್ಯಕ. ಇದು ಗೃಹಸ್ಥರ ಆದ್ಯ ಕರ್ತವ್ಯವೂ ಹೌದು.

ಭಾರತವು ದಾನಶೂರರಿಗೆ ಹೆಸರಾಂತ ನಾಡು. ಬಲಿ, ಕರ್ಣ, ಶಿಬಿ, ಹರಿಶ್ಚಂದ್ರ, ದಿಲೀಪ, ಶ್ರೀರಾಮ, ಶಬರಿ, ಇವರಲ್ಲಿ ಮುಖ್ಯರಾದವರು. ಆಧುನಿಕ ಕಾಲದಲ್ಲಿ ಸ್ವರಾಜ್ಯವನ್ನು ಸಂಪಾದಿಸುವಾಗ ದೇಶಕ್ಕಾಗಿ ತನು, ಮನ, ಧನಗಳನ್ನೆಲ್ಲ ದಾನ ಮಾಡಿದ ಅನೇಕ ರಾಷ್ಟ್ರನಾಯಕ–ನಾಯಕಿಯರನ್ನು ನಾವು ಗುರುತಿಸಬಹುದು. ಈ ಹಿರಿಯರ ಜಯಂತಿಯನ್ನು ಆಚರಿಸಿ, ಇವರು ತೋರಿಸಿದ ಮಾರ್ಗದಲ್ಲಿ ಹೋಗದಿರುವುದರಿಂದಲೇ ಜನರು ಕಪ್ಪುಹಣ ಸಂಪಾದನೆ, ಕಳ್ಳ ಸಾಗಾಣಿಕೆ, ಮುಂತಾದ ಕೆಟ್ಟ ದಾರಿಯಲ್ಲಿ ಹೋಗುತ್ತಿದ್ದಾರೆ. ಕೋಟ್ಯಂತರ ಜನರು ಹೊಟ್ಟೆಗಿಲ್ಲದೆ, ಮೈಮುಚ್ಚಲು ಬಟ್ಟೆ ಇಲ್ಲದೆ, ಇರಲು ನೆರಳಿಲ್ಲದೆ ಪರಿತಪಿಸುತ್ತಿದ್ದರೂ, ಕೆಲವೇ ಜನರು ಸುಖ ಭೋಗಗಳಲ್ಲಿ ಓಲಾಡುತ್ತಿದ್ದಾರೆ. ಎಲ್ಲಿಯವರೆಗೆ ಜನರಲ್ಲಿ ತ್ಯಾಗ, ಔದಾರ್ಯ, ಸುಖ, ದುಃಖಗಳನ್ನು ಹಂಚಿಕೊಳ್ಳುವ ಪ್ರವೃತ್ತಿ, ದಾನಶೀಲತೆ ಬೆಳೆಯುವುದಿಲ್ಲವೋ, ಅಲ್ಲಿಯವರೆಗೆ ಆ ದೇಶವು ದೊಡ್ಡದೆನಿಸಿಕೊಳ್ಳಲಾರದು. ಇದು ಆಗಬೇಕಾದರೆ

ಜನರಲ್ಲಿ ಲೌಕಿಕ ದೃಷ್ಟಿಯೊಂದಿಗೆ ಸ್ವಲ್ಪ ಆಧ್ಯಾತ್ಮ ಪ್ರವೃತ್ತಿಯೂ ಬೆಳೆಯಬೇಕಾದುದು ಅತ್ಯಾವಶ್ಯಕ.

ನಮ್ಮ ನಾಡಿನಲ್ಲಿ ದಾನ, ಸೇವೆ, ತ್ಯಾಗ, ನಿಸ್ವಾರ್ಥಗಳ ಮಹತ್ವವನ್ನು ಸಾಹಿತಿಗಳು ಯಾವಾಗಲೂ ಎತ್ತಿಹಿಡಿದಿದ್ದಾರೆ.

ದಾನಂ ಭೋಗೋನಾಶಸ್ತಿಸ್ರೋ ಗತಯೋಭವಂತಿ ವಿತ್ತಸ್ಯ ।
ಯೋನದದಾತಿ ನಭುಂಕ್ತೇತಸ್ಯ ತೃತೀಯಾಗತಿರ್ಭವತಿ ॥

ಎಂಬಂತೆ ಆರ್ಜಿಸಿದ ಧನವನ್ನು ಪೂರ್ಣವಾಗಿ ಭೋಗಿಸಲು ಸಾಧ್ಯವಿಲ್ಲವಾದುದರಿಂದ ದಾನ ಮಾಡುವುದು ಅವಶ್ಯ. ಇಲ್ಲದಿದ್ದರೆ ಅದು ಕಳ್ಳರ ಅಥವಾ ಸರ್ಕಾರದ ಪಾಲಾಗುತ್ತದೆ. ದಾನ ಮಾಡುವುದೇ ಕೈಗಳಿಗೆ ಭೂಷಣ. ಜೇನು ಹುಳುಗಳು ಕೂಡಿಟ್ಟ ಮಧು ಇತರರ ಪಾಲಾಗುವುದನ್ನು ನಾವೆಲ್ಲ ಕಂಡಿದ್ದೇವೆ.

ತಪಃಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ಯಜ್ಞಮೇವಾಹುಃ ದಾನಮೇವ ಕಲೌಯುಗೇ ॥

ಎಂಬಂತೆ ಕೃತಯುಗದಲ್ಲಿ ತಪಸ್ಸನ್ನು ಆಚರಿಸುವುದರಿಂದ, ತ್ರೇತಾಯುಗದಲ್ಲಿ ಜ್ಞಾನಾರ್ಜನೆಯಿಂದ, ದ್ವಾಪರ ಯುಗದಲ್ಲಿ ಯಜ್ಞ ಮಾಡುವುದರಿಂದ ಸಿಗುವ ಸತ್ಫಲ-ಸದ್ಗತಿಗಳು, ಕಲಿಯುಗದಲ್ಲಿ ಕೇವಲ ದಾನ ನೀಡುವುದರಿಂದಲೇ ಸಿಗುತ್ತವೆ. ನಾಡಿನಲ್ಲಿ ಶೂರರು, ಪಂಡಿತರು, ವಾಗ್ಮಿಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಬಂದರೂ, ದಾನಿಗಳು ಹುಟ್ಟುವುದು ಬಹು ದುರ್ಲಭವಾದ ಕಾರಣ ಸಮಾಜದಲ್ಲಿ ದುಃಖ, ನೋವು ಹೆಚ್ಚಾಗಿದೆ.

ಕೊಟ್ಟಿದ್ದು ತನಗೆ, ಬೈತಿಟ್ಟದ್ದು ಪರರಿಗೆ ಎಂಬುದನ್ನು ಯಾವಾಗಲೂ ಜ್ಞಾಪಕದಲ್ಲಿಟ್ಟುಕೊಂಡಿರುವುದು ಒಳ್ಳೆಯದು. ಜಗತ್ತಿನ ಎಲ್ಲ ಜೀವಂತ ಧರ್ಮಗಳೂ ದಾನಮಾಡಬೇಕೆಂದು ಒತ್ತಿ ಹೇಳಿವೆ.

ದಾನೇನ ಭೂತಾನಿ ವಶೀಭವಂತಿ
ದಾನೇನ ವೈರಾಣ್ಯಪಿಯಾಂತಿ ನಾಶಂ ।
ಪರೋಽಪಿ ಬಂಧುತ್ವಮುಪೈತಿ ದಾನೈ
ರ್ದಾನಂಹಿ ಸರ್ವವ್ಯಸನಾನಿ ಹಂತಿ ॥

ಎಂಬಂತೆ ದಾನ ಮಾಡುವುದರಿಂದ ಇತರ ಜೀವಿಗಳು ವಶರಾಗುತ್ತಾರೆ. ವೈರತ್ವ ನಾಶವಾಗುತ್ತದೆ. ಶತ್ರುಗಳು ಮಿತ್ರರಾಗುತ್ತಾರೆ. ಎಲ್ಲ ರೀತಿಯ ದುಃಖಗಳೂ ನಾಶಗೊಳ್ಳುತ್ತವೆ.

ಭೂಮಿ, ಅನ್ನ, ವಸ್ತ್ರ, ಗೃಹ, ನೀರು, ಔಷಧಿ, ಹಾಸಿಗೆ, ಚಿನ್ನ, ಧನ, ಧಾನ್ಯ, ಗೋವು, ವಿದ್ಯೆ, ಹಣ್ಣು, ನೇತ್ರ, ಕನ್ಯೆ, ಶ್ರಮ, ರಕ್ತ, ಗ್ರಂಥ, ಪತ್ರಿಕೆ, ಪೀಠ-ಪಾಠೋಪಕರಣಗಳು—ಇವು ಉಳ್ಳವರು ಇಲ್ಲದವರಿಗೆ ದಾನ ಕೊಡಲು ಯೋಗ್ಯವಾದುವು. ಮಾನವ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಲು ಸುಲಭಮಾರ್ಗ

ವಾದ ದಾನದಿಂದ, ಆತ್ಮೋದ್ಧಾರದ ಜೊತೆಗೆ ಲೋಕಕಲ್ಯಾಣವನ್ನೂ ಸಾಧಿಸಲು ಸಾಧ್ಯ. ಆದಕಾರಣ ಮಾನವರೆಲ್ಲರೂ ದಾನಿಗಳಾಗಬೇಕು.

## 5. ಭಕ್ತಿ

ಮಾನವನು ತನ್ನಲ್ಲಿ ಸ್ವಾಭಾವಿಕವಾಗಿರುವ ಪ್ರೀತಿಯ ಭಾವನೆಯನ್ನು ಪರಿಶುದ್ಧ, ವಿಕಾಸ, ವಿಸ್ತಾರ ಮಾಡಿಕೊಳ್ಳುವುದರಿಂದ ಅನಂತ ಪ್ರೇಮದೊಡೆಯನಾದ ಭಗವಂತ ನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಜನನಮರಣರಹಿತ, ನಿತ್ಯಸತ್ಯ ಆದ ಪರ ಬ್ರಹ್ಮನೆಡೆಗೆ ಹೊರಹೊಮ್ಮಿ ಹರಿಯುವ ಪರಿಶುದ್ಧ, ದೋಷಾತೀತ, ನಿರ್ಹೇತುಕ ಆದ ಗಾಢ ಪ್ರೇಮವೇ ಭಕ್ತಿ ಎನಿಸುತ್ತದೆ. ದೈವ-ಜೀವರುಗಳಲ್ಲಿನ ಆಕರ್ಷಣೆ, ಎಳೆತ ಸೆಳೆತಗಳು, ಪರಮ ಪ್ರೇಮ ರೂಪವನ್ನು ತಳೆದಾಗ, ಭಕ್ತಿಯಾಗುತ್ತದೆ. ಅಂದರೆ ಭಗವಂತನ ಕರುಣೆ ಮತ್ತು ಭಕ್ತನ ಭಕ್ತಿ ಇವುಗಳ ಮೂಲಕವೇ ದೈವಜೀವರು ಒಬ್ಬರನ್ನೊಬ್ಬರು ಸಾರಿ ಸೇರಬಹುದು, ಅರಿತು ಬೆರೆಯಬಹುದು. ಭಕ್ತಿಯಲ್ಲಿರ ಬೇಕಾದುದು ಶ್ರದ್ಧೆ, ನಿಷ್ಠೆ ಮತ್ತು ಪೂಜೆಗಳೇ ಆಗಿವೆ.

ಚಂಡಮಾರುತ, ಸಿಡಿಲು, ದುಷ್ಟಪ್ರಾಣಿ, ಪ್ರವಾಹ, ರೋಗ ಮುಂತಾದ ದೈವೀ ಪ್ರಕೋಪಗಳಿಂದ ರಕ್ಷಣೆ ಪಡೆಯಲು, ಪಶುಪಾಲನೆ-ವ್ಯವಸಾಯಗಳಲ್ಲಿ ಅಭಿವೃದ್ಧಿ ಹೊಂದಲು, ಸುಖಜೀವನಕ್ಕೆ ಅವಶ್ಯವಾದ ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸುಗಳನ್ನು ಪಡೆಯಲು, ಮಾನವರು ದೇವದೇವತೆಗಳಿಗೆ ಪಶು ಬಲಿಯನ್ನು ನೀಡಿ, ಯಾಗಯಜ್ಞಮಾಡಿ, ಪ್ರಕೃತಿ ಮಾತೆ–ಶಕ್ತಿಗಳನ್ನು ಸ್ತುತಿಸಿ ಆರಾಧಿಸುತ್ತಿದ್ದರು. ಜೊತೆಗೆ ಸ್ವಾಸ್ಥ್ಯರಕ್ಷಣೆ, ದೀರ್ಘಾಯುಸ್ಸು, ಶತ್ರುಗಳ ಮೇಲೆ ಜಯ, ಸುಖಮಯ ವೈವಾಹಿಕ ಜೀವನ, ಸನ್ಮಾರ್ಗದರ್ಶನ-ಇವುಗಳಿ ಗಾಗಿಯೂ ಇವುಗಳ ಅಧಿದೇವತೆ ಎಂದು ನಂಬಿದ್ದ ಅಗ್ನಿ, ವಾಯು, ಇಂದ್ರ, ವರುಣ, ಉಷಸ್ಸು, ಸೂರ್ಯ ಮುಂತಾದವರನ್ನು ನವವಿಧ ಭಕ್ತಿಯಿಂದ ಪ್ರಾರ್ಥಿಸುತ್ತಿದ್ದರು. ಕಾಲಾನಂತರದಲ್ಲಿ ಅಗ್ನಿಯ ಬದಲು ಬ್ರಹ್ಮ, ವಾಯುವಿನ ಬದಲು ರುದ್ರ, ಸೂರ್ಯನ ಬದಲು ವಿಷ್ಣು ಎಂಬೀ ತ್ರಿಮೂರ್ತಿಗಳು ಪ್ರಾಮುಖ್ಯತೆಗೆ ಬಂದರು. ಕಾಲಕ್ರಮದಲ್ಲಿ ಬ್ರಹ್ಮನಿಗೆ ಪ್ರಾಮುಖ್ಯ ಹೋಗಿ ಶಿವ, ವಿಷ್ಣು ಇಬ್ಬರೇ ಉಳಿದರು. ವಿವಿಧ ದೇವ ದೇವತೆಗಳು ಒಬ್ಬನೇ ಪರಮಾತ್ಮನ ಪ್ರತಿನಿಧಿಶಕ್ತಿವಿಶೇಷವಾದ ಹಲವು ರೂಪಗಳು ಎಂಬ ಭಾವನೆ ಉಂಟಾಗಿ ಏಕದೇವೋಪಾಸನೆ ಹುಟ್ಟಿತು. ಈ ದೇವರಲ್ಲಿ ಶ್ರದ್ಧೆ, ವಿನಯ, ಪ್ರೇಮಗಳನ್ನು ತೋರಿಸಿದ ಮಾನವರು ಅವರ ಉತ್ತಮ ಭಕ್ತ ಹಾಗೂ ಗೌರವಾನ್ವಿತ ಮಿತ್ರ ಆಗಿದ್ದರು.

ವಿಷ್ಣು ಭಕ್ತಿಯು ವೇದ, ಉಪನಿಷತ್ತು, ಪುರಾಣ, ಭಾಗವತ, ಆಗಮ, ರಾಮಾಯಣ ಮಹಾಭಾರತ, ದಿವ್ಯ ಪ್ರಬಂಧಗಳಲ್ಲಿ ನಿರೂಪಿಸಲ್ಪಟ್ಟಿದೆ.

1) ಜ್ಞಾನ ಪ್ರಧಾನವಾದ ಋಗ್ವೇದ, ಕರ್ಮ ಪ್ರಧಾನವಾದ ಯಜುರ್ವೇದ, ಭಕ್ತಿ

ಪ್ರಧಾನವಾದ ಸಾಮವೇದ, ವಿಜ್ಞಾನ ಪ್ರಧಾನವಾದ ಅಥರ್ವವೇದ ಇವೆಲ್ಲ ಸರ್ವೋತ್ತಮನಾದ ವಿಷ್ಣುವಿನ ವಿವಿಧ ದೈವೀ ಶಕ್ತಿಗಳನ್ನು ಪ್ರಾರ್ಥಿಸುವ ಸಲುವಾಗಿ ರಚಿಸಲ್ಪಟ್ಟಿವು. 2) ವ್ಯಕ್ತ-ಅವ್ಯಕ್ತ ಪಿಂಡಾಂಡ-ಬ್ರಹ್ಮಾಂಡ ಎರಡರಲ್ಲಿಯೂ ಇರುವ ಏಕೈಕ ಪರಮಾತ್ಮನ ವಿವಿಧ ಸ್ವರೂಪ ಸ್ವಭಾವಗಳ ಪರಿಚಯ ಮಾಡಿಕೊಡಲು ರಚಿಸಲ್ಪಟ್ಟಿರುವ ಉಪನಿಷತ್ತುಗಳ ಮೂಲಕ ಋಷಿಗಳು ವಿಶ್ವವ್ಯಾಪಿಯಾದ ಬ್ರಹ್ಮವು ಮನಸ್ಸಿನಲ್ಲಿ ಆತ್ಮನೆಂಬ ಹೆಸರಿನಿಂದ ಪ್ರಕಾಶಿಸುತ್ತಿದೆ ಎಂದು ತಿಳಿದು, ದೇಹದೊಳಗೇ ಇರುವ ಅಂತರ್ಯಾಮಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಯತ್ನಿಸಿದರು. 3) ಧರ್ಮಾನುಕೂಲವಾದ ಕಾಮ, ಸ್ವಾರ್ಥರಹಿತ ಅರ್ಥೋಪಾರ್ಜನ, ತ್ಯಾಗೋನ್ಮುಖ ಭೋಗಾನುಭೋಗ ಇವುಗಳನ್ನು ತಿಳಿಸುವ ಪುರಾಣಗಳು ಮಾನವನಿಗೆ ಪುರುಷಾರ್ಥವನ್ನು ಒದಗಿಸಿವೆ. ಜೊತೆಗೆ ಅಂತಃಕರಣ ಶುದ್ಧಿ, ಜೀವಿಗಳಲ್ಲಿ ದೈವೀ ಗುಣಗಳ ವಿಕಾಸ, ಸರ್ವಾಂಗ ಸುಂದರ ಜೀವನ ಇವೆಲ್ಲ ಆಗುವ ಉಪಾಯಗಳನ್ನು ತಿಳಿಸುತ್ತವೆ. 4) ದೇವರನ್ನು ಮಗು, ಮಗ, ಪ್ರಿಯಕರ, ಮಿತ್ರ, ನಾಯಕ, ಮಾರ್ಗದರ್ಶಕ, ಸ್ವಾಮಿ, ಮುಂತಾದ ವಿವಿಧ ಭಾವನೆಗಳಲ್ಲಿ ಧ್ಯಾನಿಸಿ ಶ್ರೀಮನ್ನಾರಾಯಣನ ಭಕ್ತರಾಗಲು ಸೂಚನೆಗಳನ್ನು ಭಾಗವತವು ಕೊಡುತ್ತದೆ. 5) ಪರಮಾತ್ಮನ ಪಂಚರೂಪ, ಅರ್ಥ ಪಂಚಕ, ಪಂಚಕಾಲ ಕರ್ಮ, ದೇವಾಲಯ ನಿರ್ಮಾಣ, ಅವತಾರಗಳ ಪೂಜೆ, ಹಬ್ಬ ಉತ್ಸವ ಇವೆಲ್ಲವನ್ನೂ ಆಗಮಗಳು ತಿಳಿಸುತ್ತವೆ. 6) ಜನರು ಧರ್ಮಮಾರ್ಗದಲ್ಲಿ ಹೋಗಲು ಅಗಾಧ ಮಾರ್ಗದರ್ಶನ, ನೆರವು ನೀಡುವುದೇ ರಾಮಾಯಣ-ಮಹಾಭಾರತಗಳ ಗುರಿ 7) ಮಹಾಭಾರತದಲ್ಲಿ ಅಂತರ್ಗತವಾಗಿರುವ ಗೀತೆಯಲ್ಲಿ ಅಹಂಭಾವದ ನಾಶ. ಎಲ್ಲದರಲ್ಲಿಯೂ ಭಗವಂತನ ಅಂತರ್ಯಾಮಿತ್ವದ ಪ್ರತಿಪಾದನೆ, ಧರ್ಮಪರಾಯಣಾದೃಷ್ಟಿಯನ್ನು ಹೊಂದಿರಬೇಕಾದ ಆವಶ್ಯಕತೆ, ವೈವಿಧ್ಯತೆಯಲ್ಲಿ ಏಕತೆಯ ಸ್ಥಾಪನೆ ಎಂಬೀ ವಿಷಯಗಳನ್ನು ತಿಳಿಸಲಾಗಿದೆ. ನಮ್ಮೊಳಗೆ ನಡೆಯುತ್ತಿರುವ ಆಸುರೀ-ದೈವೀಪ್ರವೃತ್ತಿಗಳ ಸಂಘರ್ಷವನ್ನು ತಿಳಿಸಿಕೊಟ್ಟು, ದೈವೀ ಪ್ರವೃತ್ತಿಗಳಿಗೇ ಜಯ ಉಂಟಾಗಲು ಮಾಡಬೇಕಾದ, ಸರ್ವದೇಶ, ಸರ್ವಕಾಲ, ಸರ್ವ ಅವಸ್ಥೆಗಳಲ್ಲಿರುವ ಸಮಸ್ತಮಾನವರಿಗೂ ಅವಶ್ಯವಾದ, ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ ಯೋಗ ಸಾಧನಗಳನ್ನು ತಿಳಿಸಲಾಗಿದೆ 8) ಸಂಪತ್ತು, ಸ್ತ್ರೀಸುಖ, ರಾಜ ಮರ್ಯಾದೆ, ಸ್ವರ್ಗಸುಖ ಇವೆಲ್ಲವೂ ಭಗವಂತನ ಸಾನ್ನಿಧ್ಯದ ಮುಂದೆ ಹುಲ್ಲಿನಂತೆ ಬೆಲೆಯಿಲ್ಲದ್ದು. ಜಾತಿ, ಕುಲ, ವಯಸ್ಸು, ಅಂತಸ್ತು, ರೂಪ, ವಿದ್ಯೆ, ಹಣ, ಗುಣ ಇವಾವುದೂ ಭಕ್ತಿಯ ಮುಂದೆ ಗಣನೆಗೆ ಬರಲಾರದು. ಆದುದರಿಂದ ಭಗವಂತನಲ್ಲಿ ಪ್ರೀತಿಯ ಮೂಲಕ ನಿಕಟ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕು ಎಂಬುದು ಆಳ್ವಾರುಗಳ ತಮಿಳು ಪ್ರಬಂಧಗಳಲ್ಲಿ ಅಡಗಿದೆ.

ಯಾವ ರೀತಿಯ ಹೇಯ ಗುಣಗಳಿಲ್ಲದ, ಜ್ಞಾನಶಕ್ತಿ ಬಲ ಐಶ್ವರ್ಯ, ವೀರ್ಯ ತೇಜಸ್ಸು, ವಾತ್ಸಲ್ಯ ಸೌಶೀಲ ಸೌಲಭ್ಯ ಮುಂತಾದ ಸದ್ಗುಣಗಳ ಪ್ರತೀಕವಾದ

ಭಗವತ್ ಅಥವಾ ಭಗವಾನ್ ಎಂಬ ಹೆಸರಿನ ದೇವತೆಗೆ ಪೂಜೆಯೆಲ್ಲವೂ ಸಲ್ಲಬೇಕೆಂದು ಪ್ರತಿಪಾದಿಸಿದ ಭಾಗವತರಿಂದ ಭಾಗವತ ಪಂಥ ಹುಟ್ಟಲು ಕಾರಣನಾದವನು ವಾಸುದೇವ ಅಥವಾ ಶ್ರೀಕೃಷ್ಣ. ಶುಭದಾಯಕ, ಕಾರುಣ್ಯದಾಯಕ ಆಗಿರುವ ವಿಷ್ಣುವು ಭಗವಂತನಿಗಿಂತ ಬೇರೆಯಲ್ಲ, ಅವನೇ ಪರದೇವ ಎಂಬ ವಿಷ್ಣುವಿನ ಮೇಲಿನ ಅನನ್ಯ ಭಕ್ತಿಯು ಭಾಗವತ ಧರ್ಮದ ಮೂಲವಾಗಿ, ಅದು ವೈಷ್ಣವ ಮತ ಎನಿಸಿಕೊಂಡಿತು. ಪಂಚ ಸಂಸ್ಕಾರ ಹೊಂದಿ, ಪಂಚವ್ಯೂಹ, ಅರ್ಥಪಂಚಕ, ಪಂಚಕಾಲ ಕರ್ಮ ಇವುಗಳ ಅರಿವು–ಅನುಷ್ಠಾನಗಳ ಮೂಲಕ ವಿಷ್ಣು ಅಥವಾ ನಾರಾಯಣನ ಕೈಂಕರ್ಯದಲ್ಲಿ ನಿರತರಾದ ಭಾಗವತರು ವೈಷ್ಣವರೆನಿಸುತ್ತಾರೆ.

ಪ್ರಶಾಂತಚಿತ್ತ, ಸದ್ಗುಣ ಪಕ್ಷಪಾತಿ, ಕೋಮಲ ಭಾವನೆಯುಳ್ಳವ, ಸದಾಚಾರಿಯಾಗಿ ಪವಿತ್ರ ಬಾಳುವೆ ನಡೆಸುವವ, ಮನೋವಾಕ್ಕಾಯಗಳಲ್ಲಿ ವೈರ ಬಗೆಯದವ, ಹಿಂಸೆ ಕಳವು ಸುಲಿಗೆ ಮಾಡದವ, ಬಡವರಲ್ಲಿ ಕನಿಕರ ಹೊಂದಿರುವವ, ಪರಹಿತ ಕಾರ್ಯಗಳಲ್ಲಿ ಇಷ್ಟವುಳ್ಳವ, ಈರ್ಷ್ಯೆ ಇಲ್ಲದವ, ಪರರ ದೋಷಗಳನ್ನು ಎಣಿಸದವ, ಸವಿ ನುಡಿ ನುಡಿಯುವವ, ಯಾವ ಅಪೇಕ್ಷೆಯೂ ಇಲ್ಲದವ, ತನ್ನದು–ಪರರದು ಎಂಬ ಭೇದವನ್ನೇಣಿಸದ ಸಮದರ್ಶಿತ್ವವುಳ್ಳವ, ಎಲ್ಲ ಪ್ರಾಣಿಗಳಲ್ಲಿಯೂ ಪರಮಾತ್ಮನನ್ನು ದರ್ಶಿಸುವವ–ಅಂಥವನೇ ಪರಮಭಾಗವತ ಎನಿಸಿಕೊಳ್ಳಲು ಅರ್ಹನಾಗುತ್ತಾನೆ. ಆದುದರಿಂದಲೇ ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ, ಅಂಬರೀಷ, ಶುಕ, ಶೌನಕ, ಭೀಷ್ಮ, ದಾಲ್ಭ್ಯ, ರುಕ್ಮಾಂಗದ, ಅರ್ಜುನ, ವಸಿಷ್ಠ, ವಿಭೀಷಣ ಎಂಬ ಪರಮ ಭಾಗವತರನ್ನು ಶ್ರೀ ವೈಷ್ಣವರು ನಿತ್ಯವೂ ಸ್ಮರಿಸುತ್ತಾರೆ. ಮತೀಯ ಜೀವನದಲ್ಲಿ ಮೂಡಿದ್ದ ಧರ್ಮಚ್ಯುತಿ, ನೈತಿಕಕ್ಷೀಣತೆ, ಸಮಾಜ ಜೀವನದ ಡಂಭಾಚಾರ–ದುರಾಚಾರ, ಇವುಗಳನ್ನು ತೊಡೆದುಹಾಕಿ, ಸಮದರ್ಶಿತ್ವ, ಸಮನ್ವಯ ದೃಷ್ಟಿಗಳನ್ನು ಬೋಧಿಸಿ ಆಚರಿಸಿದ ಭಾಗವತ ಸಂಪ್ರದಾಯ ಯಶಸ್ಸು ಗಳಿಸಿದೆ.

ಪರಮಾತ್ಮನೇ ಸರ್ವೋತ್ತಮನೆಂಬ ವಿಷಯದಲ್ಲಿ ನಿಶ್ಚಲವಾದ ನಂಬಿಕೆಯುಳ್ಳವ, ತಂದೆತಾಯಿ, ಬಂಧುಬಳಗ, ಪತ್ನೀಪುತ್ರ, ಧನಕನಕ ಮೊದಲಾದ ಪ್ರಾಪಂಚಿಕ ವ್ಯಕ್ತಿ ವಸ್ತುಗಳಿಗಿಂತ ಇಷ್ಟದೇವನೇ ಮುಖ್ಯವೆಂದು ಭಾವಿಸುವವ, ಇಷ್ಟ ದೈವವನ್ನು ಒಲಿಸಿಕೊಳ್ಳುವುದನ್ನೇ ತನ್ನ ಜೀವಿತದ ಅತಿ ಮುಖ್ಯ ಪ್ರಯೋಜನವನ್ನಾಗಿ ತಿಳಿದು ಅನನ್ಯ ಶರಣನಾಗಿರುವವ, ಇಷ್ಟದೇವತಾ ಪ್ರಾಪ್ತಿಗಾಗಿ ತನ್ನ ಸರ್ವಸ್ವವನ್ನೂ–ಪ್ರಾಣವನ್ನೂ–ತ್ಯಜಿಸಿ ಸೇವೆ ಮಾಡಲು ಸಿದ್ಧನಾಗಿರುವವ–ಅಂಥವನೇ ನಿಜವಾದ ಭಕ್ತ ಎನಿಸಿಕೊಳ್ಳಲು ಅರ್ಹನಾದವನು.

ನಿಜವಾದ ಭಕ್ತರ ಅಥವಾ ಭಾಗವತರ ಬಳಿ ಆಡಂಬರ–ತೋರಿಕೆಗಳು ಸುಳಿಯವು. ಶೋಕದ್ವೇಷಗಳಿಲ್ಲದ ಅವರ ಮನಸ್ಸು ಕೆಟ್ಟ ಕೆಲಸಗಳಲ್ಲಿ ಉದ್ರಿಕ್ತವಾಗುವುದಿಲ್ಲ. ಅವರು ಯಾವಾಗಲೂ ನಿಸ್ವಾರ್ಥದಿಂದ ಸೇವೆ ಸಲ್ಲಿಸಿ, ತಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಇತರರನ್ನು ಬದುಕ

ಗೊಟ್ಟು ತಾವು ಬದುಕುವ ಇವರು, ತಮ್ಮಿಂದ ಸಮಾಜಕ್ಕೆ ಯಾವುದೇ ರೀತಿಯ ತೊಂದರೆ, ಹಿಂಸೆ ಆಗದಂತೆ ಎಚ್ಚರಿಕೆ ವಹಿಸುತ್ತಾರೆ. ತಮ್ಮ ಕೆಲಸ ಕಾರ್ಯಗಳೆಲ್ಲವೂ ಭಗವಂತನ ಪ್ರೇರಣೆಯಂತೆಯೇ ನಡೆಯುವುದರಿಂದ ತಾವು ಕೇವಲ ನಿಮಿತ್ತ ಮಾತ್ರ ಎಂದು ತಿಳಿಯುತ್ತಾರೆ. ಇದರ ಫಲವಾಗಿ ಅವರಿಗೆ ದುಃಖಕ್ಲೇಶ, ಕಷ್ಟನೋವು, ಎಲ್ಲವನ್ನೂ ಸ್ವೈರಿಸಿಕೊಳ್ಳುವ ಹಾಗೂ ಲಾಭ ನಷ್ಟ, ಸುಖದುಃಖ, ಜಯ ಅಪಜಯ, ಮಾನ ಅಪಮಾನ ಎಂಬೀ ದ್ವಂದ್ವಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಅಲಕ್ಷಿಸುವ ಶಕ್ತಿ ಇರುತ್ತದೆ.

ಭಕ್ತಿಯ ನವವಿಧ ಸಾಧನಗಳು ಮೋಕ್ಷದ ಅಂಗಗಳೆಂಬುದು ರಾಮಾನುಜರ ಅಭಿಪ್ರಾಯ. ಆಹಾರದಲ್ಲಿ ಎಚ್ಚರಿಕೆಯಿಂದಿರುವುದು ವಿವೇಕ ; ಎಲ್ಲ ಆಸೆಗಳನ್ನೂ ಬದಿಗೊತ್ತಿ ಈಶ್ವರನೊಬ್ಬನನ್ನೇ ಆಶಿಸುವುದು ವಿಮೋಕ ; ಭಗವಂತನ ಅವಿಚ್ಛಿನ್ನ ಸ್ಮೃತಿಯೇ ಅಭ್ಯಾಸ ; ಪರೋಪಕಾರವಾದ ಕೆಲಸವೇ ಕ್ರಿಯಾ ; ಸರ್ವೋದಯದ ಬಯಕೆ ಅಂದರೆ ಸರ್ವ ಜೀವಿಗಳ ಕ್ಷೇಮವನ್ನು ಕೋರುವುದು ಕಲ್ಯಾಣ ; ಇತರರು ದುಃಖ ಪಡುವುದನ್ನು ಸಹಿಸಲಾರದ ಮನೋಭಾವವೇ ದಯೆ ; ಇತರರಿಗೆ ಕಾಯಾ ವಾಚಾ ಮನಸಾ ಯಾವ ವಿಧವಾದ ನೋವನ್ನೂ ಉಂಟು ಮಾಡದಿರುವುದು ಅಹಿಂಸೆ ; ನಮ್ಮಲ್ಲಿರುವುದನ್ನು ಇತರರೊಂದಿಗೆ ಹಂಚಿಕೊಳ್ಳುವುದು ದಾನ ; ನಿರಾಶಾ ರಹಿತರಾಗಿ ನಿತ್ಯ ಸಂತುಷ್ಟಿ ಪಡೆದಿರುವುದು ಅನವಸಾದ.

ಹೀಗೆ ಜೀವಿಯು ಭಕ್ತಿಯ ನವವಿಧಗಳಲ್ಲಿ ಪರಿಣತರಾಗಿ ಪರಮಾತ್ಮನನ್ನು ಸ್ತುತಿಸಿದರೆ ಕ್ಲೇಶಗಳೆಲ್ಲವೂ ನಿವಾರಣೆಯಾಗಿ, ಭಕ್ತ—ಭಗವಂತರಲ್ಲಿ ಸಂಪರ್ಕ ಏರ್ಪಟ್ಟು, ಆನಂದಾನುಭವ, ಮುಕ್ತಿ ಸಿಗುತ್ತದೆ. ಇಂಥ ಪ್ರೇಮ ರೂಪವಾದ ಭಕ್ತಿಯು ವಿಶ್ವವ್ಯಾಪಿಯಾಗಬೇಕೆಂಬುದೇ ಮಾನವರ ಅಂತಿಮ ಗುರಿ.

ಭಗವಂತನಲ್ಲಿ ಭಕ್ತಿ ಇಡುವುದೆಂದರೆ ಅವನೊಂದಿಗೆ ಸ್ನೇಹವನ್ನು ಮಾಡಿ ಕೊಳ್ಳುವುದು ಎಂದರ್ಥ. ಭಗವಂತನೊಂದಿಗೆ ಮಾಡಿಕೊಳ್ಳುವ ಸ್ನೇಹವು ಅವನ ಶರೀರವಾದ ಇತರ ಪ್ರಾಣಿಗಳೊಂದಿಗೆ ಸ್ನೇಹದಿಂದಿರುವುದನ್ನೂ ಒಳಗೊಂಡಿರುತ್ತದೆ. ಈ ಸ್ನೇಹಕ್ಕೆ ಪ್ರಪಂಚದ ಹಿತವನ್ನು ಸಾಧಿಸಬೇಕೆಂಬ ಉದ್ದೇಶವೇ ಕಾರಣವಾಗಿರ ಬೇಕಲ್ಲದೆ ತನ್ನ ಸ್ವಂತ ಪ್ರಯೋಜನವಲ್ಲ. ಪ್ರಕೃತಿ ಪುರುಷರಿಬ್ಬರನ್ನೂ ತನ್ನ ಶರೀರ ವಾಗಿ ಹೊಂದಿರುವ, ಅತ್ಯುತ್ತಮ ವಸ್ತುವಾದ, ಭಗವಂತನ ನಿಜಸ್ವರೂಪವನ್ನು ಅರಿತು, ನೋಡಿ ಪಡೆಯುವುದೇ ಭಕ್ತಿಯೋಗ, ಇದರಿಂದ ಆನಂದಾನುಭವ, ಮುಕ್ತಿ ದೊರೆಯುತ್ತದೆ.

ಪರಮಾತ್ಮನನ್ನು ಪೂಜಿಸಿ, ಅವನ ಸಾಕ್ಷಾತ್ಕಾರವನ್ನು ಪಡೆಯಲು, ಭಕ್ತಿಯನ್ನೇ ಮುಖ್ಯ ಸಾಧನವನ್ನಾಗಿ ಮಾಡಿದ ಆಚಾರ್ಯ ರಾಮಾನುಜರು, ಭಕ್ತಿಯನ್ನು ಶ್ರೀವೈಷ್ಣವ ಮತದ ತಿರುಗುಣಿಯನ್ನಾಗಿ ಮಾಡಿ ಜನಪ್ರಿಯಗೊಳಿಸಿದರು. ಹಿಂದಿನ ಭಕ್ತಿ ಮಾರ್ಗಗಳೆಲ್ಲವೂ ರಾಮಾನುಜರೆಂಬ ಜಲಾಶಯದಲ್ಲಿ ಸೇರಿ ಐಕ್ಯವಾಗಿ, ಅಲ್ಲಿಂದ

ಮುಂದೆ ನಾನಾ ಕವಲುಗಳಾಗಿ ಹೊರಟು ಜನಮನವನ್ನು ತಣಿಸಿವೆ, ಕೀಳು ಕುಲ ಎನಿಸಿಕೊಳ್ಳುವ ಜನರನ್ನು ಉದ್ಧಾರ ಮಾಡಿವೆ. ಆಧ್ಯಾತ್ಮ ಸಾಫಲ್ಯವನ್ನು ಒದಗಿಸಿರುವ ವಿಷ್ಣು ಭಕ್ತಿಯು ಲೋಕಪ್ರಿಯವಾಗಿ, ವಿಶ್ವದ ಅನೇಕ ರಾಷ್ಟ್ರಗಳಿಗೆ, ಅಪಾರ ಸಾಹಿತ್ಯ ನಿರ್ಮಾಣಕ್ಕೆ, ಸ್ಫೂರ್ತಿ ನೀಡಿರುವುದು ನಿಜ.

ಗರುಡ, ಹನುಮಂತ, ಲಕ್ಷ್ಮಣರಂತೆ ಕಷ್ಟನಷ್ಟಗಳನ್ನು ಗಣನೆಗೆ ತಂದುಕೊಳ್ಳದೆ, ವಿರಾಮವಿಲ್ಲದೆ ದುಡಿದು, ದೇವರ ಸೇವೆ ಮಾಡಿ ಆನಂದಿಸಬಹುದು; ಕೌಸಲ್ಯೆ, ದೇವಕಿ, ಯಶೋದೆ, ಪೆರಿಯಾಳ್ವಾರ್‌ಗಳಂತೆ ದೇವರನ್ನು ಮಗುವೆಂದು ಭಾವಿಸಿ ಪ್ರೀತಿಸಿ ಆಡಿಸಿ ಸುಖಿಸಬಹುದು ; ರಾಧೆ, ಆಂಡಾಳ್, ನಮ್ಮಾಳ್ವಾರ್, ಮೀರಾಗಳಂತೆ ಭಗವಂತನನ್ನು ಪತಿ ಎಂದು ಭಾವಿಸಿ, ಪೂಜಿಸಿ, ಆನಂದಿಸಬಹುದು, ಅಥವಾ ವಿರಹ ವೇದನೆಯಿಂದ ಪರಿತಪಿಸುತ್ತ ಧ್ಯಾನಿಸಬಹುದು ; ಬಲಿ, ತಿರುಪ್ಪಾಣಾಳ್ವಾರ್, ತೊಂಡರಡಿಪ್ಪೊಡಿಯಾಳ್ವಾರ್‌ಗಳಂತೆ ತಮ್ಮ ವ್ಯಕ್ತಿತ್ವದೊಂದಿಗೆ ಸರ್ವಸ್ವವನ್ನೂ ಸಂತೋಷದಿಂದ ಭಗವಂತನಿಗೆ ಅರ್ಪಿಸಿ, ಅವನನ್ನು ಸೇವಿಸಿ, ಅವನ ದಾಸನಾಗಿ ದೇಹವನ್ನು ಸವೆಸಿ, ಅವನಲ್ಲಿ ಐಕ್ಯವಾಗಲು ಬಯಸಬಹುದು ; ಸುಗ್ರೀವ, ವಿಭೀಷಣರಂತೆ ಅವನಲ್ಲಿ ಶರಣಾಗತಿ ಮಾಡಬಹುದು ; ಅರ್ಜುನನಂತೆ ಅವನಿಗೆ ಸಖನಾಗಿ ಇರಬಹುದು ; ಪ್ರಹ್ಲಾದ, ಧ್ರುವ, ಶುಕ, ಜನಕ, ಪರೀಕ್ಷಿತ್‌ರಂತೆ ಅನನ್ಯ ಮನಸ್ಸಿನಿಂದ ಧ್ಯಾನಿಸಿ, ಅವನ ಕಾರುಣ್ಯವನ್ನು ಸಂಪಾದಿಸಬಹುದು ; ಗಜೇಂದ್ರ, ಅಜಾಮಿಳ, ವಾಲ್ಮೀಕಿ, ದ್ರೌಪದಿಯರಂತೆ ಕೇವಲ ನಾಮಸ್ಮರಣೆಯಿಂದ ಗುರಿಯನ್ನು ಸಾಧಿಸಬಹುದು ; ಹಿರಣ್ಯಕಶಿಪು, ರಾವಣ, ಶಿಶುಪಾಲರಂತೆ ದ್ವೇಷಭಯಗಳಿದ್ದು ಅವನನ್ನು ಧ್ಯಾನಿಸಿ ಸ್ಮರಿಸಿ ಧ್ಯೇಯವನ್ನು ಸಾಧಿಸಬಹುದು.

ಹೀಗೆ ಪರಮಾತ್ಮನಲ್ಲಿ ಮೋಕ್ಷಕ್ಕಾಗಿ ಮಾಡುವ ಶುದ್ಧ ಪ್ರೇಮ, ಅನುರಾಗ, ಭಕ್ತಿಗಳಿಗೆ ಯಾವ ಅರ್ಹತೆಯ ಅವಶ್ಯಕತೆಯೂ ಇಲ್ಲವೆಂಬುದು ಧರ್ಮವ್ಯಾಧ, ಧ್ರುವ, ಗಜೇಂದ್ರ, ಕುಬ್ಜೆ, ಕುಚೇಲ, ಸುದಾಮ, ವಿದುರ, ದ್ರೌಪದಿ, ಶಬರಿ, ವಿಭೀಷಣ, ಯಶೋದೆ, ಗೋಪಿಕಾಸ್ತ್ರೀ, ಬಾಣ, ಬಲಿ, ಶಿಬಿ, ಪ್ರಹ್ಲಾದ, ಅರ್ಜುನ, ಹನುಮಂತ, ಗರುಡ, ಜಟಾಯು, ಗುಹ, ಅಕ್ರೂರ, ಉದ್ಧವ, ವಾಲ್ಮೀಕಿ, ವ್ಯಾಸ, ಶುಕ, ಪರೀಕ್ಷಿತ್, ಅಜಾಮಿಳ, ಅಂಬರೀಷ, ಜನಕ ಮುಂತಾದವರ ಜೀವನದಿಂದ ತಿಳಿದು ಬರುವ ಅಂಶ.

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ ॥

ಎಂಬಂತೆ ಭಕ್ತಿಯು ನವವಿಧ ಆಗಿರುತ್ತದೆಂಬುದು ಅನುಭವಿಗಳ ಅಭಿಮತ.

ವಿಷ್ಣು ಪುರಾಣ, ರಾಮಾಯಣ, ಮಹಾಭಾರತ, ಭಾಗವತಗಳ ಮೂಲಕ ಭಗವಂತನ ಲೀಲಾ ವಿನೋದ ಕಥೆಗಳ ಶ್ರವಣದಿಂದ, ಪ್ರಾಪಂಚಿಕವಾದ ವಿಷಯ

ವಾಸನೆಗಳಿಂದ ಆವೃತರಾದ ಭಕ್ತರ ಹೃದಯಗಳು ಪವಿತ್ರವಾಗಿ ಭಗವಂತನ ಸಾನ್ನಿಧ್ಯ ವನ್ನು ಪಡೆಯಲು ಸಿದ್ಧಗೊಳ್ಳುತ್ತವೆ.

ಕೃತಯುಗದಲ್ಲಿ ಧ್ಯಾನದಿಂದ, ತ್ರೇತಾಯುಗದಲ್ಲಿ ಯಜ್ಞದಿಂದ, ದ್ವಾಪರ ಯುಗದಲ್ಲಿ ಸೇವೆಯಿಂದ ಸಾಧಿಸುವುದೆಲ್ಲವೂ ಕಲಿಯುಗದಲ್ಲಿ ಕೇವಲ ವಿಷ್ಣುವಿನ ನಾಮ ಸಂಕೀರ್ತನದಿಂದ ದೊರೆಯುತ್ತದೆ. ಆದುದರಿಂದ ಭಗವಂತನ ದಿವ್ಯ ಜ್ಞಾನ, ಅಪಾರ ಕರುಣೆ, ಶರಣಾಗತರಲ್ಲಿರುವ ವಾತ್ಸಲ್ಯ, ನಿರ್ಹೇತುಕ ಕೃಪೆ, ಮುಂತಾದ ಗುಣಗಳಲ್ಲಿ ಆಸಕ್ತರಾಗಿ,ಸೃಷ್ಟಿ ಸ್ಥಿತಿ ಲಯಕರ್ತನಾದ ಆತನ ನಾಮಗಳನ್ನು ಸ್ತೋತ್ರ, ಕೀರ್ತನ ರೂಪದಲ್ಲಿ ಹಾಡುವವರೂ, ಅದನ್ನು ಆಲಿಸುವವರೂ ಜನನ ಮರಣ ಭಯ ದಿಂದ ದೂರಾಗಬಹುದು.

ಭಗವಂತನ ದಿವ್ಯ ನಾಮಗಳ ಸ್ವರೂಪ, ಗುಣ, ಲೀಲಾ ವಿಭೂತಿಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಆಗಾಗ ಸ್ಮರಿಸುತ್ತಿದ್ದರೆ, ಅದರಿಂದ ಭಗವಂತನ ವಿಚಾರ ವೆಲ್ಲಾ ತಿಳಿದು ಸದ್ಗುಣಗಳ ಗಣಿ, ಮನ್ಮಥನಿಗಿಂತ ಮಿಗಿಲು, ಭುವನ ಮನೋಹರ, ಆದ ಭಗವಂತನ ದಿವ್ಯ ಮಂಗಳ ಮೂರ್ತಿಯನ್ನು ಏಕಾಗ್ರ ಮನಸ್ಸಿನಿಂದ ಧರಿಸಿ, ಧ್ಯಾನಿಸಿ ಮುಕ್ತರಾಗಲು ನೆರವು ಸಿಗುತ್ತದೆ.

ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಕೈಕೊಂಡು, ಪವಿತ್ರ ತೀರ್ಥಗಳಲ್ಲಿ ಮಿಂದು, ಅಲ್ಲಿನ ದೇವಾಲಯಗಳಲ್ಲಿರುವ ದಿವ್ಯ ಮಂಗಳ ವಿಗ್ರಹಗಳ ದರ್ಶನ ಮಾಡಿ, ಆತನ ಪಾದ ಸೇವೆ ಮಾಡಿದರೆ ದೇಹ-ಮನಸ್ಸುಗಳು ಶುದ್ಧಿ ಹೊಂದುತ್ತವೆ.

ಆತನ ಸೇವೆಯನ್ನು ನಿಸ್ವಾರ್ಥದಿಂದ,ನಿಷ್ಕಳಂಕ ರೀತಿಯಲ್ಲಿ ಮಾಡಿ, ಆತನನ್ನು ಪತ್ರ ಪುಷ್ಪ ಫಲ ತೋಯಗಳಿಂದ ಅರ್ಚಿಸಿ, ಷೋಡಶೋಪಚಾರಗಳಿಂದ ವಂದಿಸಿ ಕೃತಜ್ಞತೆಯನ್ನು ಸಲ್ಲಿಸಿದರೆ, ನಮ್ಮಲ್ಲಿರುವ ನಾನು, ನನ್ನದು ಎನ್ನುವ ಅಹಂಕಾರ, ಮಮಕಾರಗಳೆಲ್ಲ ಅಳಿದು ಹೋಗಿ, ಆವನು ನಮ್ಮನ್ನು ಸ್ವೀಕರಿಸಲು ಸಾಧ್ಯವಾಗು ತ್ತದೆ.

ಭಗವಂತನೇ ಸ್ವಾಮಿ, ತಾನು ಅವನ ದಾಸ ಎಂದು ತಿಳಿದು, ಪೂರ್ಣ ಪ್ರೇಮ ದಿಂದ, ಪ್ರತಿಫಲ ರೂಪದಲ್ಲಿ ಆವನಿಂದ ಏನನ್ನೂ ಅಪೇಕ್ಷಿಸದೆ, ಅವನ ಸೇವೆ-ಕೈಂಕರ್ಯ ಮಾಡುವುದು ದಾಸ್ಯ ಎನಿಸುತ್ತದೆ.

ಭಗವಂತನು, ಅವನ ಶೇಷರಾದ ನಮ್ಮನ್ನು ಸ್ವೀಕರಿಸುವಂತೆ ಯತ್ನಿಸುವುದು ಒಂದು ರೀತಿಯಲ್ಲಿ ಆಧ್ಯಾತ್ಮಿಕ ಗುಲಾಮಗಿರಿಯಾದರೂ, ಅದರ ಫಲವಾಗಿ ನೂತನ ಸಂಬಂಧವಾದ ಸಖ್ಯವು ಏರ್ಪಡುವುದರಲ್ಲಿ ಸಂದೇಹವಿಲ್ಲ.

ಭಗವಂತನು ಪತಿ, ತಾನು ಪತ್ನಿ ಎಂಬ ಮಧುರ ಭಾವದಲ್ಲಿ ಅವನ ವಿರಹ ವನ್ನು ಸಹಿಸಲಾರದೆ ಆವನನ್ನು ಒಂದುಗೂಡಲು ಹಗಲಿರುಳೂ ಪ್ರಾರ್ಥನೆ ಮಾಡು ವುದು ಕಾಂತತ್ವ.

ವಾಣಿ, ಶರೀರ, ಮನಸ್ಸು ಎಲ್ಲವೂ ಭಗವಂತನ ಸಂಪತ್ತು ಎಂದೇ ತಿಳಿದು,

ತನ್ನ ಆಸೆ, ಆಕಾಂಕ್ಷೆ, ಆವಶ್ಯಕತೆಗಳ ಚಿಂತನ ಮಾಡದೆ, ಎಲ್ಲವನ್ನೂ ಯಾವ ಫಲಾಪೇಕ್ಷೆಯೂ ಇಲ್ಲದೆ, ಆತನಿಗೆ ಆತ್ಮ ನಿವೇದನ ಮಾಡಿಕೊಂಡರೆ, ಶಾಂತಿ ಸಮಾಧಾನಗಳೂ ಸಿಗುವುದರಲ್ಲಿ ಸಂದೇಹವಿಲ್ಲ.

ಮುಖ್ಯವಾಗಿ ಪ್ರೀತಿಯಿಂದ ಸಮರ್ಪಿಸಿದ ಯಾವುದನ್ನಾದರೂ ಭಕ್ತಿಪರಾಧೀನನಾಗಿರುವ ಭಗವಂತನು ಸ್ವೀಕರಿಸಿ ಅನುಗ್ರಹಿಸುತ್ತಾನೆ. ಗಜೇಂದ್ರನು ನೀಡಿದ ಒಂದು ಕಮಲದ ಹೂ, ತಾನು ತಿಂದು ರುಚಿನೋಡಿ ಶಬರಿಯು ಅರ್ಪಿಸಿದ ಹಣ್ಣು, ಗುಹನು ಕೊಟ್ಟ ನೀರು, ದ್ರೌಪದಿಯು ಕೊಟ್ಟ ಒಂದು ಎಲೆಯ ತುಂಡು, ದಾಸಿಯ ಪುತ್ರನಾದ ವಿದುರನು ಕೊಟ್ಟ ಒಂದು ಲೋಟ ಹಾಲು, ಕುಬ್ಜೆಯು ನೀಡಿದ ಪರಿಮಳ ಸುಗಂಧ–ಎಲ್ಲವೂ ಆತನಿಗೆ ಗ್ರಾಹ್ಯವೇ. ಭಗವಂತನಿಗಾಗಿ ಅರ್ಪಿಸಲು ಯಾವ ವಸ್ತುವೂ ಸಿಗದಿದ್ದಾಗ ಮಾನಸಿಕ ಪೂಜೆಯೇ ಅಂದರೆ ಅಹಿಂಸೆ, ಇಂದ್ರಿಯನಿಗ್ರಹ, ಸರ್ವಭೂತ ದಯೆ, ಕ್ಷಮೆ, ಶಾಂತಿ, ತಪಸ್ಸು, ಧ್ಯಾನ, ಸತ್ಯ ಎಂಬೀ ಎಂಟು ವಿಧವಾದ ಆತ್ಮ ಗುಣಗಳನ್ನು ಅನುಷ್ಠಿಸುವುದೇ ಪುಷ್ಪ ಸಮರ್ಪಣವಾಗಿ, ಅವನ ಮೆಚ್ಚುಗೆಯನ್ನು ಗಳಿಸಿಕೊಡಬಲ್ಲದು.

ನಿರಾಕಾರ, ನಿರ್ಗುಣ ಎಂದು ಕೆಲವರು ಹೇಳುವ ಪರಮಾತ್ಮನು ಸಾಕಾರ ಸದ್ಗುಣ ಸಂಪನ್ನನೂ ಆಗಿ ಜಡಚೇತನಗಳೆರಡರಲ್ಲಿಯೂ, ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿರುವುದು ನಿಜವೆಂದು ಅನೇಕರು ಹೇಳಿದ್ದಾರೆ. ಅಂತಹ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಕಾಡಿನ ವಾಸ, ಜಪತಪ, ಉಪವಾಸ ಮುಂತಾದುವುಗಳಿಂದ ದೇಹವನ್ನು ದಂಡಿಸಿ ಸವೆಸುವುದಕ್ಕೆ ಬದಲಾಗಿ, ಅವನೇ ದಯಪಾಲಿಸಿದ ಸಾಂಸಾರಿಕ ಜೀವನ ಮತ್ತು ಪ್ರಾಪಂಚಿಕ ಸಾಧನ–ಸಾಮಗ್ರಿಗಳ ಉಚಿತ ಉಪಯೋಗವೇ ಉತ್ತಮ, ಸಾಧು ಆದ ಉಪಾಯ.

ವೇದ ಶಾಸ್ತ್ರಾದಿಗಳಿಂದ ಹೊಂದಿದ ಸರಿಯಾದ ತತ್ತ್ವಜ್ಞಾನದೊಂದಿಗೆ ವರ್ಣಾಶ್ರಮಗಳ ಅನುಷ್ಠಾನವು ಹೊಂದಿಕೊಳ್ಳುವಂತೆ ಅಭ್ಯಾಸ ಮಾಡಿದರೆ, ಅದರಿಂದ ಭಗವಂತನ ಬಗ್ಗೆ ಇರುವ ಜ್ಞಾನ ವಿಶೇಷವು ಪ್ರೀತಿಯ ರೂಪವನ್ನು ತಳೆದು, ಪರಿಶುದ್ಧವಾದ ಧ್ಯಾನವೇರ್ಪಟ್ಟು, ಪರಭಕ್ತಿ ಹುಟ್ಟುತ್ತದೆ. ಇದರಿಂದ ಸ್ವಾರ್ಥ, ಕಪಟ, ಕ್ರೂರತೆ, ಶೋಷಣೆಗಳೆಲ್ಲಾ ಮಾಯವಾಗಿ, ಶಾಂತಿ, ಪ್ರೇಮ, ಬಂಧುತ್ವ ಬೆಳೆಯುತ್ತದೆ. ಹೀಗೆ ಭಕ್ತಿಯಿಂದ ವ್ಯಕ್ತಿಯ ಉದ್ಧಾರವಾಗಿ, ಸಮಾಜದಲ್ಲಿ ಸುಖ, ಶಾಂತಿ, ಸಮಾಧಾನಗಳು ನೆಲೆಸಲು ನೆರವಾಗುತ್ತದೆ ಹಾಗೂ ಜನರ ವಿಶ್ವ ಕಲ್ಯಾಣ ಕಾರ್ಯಗಳಲ್ಲಿ ನೆರವು ನೀಡುವಂತಹ ಸನ್ಮಾರ್ಗಿಗಳಾಗಿ ಪರಿವರ್ತನೆ ಹೊಂದುತ್ತಾರೆ.

## 6. ಪ್ರಪತ್ತಿ

ಚೇತನನಿಗೆ ಭಕ್ತಿಯು ಬಾಹ್ಯಕವಚವಾದರೆ, ಪ್ರಪತ್ತಿಯು ಆಂತರಿಕ ಕವಚವಾಗಿದೆ. ಪರಿಮಿತವಾದ ಪುರುಷ ಶಕ್ತಿಯು ಕುಗ್ಗಿದಾಗ, ಮಾನವನ ಶಕ್ತಿ ಸಾಮರ್ಥ್ಯ

ಗಳಿಂದ ಧ್ಯೇಯ ಸಾಧನೆ ಆಗದಿದ್ದಾಗ, ಅವನು ತನ್ನಲ್ಲಿರುವ ಅಹಂಕಾರ-ಮಮಕಾರ ಗಳನ್ನು ತ್ಯಜಿಸಿ, ಜಗತ್ತಿನ ಮೂಲ ಕಾರಣನಾದ ಪರಮಾತ್ಮನ ಧ್ಯಾನ, ಜಪ, ಪೂಜೆಗಳಲ್ಲಿ ನಿರತನಾಗಿ, ಆತನ ಶಕ್ತಿಗೆ ಶರಣು ಹೋಗುವುದು, ಭಕ್ತರ ಕಾರ್ಯ ಸಿದ್ಧಿಗೆ ಪರಮೋಪಾಯವಾದುದು. ಆದಕಾರಣ ಮುಕ್ತಿಗೆ ಭಕ್ತಿಯೊಂದಿಗೆ ಪ್ರಪತ್ತಿಯೂ ಒಂದು ಮುಖ್ಯಸಾಧನ. ಶ್ರುತಿ ಸ್ಮೃತಿಗಳೇ ಅಲ್ಲದೆ ಆಳ್ವಾರುಗಳ ಪ್ರಬಂಧದಲ್ಲಿಯೂ ಪ್ರಪತ್ತಿಯನ್ನು ಎತ್ತಿ ಹಿಡಿಯಲಾಗಿದೆ. ಪ್ರಪತ್ತಿಗೆ ಆತ್ಮ ಸಮರ್ಪಣ, ಭರನ್ಯಾಸ, ಶರಣಾಗತಿ, ಪ್ರಪದನ, ನಿಕ್ಷೇಪ ಎಂಬ ಹೆಸರುಗಳೂ ಇವೆ.

ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಪರಮ ಪುರುಷಾರ್ಥದ ಸಾಧನೆಗೆ ಉಪಾಯ ಅಥವಾ ಸಾಧನವಾಗಿ ಭಕ್ತಿಯೋಗವನ್ನು ಆರಂಭಿಸಿದ ಸಾಧಕನಿಗೆ ಭಗವಂತನಲ್ಲಿ ಪ್ರೀತಿಯೂ ಹೆಚ್ಚಾಗುತ್ತ ಬಂದು, ಧರ್ಮ, ಅರ್ಥ, ಕಾಮ, ಮೋಕ್ಷ ಗಳ ಜೊತೆಗೆ ಭಕ್ತಿಯೂ ಪುರುಷಾರ್ಥವಾಗುತ್ತದೆ. ಭಗವಂತನ ಸ್ಮರಣೆ, ಕೀರ್ತನೆ, ಧ್ಯಾನ, ಕೈಂಕರ್ಯಗಳಲ್ಲಿಯೇ ಸದಾ ನಿರತನಾಗುತ್ತಾನೆ. ತನಗೆ ಆಧಾರ, ರಕ್ಷಕ, ಸ್ವಾಮಿ ಆದವನು ಭಗವಂತನೇ ಎಂಬ ಜ್ಞಾನವನ್ನು ಪಡೆದ ಆತನು. ತನ್ನ ಮತ್ತು ತನಗೆ ಸೇರಿದ ಎಲ್ಲ ಚೇತನ-ಅಚೇತನ ವ್ಯಕ್ತಿ-ವಸ್ತುಗಳ ರಕ್ಷಣೆಯ ಹೊಣೆಯನ್ನು ಸಂಪೂರ್ಣವಾಗಿ ಭಗವಂತನಿಗೆ ಒಪ್ಪಿಸಿ, ಅವನಿಗೆ ಶರಣು ಹೋಗಿ ಶಾಂತಿ ಸಮಾಧಾನ ಗಳಿಂದ ಜೀವಿಸುತ್ತಾನೆ. ಇದು ಶರಣಾಗತಿ ಅಥವಾ ಪ್ರಪತ್ತಿಯೋಗ ಎನಿಸುತ್ತದೆ. ಕರ್ಮ, ಜ್ಞಾನ, ಭಕ್ತಿಗಳು ಪ್ರಪತ್ತಿಯ ಪೂರಕಗಳು. ಕರ್ಮಜ್ಞಾನ ಭಕ್ತಿಗಳಿಂದ ಮನಸ್ಸು ಪರಿಪಕ್ವವಾಗುವುದರಿಂದ ಇವುಗಳಿಂದ ಕೂಡಿದ ಶರಣಾಗತಿಯೇ ಶ್ರೇಷ್ಠ ವಾದ ಸಾಧನೆ.

ಶ್ರೀ ವೈಷ್ಣವ ಮತ ಅಥವಾ ರಾಮಾನುಜ ಸಿದ್ಧಾಂತಕ್ಕೆ ಪ್ರಪತ್ತಿಯೇ ಅಡಿಗಲ್ಲು. ತನ್ನನ್ನು ರಕ್ಷಿಸಿಕೊಳ್ಳಲಾರದ ಜೀವನು ತನ್ನ ಅಲ್ಪತ್ವ ಮತ್ತು ಅಶಕ್ತಿ ಗಳನ್ನು ಮನಗಂಡು, ತನ್ನ ರಕ್ಷಣೆಯ ಹೊಣೆಯನ್ನು ಸರ್ವರಕ್ಷಕನಾದ ಭಗವಂತನ ಮೇಲೆ ಹಾಕಿ ನಿಶ್ಚಿಂತನಾಗಿರುವುದು, ತನ್ನ ಇಷ್ಟಸಿದ್ಧಿಯು ಬೇರಾವುದರಿಂದಲೂ ಆಗದ ಪಕ್ಷದಲ್ಲಿ, ದೃಢ ವಿಶ್ವಾಸದಿಂದ ಭಗವಂತನನ್ನೇ ನಂಬಿ ಅವನಲ್ಲಿ ಬೇಡಿಕೆಯನ್ನು ಮಂಡಿಸುವುದು ; ಶ್ರೇಷ್ಠವಾದ ಪದವಿ ಎನಿಸಿದ ಮೋಕ್ಷವು ಬೇರಾವುದರಿಂದಲೂ ಸಾಧ್ಯವಾಗದು ಎಂದು ನಿಶ್ಚಯಿಸಿ ತನ್ನನ್ನು ಪರಮಾತ್ಮನಿಗೆ ಅರ್ಪಿಸಿಕೊಳ್ಳುವುದು ; ನಾನು ಸಕಲ ಅಪರಾಧಗಳ ಗಣಿ, ಅಶಕ್ತ ಹಾಗೂ ಬೇರೆ ಗತಿ ಇಲ್ಲದವ, ನೀನೇ ನನಗೆ ಗತಿಯಾಗಬೇಕು, ಎಂದು ನಿಷ್ಕಪಟ ಭಾವನೆಯಿಂದ ಪರಮಾತ್ಮನಲ್ಲಿ ಪ್ರಾರ್ಥಿಸು ವುದು ; ಎಲ್ಲ ವಿಧವಾದ ತಪಸ್ಸುಗಳಿಗಿಂತ ಶ್ರೇಷ್ಠವಾದುದು–ಇವು ಪ್ರಪತ್ತಿಯ ವ್ಯಾಖ್ಯಾನಗಳು. ಇದರಲ್ಲಿ ಶರಣ್ಯ, ಶರಣಾಗತ, ಶರಣಾಗತಿ ಎಂಬ ಮೂರೂ

ತಿಳಿಯಬೇಕಾದ ಅಂಶಗಳು. ಮುಖ್ಯವಾಗಿ ಚೇತನರಿಗೆ ಕರ್ಮ, ಜ್ಞಾನ, ಭಕ್ತಿ ಮಾರ್ಗಗಳಿಗಿಂತ ಪ್ರಪತ್ತಿಮಾರ್ಗವು ಸುಲಭ, ಸರಳ, ಶ್ರೇಷ್ಠ ಆದುದು.

ಭಗವಂತನ ಉಪಾಸನೆ ಮಾಡಲು ಶಾಸ್ತ್ರಾಧಿಕಾರವಿಲ್ಲದವರು, ಶಾಸ್ತ್ರಜ್ಞಾನವಿಲ್ಲದವರು, ಭಕ್ತಿಯೋಗವನ್ನು ಅನುಷ್ಠಿಸಲು ಅಶಕ್ತರಾದವರು, ಭಗವತ್ಪ್ರಾಪ್ತಿಗೆ ಆಗುವ ವಿಳಂಬವನ್ನು ಸಹಿಸದ ಆತುರಗಾರರು–ಇವರೆಲ್ಲ ಪ್ರಪತ್ತಿಮಾಡಲು ಅಧಿಕಾರ ಪಡೆದವರು. ಉಪದೇಶಿಸಿದ ಅರ್ಥದಂತೆ ಅನುಷ್ಠಾನ ಮಾಡಲಾರದ ಭಾಗ್ಯಹೀನರು, ಉಪದೇಶ ಮಾಡುವ ಆಚಾರ್ಯನ ವಿಷಯದಲ್ಲಿ ನಿಷ್ಠೆ ಇಲ್ಲದವರು–ಗುರುಶುಶ್ರೂಷೆ ಮಾಡದವರು, ಭಗವಂತನಲ್ಲಿ ಪ್ರೀತಿ ವಿಶ್ವಾಸ ಇಲ್ಲದವರು ಇವರು ಪ್ರಪತ್ತಿಗೆ ಅನರ್ಹರು. ಆದುದರಿಂದ ಇವರಿಗೆ ಪ್ರಪತ್ತಿಶಾಸ್ತ್ರದ ರಹಸ್ಯಾರ್ಥಗಳನ್ನು ಹೇಳಬಾರದು.

ಪಾಪದ ನಾಶಕ್ಕೆ, ಸಂಸಾರ ಬಂಧನದಿಂದ ಬಿಡುಗಡೆಗೆ, ಮತ್ತು ಮೋಕ್ಷ ಸಾಧನೆಗೆ ಅವಶ್ಯವಾದ ವೇದೋಪನಿಷತ್ತುಗಳನ್ನು ಅಧ್ಯಯನ ಮಾಡಲಾರದ ಅವಿದ್ಯಾವಂತರು, ಹಾಗೂ ಅಧ್ಯಯನ ಮಾಡಕೂಡದು ಎನ್ನುವ ಕೀಳು ಕುಲದವರೆನಿಸಿದವರು, ಶಾಸ್ತ್ರೋಕ್ತವಾದ ಕರ್ತವ್ಯ ಕರ್ಮಗಳನ್ನು ಮಾಡಲಾರದ ದುರ್ಬಲರು, ಸ್ತ್ರೀಯರು, ಹೆಚ್ಚು ಕಾಲ ತಾಳ್ಮೆಯಿಂದ ಕಾಯಲಾರದವರು–ಈ ಎಲ್ಲ ಬಗೆಯ ಜನರೂ ಪರಮಾತ್ಮನೇ ಸಾಧನವೆಂದು ಭಾವಿಸಿ ಆತನೆಡೆಗೇ ತಮ್ಮ ಮನಸ್ಸನ್ನು ತಿರುಗಿಸಬೇಕು. ಎಲ್ಲ ವ್ಯಕ್ತಿ ವಸ್ತುಗಳೂ ಭಗವಂತನ ಆಳ್ವಿಕೆಗೊಳಪಟ್ಟು ಅವನ ನಿಯಮಗಳಿಗೆ ಅಧೀನವಾಗಿವೆ ಎಂದು ನಂಬಿ ಅವನಲ್ಲಿ ಪೂರ್ಣವಾಗಿ ಆತ್ಮ ಸಮರ್ಪಣೆಮಾಡಿ ಶರಣು ಹೋಗಬೇಕು.

ಜೀವಾತ್ಮ–ಪರಮಾತ್ಮರಲ್ಲಿ ಮಧ್ಯಸ್ಥಿಕೆಯನ್ನು ವಹಿಸುವ, ದೇವಮಾನವರಲ್ಲಿ ನಿಕಟವಾದ ಸಂಬಂಧವನ್ನು ಕಲ್ಪಿಸುವ, ತಪ್ಪಿತಸ್ಥರಾದ ಜೀವಾತ್ಮರಿಗೆ ಭಗವಂತನ ಕ್ಷಮೆಯನ್ನು ಕೊಡಿಸುವ, ದಯಾಮಯಿ, ತಾಯಿ, ಗುರು, ಆಚಾರ್ಯ ಆಗಿರುವ ಶ್ರೀ ಮಹಾಲಕ್ಷ್ಮಿಯ ಬಳಿಗೆ ತನ್ನನ್ನು ಕರೆದೊಯ್ಯುವಂತಹ ಶಕ್ತಿ ಸಾಮರ್ಥ್ಯಗಳನ್ನು ಹೊಂದಿರುವ ಆಚಾರ್ಯನಿಗಾಗಿ ಪ್ರಪನ್ನರು ಹಂಬಲಿಸಿ ಮೊರೆಯಿಡಬೇಕು. ಇಂತಹ ಸಮಯವನ್ನೇ ನಿರೀಕ್ಷಿಸುತ್ತಿರುವ ಭಗವಂತನು ಭಕ್ತನ ಮೊರೆಯನ್ನು ಕೇಳಿ ಸಂತುಷ್ಟನಾಗಿ ಅವನಿಗೆ ಒಬ್ಬ ಯೋಗ್ಯಗುರುವನ್ನು ಕರುಣಿಸಿ, ಅವನ ಪಾಪ ಹಾಗೂ ನ್ಯೂನತೆಗಳನ್ನು ಕ್ಷಮಿಸಿ, ಅವನು ಆಶಿಸಿದ ಮೋಕ್ಷವನ್ನು ಕರುಣಿಸುತ್ತಾನೆ.

ಪರಮಾತ್ಮನಿಗೆ ತನ್ನನ್ನು ಪೂರ್ಣವಾಗಿ ಒಪ್ಪಿಸಿಬಿಡುವ ಈ ಪ್ರಪತ್ತಿಗೆ ವರ್ಣಾಶ್ರಮದ ಅಧಿಕಾರಗಳ ಅವಶ್ಯಕತೆ ಇರುವುದಿಲ್ಲ. ಪಂಡಿತಪಾಮರ, ಬಾಲವೃದ್ಧ, ಉಚ್ಚನೀಚ, ಬಡವ ಬಲ್ಲಿದ, ಸ್ತ್ರೀ ಪುರುಷ, ಮಾನವ ಪ್ರಾಣಿ–ಎಲ್ಲರಿಗೂ ಸರಿಸಮನಾದ ಮಾರ್ಗವಿದು. ಜೊತೆಗೆ ದೇಶ ಕಾಲ ಅವಸ್ಥಾಭೇದಗಳೂ ಇದಕ್ಕೆ ಇರುವು

ದಿಲ್ಲ ಎಂಬುದು ಪ್ರಹ್ಲಾದ, ಧ್ರುವ, ಗಜೇಂದ್ರ, ಸುಗ್ರೀವ, ವಿಭೀಷಣ, ಲಕ್ಷ್ಮಣ, ಕಾಕಾಸುರ, ಕಾಳೀಯ, ದ್ರೌಪದಿ, ಇವರುಗಳಿಂದ ತಿಳಿದುಬರುತ್ತದೆ.

ಕೂದಲೆಳೆಯಷ್ಟಿರುವ ಸೇತುವೆಯ ಮೇಲೆ ಬೆಂಕಿಯ ಗುಡಾಣವನ್ನು ದಾಟು ವಂತಿರುವ ಭಕ್ತಿಯು ಬಹು ಕಷ್ಟಕರವಾದುದು. ಭಕ್ತಿಯಿಂದ ಮಾಡುವ ಧ್ಯಾನಕ್ಕೆ ವ್ಯಕ್ತಿಯ ಪ್ರಯತ್ನ ಹೆಚ್ಚಾಗಿರಬೇಕು. ಅಲ್ಲದೆ ಅದು ವಿಧಾಯಕ ರೀತಿಯಲ್ಲಿರಬೇಕು. ಭಕ್ತಿಯು ಸರಿಯಾಗಿಲ್ಲದಿದ್ದಾಗ ಅಂತಹ ಭಕ್ತರನ್ನು ಪರಮಾತ್ಮನು ಹತ್ತಿರ ಸೇರಿಸದೆ ದೂರ ತಳ್ಳಿಬಿಡಬಹುದು.

ಆದರೆ ಯಾವುದನ್ನೂ ತನ್ನದೆಂದು ಉಳಿಸಿಕೊಳ್ಳದೆ, ಎಲ್ಲವನ್ನು ಪರಮಾತ್ಮನ ಪಾದಾರವಿಂದಗಳಲ್ಲಿ ಅರ್ಪಿಸಿ ನಂಬಿದವರನ್ನು ಅವನು ಎಂದಿಗೂ ಕೈ ಬಿಡುವುದಿಲ್ಲ ವೆಂದು ದೃಢವಾಗಿ ನಂಬಿ, ಮಹಾವಿಶ್ವಾಸದಿಂದ ಮಾಡಿದ ಪ್ರಪತ್ತಿಯಲ್ಲಿ ಪರ ಮಾತ್ಮನು ಯಾರನ್ನೂ ದೂರತಳ್ಳಲಾರ ಎಂಬುದಂತೂ ದಿಟ.

ಆದರೂ ದಶರಥನು ಪರಶುರಾಮನಲ್ಲಿ, ಶ್ರೀರಾಮನು ಸಮುದ್ರರಾಜನಲ್ಲಿ, ಭರತನು ಶ್ರೀರಾಮನಲ್ಲಿ ಮಾಡಿದ ಶರಣಾಗತಿ ಫಲಿಸದಿರಲು ನಾನಾ ಕಾರಣ ಗಳುಂಟು.

ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯವರ್ಜನಂ
ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವಂ ವರಣಂ ತಥಾ
ಆತ್ಮ ನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ।

ಎಂಬಂತೆ ಭಗವಂತನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಯೋಗ್ಯವಾದ ಒಳ್ಳೆಯ ಗುಣ ಗಳನ್ನು ಸಂಪಾದಿಸಿ ಅವನ ಅಭಿಪ್ರಾಯ-ಉದ್ದೇಶಗಳಿಗೆ ಅನುಕೂಲನಾಗಿರುವುದು ; ಅದಕ್ಕೆ ಪ್ರತಿಕೂಲವಾದ ದುರ್ಗುಣಗಳನ್ನು ತ್ಯಜಿಸಿ ಅವನ ಇಚ್ಛೆಗೆ ವಿರೋಧವಾಗಿ ಹೋಗದಿರುವುದು ; ಶರಣು ಬಂದವರನ್ನು ರಕ್ಷಿಸಿಯೇ ತೀರುತ್ತಾನೆ ಎಂಬ ಪೂರ್ಣ ವಿಶ್ವಾಸವನ್ನು ಹೊಂದಿ, ತಾನು ಭಗವಂತನಲ್ಲಿ ರಕ್ಷಣೆಯನ್ನು ಪಡೆದಿದ್ದೇನೆ ಎಂಬ ನಂಬಿಕೆಯನ್ನು ಹೊಂದಿರುವುದು ; ಸರ್ವಲೋಕ ಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಮನೋನಿಶ್ಚಯವನ್ನು ಹೊಂದಿ, ತಮ್ಮ ಒಳಭಾವವನ್ನು ಗೋಪಿಕಾ ಸ್ತ್ರೀಯರಂತೆ ಪರಮಾತ್ಮನ ಮುಂದೆ ವಿವರವಾಗಿ ಹೇಳಿಕೊಳ್ಳುವುದು ; ತನ್ನ ಅಲ್ಪತೆ, ಅಶಕ್ತಿಗಳನ್ನು ಪ್ರಕಟಿಸಿ, ಅಹಂಕಾರವನ್ನು ತೊರೆದು ತಾನು ಮಾಡಿದ ಅಪರಾಧಗಳೆಲ್ಲ ವನ್ನೂ ನಿಷ್ಕಾಪಟ್ಯದಿಂದ ಭಗವಂತನಲ್ಲಿ ನಿವೇದಿಸಿಕೊಳ್ಳುವುದು ; ಭಗವಂತನಲ್ಲಿ ಆತ್ಮವನ್ನು ಸಂಪೂರ್ಣವಾಗಿ ಒಪ್ಪಿಸಿ ನಿಶ್ಚಿಂತನಾಗಿರುವುದು—ಇವು ಪ್ರಪತ್ತಿಯ ಆರು ಮುಖ್ಯ ಅಂಗಗಳು.

ಪ್ರಪತ್ತಿಯ ಅನುಷ್ಠಾನವು ನಾಲ್ಕು ಬಗೆಯಾಗಿದೆ. ಪ್ರಪತ್ತಿಯ ಸ್ವರೂಪ ಹಾಗೂ ಅದನ್ನು ಅನುಷ್ಠಾನ ಮಾಡುವ ವಿಧಾನ, ಎರಡನ್ನೂ ಚೆನ್ನಾಗಿ ಅರಿತು ತಾನೇ ಶರಣು ಹೋಗುವುದು ಸ್ವನಿಷ್ಠೆ ; ಭಗವಂತನಲ್ಲಿ ಭಕ್ತಿ ವಿಶ್ವಾಸಗಳನ್ನು

ಹೊಂದಿದ್ದು ಆಚಾರ್ಯರೊಬ್ಬರ ಉಪದೇಶ ವಾಕ್ಯಗಳ ಮೂಲಕ ಶರಣು ಹೋಗುವುದು ಉಕ್ತಿನಿಷ್ಠೆ ; ತನಗಾಗಿ ಆಚಾರ್ಯನೇ ಶರಣಾಗತಿ ಮಾಡುವುದು ಆಚಾರ್ಯ ನಿಷ್ಠೆ ; ಭಾಗವತರು ಸೇರಿ ಅಶಕ್ತನಾದವನಿಗೆ ಪ್ರಾರ್ಥಿಸುವುದು ಭಾಗವತ ನಿಷ್ಠೆ ; ಈ ನಾಲ್ಕು ಪದ್ಧತಿಗಳಲ್ಲಿ ಯಾವುದನ್ನು ಬೇಕಾದರೂ ಅನುಸರಿಸಬಹುದು. ಆತ್ಮ ಸ್ವರೂಪ, ರಕ್ಷಣೆಯ ಹೊಣೆ, ರಕ್ಷಣೆಯಿಂದ ಬರುವ ಫಲ–ಎಲ್ಲವನ್ನೂ ಪರಮಾತ್ಮ ನಿಗೇ ಅರ್ಪಿಸುವುದು ಪ್ರಪತ್ತಿಯ ಮೂರು ಅಂಶಗಳು.

ಹೀಗೆ ಶ್ರುತಿ ಸ್ಮೃತಿ ಪ್ರಬಂಧಗಳು ಉಪದೇಶಿಸಿರುವ ಪ್ರಪತ್ತಿಯ ಅನುಷ್ಠಾನ ವನ್ನು ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಎಂಬ ಮುನಿತ್ರಯರೂ ಪ್ರಮುಖವಾದ ಉಪಾಯವೆಂದು ಹೇಳಿದ್ದಾರೆ. ಆದರೆ ಪ್ರಪತ್ತಿಯ ಸ್ವರೂಪ, ಪರಿಕರ, ಅನುಷ್ಠಾನ ಕ್ರಮ ಮೊದಲಾದವುಗಳ ಬಗೆಗೆ ಅನೇಕ ಆಚಾರ್ಯರು ವಿಚಾರಮಾಡಿದ್ದರೂ, ಈ ಉಪಾಯದ ನಿಷ್ಕರ್ಷೆಯನ್ನು ನಿರ್ಧರವಾಗಿ ಮಾಡಿ, ಸಂದೇಹಕ್ಕೆ ಅವಕಾಶವಿಲ್ಲದಂತೆ ಮಾಡಿ ಉಪಕಾರ ಮಾಡಿರುವವರು ವೇದಾಂತ ದೇಶಿಕರು.

ಶರಣಾಗತಿಯನ್ನು ಮಾಡದವನಿಗೆ ಪರಮಾತ್ಮನು ಪರಮ ಪದವನ್ನು ಕರುಣಿ ಸುವುದಿಲ್ಲವೆಂಬುದು ಹಿರಿಯರ ಅಭಿಪ್ರಾಯ. ಶರಣಾಗತನಿಗೆ ಮುಕ್ತಿಯು ಬೇಗ ದೊರೆತರೆ ಈ ಲೋಕದಲ್ಲಿನ ಜೀವಿತ ಕಾಲದಲ್ಲಿ ಭಗವದನುಭವ ಸುಖವು ಅತ್ಯಲ್ಪ ವಾಗಿರುತ್ತದೆ. ಮುಕ್ತಿಯು ನಿಧಾನವಾಗಿ ಬಂದರೆ ಈ ಲೋಕದಲ್ಲೇ ಭಗವದನು ಭವದ ಆನಂದವು ಹೆಚ್ಚಾಗಿರುತ್ತದೆ. ಮಾನವರೆಲ್ಲರೂ ಮುಕ್ತಿಯ ಈ ಪಥವನ್ನು ಆಶ್ರಯಿಸಿ ತಮ್ಮ ಉದ್ಧಾರ ಮಾರ್ಗವನ್ನು ಕಂಡುಕೊಳ್ಳಬಹುದು.

ಮುಖ್ಯವಾಗಿ ಪ್ರಪತ್ತಿಯನ್ನು ಮಾಡಿದ ಪ್ರಪನ್ನನು ನಿಶ್ಚಿಂತನಾಗಿ ಅಲ್ಲಿಂದಾ ಚೆಗೆ ತಾನು ಮಾಡುವ ಕಾರ್ಯಗಳಲ್ಲೆಲ್ಲ ಸ್ವಪ್ರಯತ್ನ, ಸ್ವಾರ್ಥಗಳನ್ನು ತ್ಯಜಿಸಿ, ಎಲ್ಲವೂ ಪರಮಾತ್ಮನದು ಎಂದು ತಿಳಿಯಬೇಕು. ಅಜ್ಞಾನ, ಸಂದೇಹ, ಅಶ್ರದ್ಧೆ ಗಳಿಗೆ ಆಸ್ಪದ ಕೊಡದೆ ನಿರ್ಮಲ ಮನಸ್ಸಿನಿಂದ ಸ್ವಾಮಿಯಾದ ಭಗವಂತನನ್ನು ಸದಾ ಧ್ಯಾನಿಸುತ್ತ, ಕಣ್ಣಿನಿಂದ ನೋಡಿದುದೆಲ್ಲವೂ ಭಗವಂತನ ಪ್ರಕಾಶವೆಂದು ಭಾವಿಸುತ್ತ, ಕೈಗಳಿಂದ ಮಾಡಬೇಕಾದುದೆಲ್ಲವನ್ನೂ ಭಗವಂತನ ಸೇವೆ, ಕೈಂಕರ್ಯ ಗಳೆಂದೇ ತಿಳಿದು ನಿಷ್ಕಾಮ ಭಾವನೆಯಿಂದ ಮಾಡುತ್ತ, ಭಗವದನುಗ್ರಹದಿಂದ ಪಡೆದ ಸುಖ ಶಾಂತಿ ಸಮಾಧಾನ ತೃಪ್ತಿಗಳನ್ನು ಅನುಭವಿಸುತ್ತ, ಮುಕ್ತರಿಗೆ ಸಮ ನಾಗಿದ್ದು, ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕು.

## 7. ದೇವಾಲಯಗಳಲ್ಲಿ ವಿಷ್ಣು ಪೂಜೆ

೧

ಮಾನವ-ದೈವ, ಇಹಪರ, ವಾಸ್ತವ-ಆದರ್ಶ, ಇವುಗಳ ಮಿಲನದ ಸಂಕೇತವೇ

ದೇವಾಲಯ. ಲೋಕ ಸಂರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ಅವತರಿಸಿ ವಾಸಿಸುವ ಸ್ಥಳವಾದ ದೇವಾಲಯವು, ಜೀವಾತ್ಮ–ಪರಮಾತ್ಮರಲ್ಲಿ ಇರುವ ಅಂತರ ವನ್ನು ಬಹುಮಟ್ಟಿಗೆ ಕಡಿಮೆಯಾಗುತ್ತದೆ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಕ ಆದ ದೇವನ ಬಳಿಗೆ ಹೋಗಿ ಸೇರಲು, ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವೂ ದೇವಾಲಯವೇ ಆಗಿರುತ್ತದೆ.

ವಿಷ್ಣು ಮತ್ತು ಅವನ ಅವತಾರ ವಿಗ್ರಹಗಳಿಗಾಗಿ ದೇವಾಲಯಗಳು ನಿರ್ಮಿ ಸಲ್ಪಟ್ಟು, ವೈಭವೋಪೇತವಾದ ಪೂಜಾವಿಧಾನಗಳು ರೂಪುಗೊಂಡು ಸಾವಿರಾರು ಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುತ್ತಿವೆ. ಧಾರ್ಮಿಕ ಭಾವನೆಯಿಂದ ಪ್ರೇರಿತರಾದ ಜನರಿಗೆ, ತಮ್ಮಲ್ಲಿ ಹುದುಗಿದ್ದ ಕಲೆ, ಸಂಗೀತ, ಸಾಹಿತ್ಯ, ಸಂಸ್ಕೃತಿ ಮುಂತಾದ ಅಭಿರುಚಿ ಗಳನ್ನು ವ್ಯಕ್ತಪಡಿಸಲು ಈ ದೇವಾಲಯಗಳು ಸುಯೋಗ, ಸದವಕಾಶ ಸಿಗುವಂತೆ ಮಾಡಿವೆ. ದೇವಾಲಯಗಳಲ್ಲಿ ನಡೆಯುವ ವಿವಿಧ ನಿತ್ಯ–ನೈಮಿತ್ತಿಕ ಉತ್ಸವಗಳಲ್ಲಿ, ಅಂತಃಕರಣಪೂರ್ವಕವಾಗಿ ಹೊರಟ ಸುಮಧುರ ನಾದಸ್ವರ ಸಮ್ಮಿಲನದೊಂದಿಗೆ ಸ್ತುತಿ ಪಾಠಗಳು, ಪವಿತ್ರ ಧರ್ಮಗ್ರಂಥಗಳ ಪಠನ, ಮಂತ್ರ ಘೋಷ, ಉಪನ್ಯಾಸ, ಕಾಲ ಕ್ಷೇಪ, ಸಂಗೀತ, ನೃತ್ಯ, ನಾಟಕ, ಹರಿಕಥೆ, ಭಜನೆ ಇವೆಲ್ಲ ಸಮಾವೇಶಗೊಂಡಿರುತ್ತವೆ. ದೇವಾಲಯದ ಆವರಣದಲ್ಲಿ ಪಾಠಶಾಲೆಗಳು ನಡೆದು ಆಮೂಲಕ ವೈದಿಕ ಮತ್ತು ಶಾಸ್ತ್ರೀಯ ಜ್ಞಾನದ ರಕ್ಷಣೆ, ಪ್ರಚಾರಗಳು ನಡೆದಿವೆ. ದೇವಾಲಯದ ಆಶ್ರಯ ದಲ್ಲಿ ಆಸ್ಪತ್ರೆಗಳು, ನ್ಯಾಯಾಲಯಗಳು ನಡೆದು ದುರ್ಬಲರಿಗೆ ಸಹಾಯವಾಗುತ್ತಿತ್ತು. ಭಗವಂತನ ಅನಂತಮಹಿಮಾ ವಿಭವ, ಆತನ ಸೃಷ್ಟಿಯ ವಿಪುಲತೆ ಮತ್ತು ವಿವಿಧತೆ, ಆತನ ಕಲ್ಯಾಣಕಾರಕ ವಿಶೇಷತೆ, ಇವೆಲ್ಲವನ್ನು ಕೊಂಡಾಡುವ ಮಂತ್ರ ಸ್ತೋತ್ರ ಗೀತೆಗಳು ಸೃಷ್ಟಿಯಾದುವು. ಕುಶಲ ಕಲೆಗಳ ವಿಕಾಸಕ್ಕೆ ಹಾಗೂ ಭಕ್ತಿ ಸಾಹಿತ್ಯ ನಿರ್ಮಾಣಕ್ಕೆ ಸ್ಫೂರ್ತಿ ನೀಡಿದ ದೇವಾಲಯಗಳು ಸಾವಿರಾರು ಜನರಿಗೆ ಜೀವನೋ ಪಾಯವನ್ನು ಒದಗಿಸಿವೆ. ಹೀಗೆ ದೇವಾಲಯಗಳು ಧರ್ಮ ಸಂಸ್ಕೃತಿಗಳನ್ನು ಕಾಪಾಡು ವುದರ ಜೊತೆಗೆ ಸಾಮಾಜಿಕ ಐಕ್ಯತೆಗೂ ಶ್ರಮಿಸುತ್ತ ಬಂದಿವೆ.

ಭಗವಂತನ ಮಾಯೆಯಿಂದ ಮೋಹಿತರಾಗಿ, ಸಂಸಾರದಿಂದ ಬಂಧಿಸಲ್ಪಟ್ಟ ಜೀವರು ಉದ್ಧಾರವಾಗಬೇಕಾದರೆ, ಭಗವಂತನನ್ನು ಆಶ್ರಯಿಸಿ ಅವನ ಉಪಾಸನೆ ಮಾಡಬೇಕು. ಆಗ ಅವನು ತೃಪ್ತಿಗೊಂಡು ಜೀವರನ್ನು ಮಾಯೆಯಿಂದ ಮುಕ್ತ ಗೊಳಿಸುತ್ತಾನೆ. ಅದರ ಫಲವಾಗಿ ಜೀವರು ಸರಿಯಾದ ಜ್ಞಾನವನ್ನು ಪಡೆದು, ವರ್ಣಾಶ್ರಮ ಧರ್ಮವನ್ನು ಪಾಲಿಸಿ ಭಗವಂತನ ಆರಾಧನೆಯಲ್ಲಿ ತೊಡಗುತ್ತಾರೆ. ಇದರ ಫಲವಾಗಿ ಸಂಸಾರ ಬಂಧನ, ವಾಸನೆಗಳಿಂದ ಬಿಡುಗಡೆ ಸಿಕ್ಕಿ ಪರಮಾತ್ಮನ ದರ್ಶನ-ಸಾಕ್ಷಾತ್ಕಾರಗಳು ದೊರೆತು, ಪುನರ್ಜನ್ಮವಿಲ್ಲದ ದಿವ್ಯ ಲೋಕ ಸಿಗುತ್ತದೆ.

ಭಗವಂತನ ಆಶ್ರಯವನ್ನು ನಾಲ್ಕು ವಿಧದಲ್ಲಿ ಮಾಡಬಹುದು. ಗಾಯ ತ್ರ್ಯಾದಿ ಮಂತ್ರಗಳ ಅಭ್ಯಾಸವು ಜಪ, ಅಷ್ಟಾಂಗ ಯೋಗದಿಂದ ಆದ ಚಿಂತನೆ ಮಾಡು

ವುದು ಧ್ಯಾನ ; ಅಗ್ನಿ ಹೋತ್ರಾದಿತಿ ಕ್ರಿಯೆಗಳನ್ನು ಮಾಡುವುದು ಹೋಮ; ಮನೆ-ದೇವಾಲಯಗಳಲ್ಲಿ ವೈದಿಕ ರೀತಿಯಲ್ಲಿ ವಿಗ್ರಹಗಳನ್ನು ಪೂಜೆ ಮಾಡುವುದು ಅರ್ಚನೆ. ಈ ನಾಲ್ಕರಲ್ಲಿ ಅರ್ಚನೆಯು ಸುಲಭ, ಸರ್ವಾರ್ಥಸಾಧಕ ಆದುದು. ಭಗವಂತನ ಐದನೆಯ ಅರ್ಚಾವತಾರದ ಕುರುಹಾದ ದೇವಾಲಯಗಳಲ್ಲಿರುವ ವಿಗ್ರಹಗಳನ್ನು ಆಗ ಮೋಕ್ತವಾಗಿ ಆರಾಧಿಸುವುದು, ಸಂಸಾರಿಗಳಾದ ನಮಗೆ ಶ್ರೇಷ್ಠವಾದ ಉಪಾಯ. ಹೀಗೆ ಶ್ರುತಿ ಸ್ಮೃತಿ ಇತಿಹಾಸ ಆಗಮ ಮುಂತಾದ ಪ್ರಮಾಣದಿಂದಲೂ, ಜ್ಞಾನಾಧಿಕ ಜನರ ಅನುಷ್ಠಾನದಿಂದಲೂ ತಿಳಿದು ಬರುವ ಅಂಶದಂತೆ ಚೇತನನು ದೇವಾಲಯಕ್ಕೆ ಅಭಿಮುಖನಾದಾಗಲೇ ಸಕಲ ಶ್ರೇಯಸ್ಸಿಗೂ ಪಾತ್ರನಾಗುತ್ತಾನೆ.

೨

ಪರಮ ಪದದಲ್ಲಿರುವ ನಿತ್ಯ ಸುಖ ಸಿಗಬೇಕಾದಲ್ಲಿ ಈ ನಮ್ಮ ಶರೀರದಿಂದ ಕೆಲವು ಒಳ್ಳೆಯ ಕೆಲಸಗಳನ್ನು ಮಾಡಿಸಬೇಕು. ಪುಣ್ಯ ವಿಶೇಷದಿಂದ ದೊರಕಿರುವ ಮನುಷ್ಯ ಜನ್ಮವು ಇರುವಾಗಲೇ ಆತ್ಮನನ್ನು ಉದ್ಧರಿಸಿಕೊಳ್ಳಬೇಕು. ಆತ್ಮನ ವಿಕಾಸಕ್ಕೆ ಯಾಗಯಜ್ಞ, ಜಪತಪಗಳು ಅವಶ್ಯಕ. ಅಂತಃಕರಣದಲ್ಲಿ ಭಗವಂತನನ್ನು ಅಂತರ್ಯಾಮಿಯಾಗಿ ಹೊಂದಿರುವ ಭಕ್ತನ ಶರೀರವೂ ಒಂದು ರೀತಿಯಲ್ಲಿ ದೇವಾಲಯವೇ ಆಗಿರುತ್ತದೆ. ಜೀವರುಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು, ಅವರನ್ನು ನಿಯಂತ್ರಿಸುತ್ತ, ಅವರಿಗೆ ಸಲಹೆ ನೀಡಿ, ಮಾರ್ಗದರ್ಶನ ಮಾಡುತ್ತಿರುವ ಪುರುಷೋತ್ತಮನನ್ನು ಮಹರ್ಷಿಗಳು ಹಾಗೂ ದೇವತೆಗಳೂ ಸ್ತುತಿಸಿದ್ದಾರೆ.

ಭಗವದಾರಾಧನೆಗೆ ಮನೆಗಿಂತ ಗುಡಿಯೇ ಮೇಲು ಶಾಂತವಾದ ವಾತಾವರಣವಿರುವ ದೇವಾಲಯಗಳಲ್ಲಿನ ಸಾಧುಸಜ್ಜನರ ಹಾಗೂ ಭಾಗವತರ ದರ್ಶನ, ಸ್ಪರ್ಶ, ಸಂಭಾಷಣೆ, ಸ್ಮೃತಿ ಇವುಗಳಿಂದ ಪಾಪಗಳು ಕಳೆದು, ಪುಣ್ಯ ದೊರಕಿ, ಬಯಸಿದ ಫಲವಾದ ಮುಕ್ತಿಯು ಚೇತನರಿಗೆ ಸಿಗುವುದರಲ್ಲಿ ಸಂದೇಹವಿಲ್ಲವೆಂದು ಆಳ್ವಾರುಗಳು ಹೇಳಿದ್ದಾರೆ.

ಧರ್ಮದ ಕೇಂದ್ರ, ಕಲೆ ಸಂಸ್ಕೃತಿಗಳ ನೆಲೆವೀಡು ಹಾಗೂ ಗ್ರಾಮದ ಹೃದಯ ಎನಿಸಿರುವ ದೇವಾಲಯಕ್ಕೆ ಶ್ರೀ ವೈಷ್ಣವ ಮತದಲ್ಲಿ ಪ್ರಧಾನ ಸ್ಥಾನವನ್ನು ನೀಡಲಾಗಿದೆ. ಪರಮಾತ್ಮನನ್ನು ಧ್ಯಾನಿಸಲು, ಅವನಿಗೆ ಸಾಷ್ಟಾಂಗ ಪ್ರಮಾಣ ಮಾಡಿ ಅವನನ್ನು ಶರಣು ಹೋಗಲು, ಪಾಪಗಳನ್ನೆಲ್ಲ ನಾಶಮಾಡುವಂತೆ ಅವನನ್ನು ಪ್ರಾರ್ಥಿಸಲು, ಅವನು ನೆಲಸಿರುವ ದೇವಾಲಯಗಳು ಹೆಚ್ಚಿನ ನೆರವನ್ನು ನೀಡಬಲ್ಲುವು ; ಅವನ ದಿವ್ಯಾಯುಧಗಳು ಭಕ್ತರನ್ನು ಆಪತ್ತಿನಿಂದ ರಕ್ಷಿಸಬಲ್ಲುವು ; ಅವನ ದರ್ಶನ, ಸ್ತುತಿ, ನಾಮ ಸಂಕೀರ್ತನೆ, ಗುಣವರ್ಣನೆ, ಸ್ಮರಣೆ, ವೇದ ಪ್ರಬಂಧಗಳ ಪಾರಾಯಣ, ಪುರಾಣ ಶ್ರವಣ, ಕಥಾ ಕಾಲಕ್ಷೇಪ, ಪ್ರದಕ್ಷಿಣ, ನಮಸ್ಕಾರ, ಆವರಣವನ್ನು ಗುಡಿಸಿ ಸಾರಿಸಿ ರಂಗವಲ್ಲಿಯಲ್ಲಿ ಅಲಂಕರಿಸುವುದು, ಅವನಿಗಾಗಿ ತುಲಸಿ, ಹೂ, ನೀರು,

ಗಂಧ, ವಸ್ತ್ರ, ಛತ್ರಿ, ಚಾಮರ, ಆಭರಣ, ಭಕ್ಷ್ಯ, ಭೋಜ್ಯಗಳನ್ನು ಸಮರ್ಪಿಸುವುದು, ಭಾಗವತರಿಗೆ ಪ್ರಸಾದ ವಿನಿಯೋಗ, ತದೀಯಾರಾಧನೆ ಏರ್ಪಡಿಸುವುದು, ಇವು ಗಳಿಂದ ಆಗುವ ಪ್ರಯೋಜನ ಅಪಾರ ಎಂಬುದು ಹಿರಿಯರ ಅನುಭವ. ದೇವರು ಕೊಟ್ಟ ಸಂಪತ್ತನ್ನು ಅವನಿಗೆ ಸಮರ್ಪಿಸುವ ಮನೋಭಾವ, ಶಕ್ತರು ಮತ್ತು ಉಳ್ಳವ ರಿಂದ ದಾನ ಪಡೆದು ಅಶಕ್ತರು ಹಾಗೂ ಇಲ್ಲದವರಿಗೆ ಹಂಚುವ ದೈವೀ ಸಮತಾವಾದ ಭಾವನೆ, ಇವೆರಡೂ ಭಾರತೀಯ ದೇವಾಲಯಗಳಲ್ಲಿ ಇರುವುದನ್ನು ಎಲ್ಲರೂ ಕಾಣ ಬಹುದು.

ಈ ಪ್ರಪಂಚವೇ ದೇವನ ಆಲಯವಾದುದರಿಂದ ಇಲ್ಲಿ ಎಲ್ಲ ಕಡೆಯಲ್ಲಿಯೂ ದೈವಾಂಶವು ಹರಡಿಕೊಂಡಿದೆ. ಪುಟ್ಟ ಪ್ರಪಂಚವೆನಿಸಿದ ಶ್ರೇಷ್ಠ ಪ್ರಾಣಿಯಾದ ಮಾನವನಲ್ಲಿ ಈ ಪ್ರಪಂಚದಲ್ಲಿ ಇರುವುದೆಲ್ಲ ಇರುವ ಕಾರಣ, ಮಾನವ ಶರೀರವೂ ದೇವನ ಆಲಯವೇ ಆಗಿದೆ. ಮಾನವ ದೇಹದಲ್ಲಿ ಆಧ್ಯಾತ್ಮಿಕ ಅನುಭವವು ದೊರ ಕುವ ಹಲವು ಕೇಂದ್ರಗಳಿವೆ. ಭಕ್ತರು ಬಯಸಿದಾಗ, ಅವರ ಶಕ್ತಿ ಸಾಮರ್ಥ್ಯಗಳಿ ಗನುಗುಣವಾಗಿ, ಅವರು ಪೂಜಿಸಲು ಆಗುವಂತೆ, ನಿಷ್ಠಾವಂತ ಶ್ರೀವೈಷ್ಣವರ ಮತ್ತು ಸ್ವಯಮಾಚಾರ್ಯ ಪುರುಷರ ಮನೆಗಳಲ್ಲಿ, ಮಠಗಳಲ್ಲಿ, ದಿವ್ಯ ಕ್ಷೇತ್ರಗಳಲ್ಲಿ ಮೂರ್ತಿ, ವಿಗ್ರಹ, ಸಾಲಿಗ್ರಾಮಗಳಲ್ಲಿ ನೆಲಸಿರುವ ಭಗವಂತನ ರೂಪವೇ ಅರ್ಚಾವತಾರ ಎನ್ನ ಬಹುದು.

ಭಾರತದಲ್ಲಿರುವ ನೂರಾರು ದಿವ್ಯ ಕ್ಷೇತ್ರಗಳೆಲ್ಲವೂ ಆಧ್ಯಾತ್ಮಿಕ ಧ್ಯಾನದಲ್ಲಿ ನಿರತರಾಗಿದ್ದ ಸಾಧುಸಂತರು ಹಾಗೂ ಋಷಿ ಮುನಿಗಳಿಂದ ಪ್ರಭಾವಿತವಾಗಿವೆ. ಆ ಸ್ಥಳಗಳಲ್ಲಿ ವಾಸಿಸಿದವರಿಗೆ ಹಾಗೂ ಅವುಗಳನ್ನು ದರ್ಶಿಸಿದವರಿಗೆ ಸೌಂದರ್ಯ, ಮಾಧುರ್ಯ, ಪ್ರೇಮಗಳ ಅರಿವುಂಟಾಗಿ, ಅವರಿಗೂ ಆಧ್ಯಾತ್ಮಿಕ ಶೋಧನೆಗೆ ಸ್ಫೂರ್ತಿ ಸಿಗುತ್ತದೆ. ಆದುದರಿಂದಲೇ ಈ ದಿವ್ಯ ದೇಶಗಳ ದೇವಾಲಯಗಳಲ್ಲಿ ದಿನ ವಿಡೀ ಸಾಧು ಸಂತರ ಹಾಗೂ ಭಾಗವತರ ಚಟುವಟಿಕೆಗಳು ಕಾಣ ಬರುತ್ತವೆ. ಭಗವಂತನು ನೆಲೆಸಿರುವ ಈ ದಿವ್ಯ ಕ್ಷೇತ್ರಗಳಲ್ಲಿ ವಾಸಿಸಿ, ಅವನಿಗೆ ಪ್ರಿಯವಾದ ಕೈಂಕರ್ಯಗಳನ್ನು ನೆರವೇರಿಸಿ, ನೋಡಿದವರ ಮನಸ್ಸನ್ನು ಅಪಹರಿಸುವಂತಹ ರೂಪದಿಂದ ಕಂಗೊಳಿಸುವ ಅರ್ಚಾಮೂರ್ತಿಯನ್ನು ಶರಣು ಹೋಗುವುದು ಮಾನವನ ಶ್ರೇಯಸ್ಸಿಗೆ ಸಾಧನವೆಂದು ಆಚಾರ್ಯರುಗಳೆಲ್ಲ ಉಪದೇಶಿಸಿದ್ದಾರೆ.

ಗ್ರಾಮದ ಜನರು ಸಾಮೂಹಿಕವಾಗಿ ಭಾಗವಹಿಸಲು ಅನುಕೂಲ-ಅವಕಾಶ ಗಳಿರುವುದೇ ಅಲ್ಲಿರುವ ದೇವಾಲಯಗಳಲ್ಲಿ. ಅಲ್ಲಿ ನಿತ್ಯವೂ ಪೂಜೆಗಳು ಶ್ರದ್ಧಾಪೂರ್ವಕ ವಾಗಿ, ಕ್ರಮವಾಗಿ ನಡೆದರೆ, ನಾಡಿನಲ್ಲಿ ಕ್ಷಾಮಡಾಮರ, ಅತಿವೃಷ್ಟಿ ಅನಾವೃಷ್ಟಿ, ಇಲ್ಲದೆ, ಜನರೆಲ್ಲರೂ ಸುಖ ಶಾಂತಿ ಸಮಾಧಾನಗಳಿಂದ ಜೀವಿಸಬಹುದು ಎಂಬುದು ಆಳ್ವಾರಾಚಾರ್ಯರುಗಳ ಖಚಿತ ಅಭಿಪ್ರಾಯ, ಆದಕಾರಣ ದೇವಸ್ಥಾನದ ಮಹತ್ವ,

ಉಪಯೋಗಗಳನ್ನು ಅರಿತು ಅವುಗಳ ನಿರ್ಮಾಣ, ಜೀರ್ಣೋದ್ಧಾರಗಳ ಕಡೆ ಗಮನಿಸುವುದರಿಂದ ಸಮಾಜ, ಸಂಸ್ಕೃತಿಗಳು ಉನ್ನತಿಗೆ ಏರಬಲ್ಲವು.

೩

ದೇವಾಲಯಗಳಿಂದ ಸಮಾಜಕ್ಕೆ ಆಗುವ ಪ್ರಯೋಜನವನ್ನು ಹೀಗೆ ಸಂಗ್ರಹಿಸಿ ಹೇಳಬಹುದು. ಬೆಟ್ಟದಲ್ಲಿ ದೈವವು ನೆಲಸಿದೆ, ಅದು ದೇವತಾ ಸ್ವರೂಪ, ಎನ್ನುವ ಭಾವನೆ ಮತ್ತು ನಂಬಿಕೆ ಬಹು ಹಿಂದಿನಿಂದಲೂ ಅನೇಕ ದೇಶಗಳಲ್ಲಿ ಬೆಳೆದು ಬಂದಿದೆ. ಧರ್ಮ, ಸಂಸ್ಕೃತಿ, ಸಾಹಿತ್ಯಗಳಲ್ಲೆಲ್ಲ ಪರ್ವತಗಳು ಸೇರಿ ಹೋಗಿವೆ. ಬೆಟ್ಟದ ಜೊತೆಗೆ ಅಕ್ಕಪಕ್ಕದಲ್ಲಿ ದಟ್ಟವಾಗಿ ಹರಡಿರುವ ಅರಣ್ಯ, ಅದರಿಂದ ಧುಮುಕಿ ಹರಿದು ಬರುವ ನದಿ, ತೀರ್ಥಗಳೂ ದೇವತಾ ಸ್ಥಾನಗಳೆನಿಸಿವೆ, ಎಂಬುದು ವೈದಿಕ ಮಂತ್ರ ಗಳಲ್ಲಿ ಕಂಡು ಬರುತ್ತದೆ. ಆದುದರಿಂದಲೇ ಪ್ರಾಚೀನ ಕಾಲದಿಂದಲೂ ಸೃಷ್ಟಿಕರ್ತ ನಾದ ಭಗವಂತನನ್ನು ಪೂಜಿಸಲು ನದಿಯ ದಡ, ಅರಣ್ಯದ ಮಧ್ಯ, ಬೆಟ್ಟದ ತುದಿ ಮುಂತಾದ ಸುಂದರ, ಸ್ಫೂರ್ತಿಯುತ, ಪ್ರಶಾಂತ ವಾತಾವರಣದ, ಪ್ರಕೃತಿ ಸನ್ನಿವೇಶವಿರುವಲ್ಲಿ ದೇವಾಲಯಗಳನ್ನು ನಿರ್ಮಿಸುತ್ತ ಬಂದಿದ್ದಾರೆ. ಇದರಿಂದ ಅಲ್ಲಿಗೆ ಬಂದು ಹೋಗುವ ಭಕ್ತರಿಗೆ ಸೌಂದರ್ಯಾನುಭವವಾಗಿ ಶಾಂತಿ ಸಮಾಧಾನ ಗಳು ಸಿಗುತ್ತವೆ.

ದೇವರು ಎಲ್ಲ ಮಾನವರಿಗಿಂತಲೂ ದೊಡ್ಡವನೆಂಬುದು ನಿರ್ವಿವಾದವಾದ ವಿಚಾರವಾದುದರಿಂದ, ದೇವಾಲಯವು ಬೇರೆ ಎಲ್ಲ ಮನೆಗಳಿಗಿಂತ ಎತ್ತರವಾಗಿರಲೆಂದು ಅದಕ್ಕೆ ಗೋಪುರ ನಿರ್ಮಿಸಿ ಕಲಶಗಳನ್ನು ಇಟ್ಟಿರುತ್ತಾರೆ.

ದೇವಾಲಯ ನಿರ್ಮಾಣದಲ್ಲಿ ಭಾರತೀಯ ಶಿಲ್ಪಿಗಳು ವಿಜ್ಞಾನ ತತ್ತ್ವಗಳನ್ನು ಅಳವಡಿಸಿದ್ದಾರೆಂಬುದು ಇತ್ತೀಚಿನ ಸಂಶೋಧಕರ ಅಭಿಪ್ರಾಯ. ದೇವಾಲಯದಲ್ಲಿ ಪರಮಾತ್ಮನನ್ನು ಪೂಜಿಸುವಾಗ, ಭಕ್ತನ ವಿಶ್ವಾಸವೆಂಬ ವಿಷಮ ಶಕ್ತಿಯು, ಪರ ಮಾತ್ಮನ ವಾತ್ಸಲ್ಯವೆಂಬ ಸಮ ಶಕ್ತಿಯೊಡನೆ ಬೆರೆತಾಗ, ಭಕ್ತನಲ್ಲಿ ಒಂದು ರೀತಿಯ ಪ್ರಬಲ ಶಕ್ತಿಯು ಉತ್ಪನ್ನವಾಗುತ್ತದೆ.

ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬೀ ಪಂಚಭೌತಿಕ ಅಂಶಗಳಲ್ಲಿ ಯಾವುದಾದರೊಂದು ಪ್ರತಿ ಮಾನವರಲ್ಲಿ ಪ್ರಬಲವಾಗಿರುತ್ತದೆ. ಆದುದರಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬೀ ಪಂಚ ವಿಷಯಗಳಲ್ಲಿ ಒಂದರ ಪ್ರಭಾವವು ಆಯಾ ತತ್ತ್ವವು ಪ್ರಧಾನವಾಗಿರುವ ವ್ಯಕ್ತಿಗಳ ಮೇಲೆ ಬೀಳುತ್ತದೆ. ಚಿನ್ನ, ರತ್ನ, ವಜ್ರ, ಹೂ, ವಸ್ತ್ರ ಮುಂತಾದವುಗಳಿಂದ ಅಲಂಕೃತವಾದ ಮೂರ್ತಿಗಳು, ಹೂ ಮತ್ತು ರಂಗವಲ್ಲಿಗಳಿಂದ ಅಲಂಕೃತವಾದ ಪೀಠ, ಬಣ್ಣ ಬಣ್ಣದ ವಿವಿಧ ವಾಹನಗಳು, ಪರಿಮಳ ದ್ರವ್ಯದ ಸುವಾಸನೆ, ವಿವಿಧ ವಾದ್ಯಗಳ ನಿನಾದ, ಮಂತ್ರ ಘೋಷ, ಆರತಿ, ಶಠಾರಿ ಸ್ಪರ್ಶ, ಭಾಗವತ ಗೋಷ್ಠಿ, ತೀರ್ಥ–ಪ್ರಸಾದಗಳ ವಿನಿಯೋಗ ಇವೆಲ್ಲ

ಇರುವ ದೇವಾಲಯಗಳು ಪಂಚ ವಿಷಯಗಳಿಗೆ ದಾಸರಾಗಿರುವ ಎಲ್ಲ ರೀತಿಯ ಮಾನವರನ್ನು ಆಕರ್ಷಿಸಿ ಅವರ ಪಂಚೇಂದ್ರಿಯಗಳನ್ನು ತಣಿಸುತ್ತವೆ.

ವಿಶೇಷ ದಿನಗಳಲ್ಲಿ ನಡೆಸುವ ಹೋಮ ಹವನ, ಯಾಗಯಜ್ಞ, ಇವುಗಳಿಂದ ಏಳುವ ಹೊಗೆಯಿಂದ ವಾತಾವರಣವು ಶುದ್ಧಿಗೊಂಡು, ರೋಗ ಶಮನ, ಆರೋಗ್ಯ ವೃದ್ಧಿ ಎರಡೂ ಆಗುತ್ತದೆ. ದೇವಸ್ಥಾನಗಳಲ್ಲಿ ಉಪಯೋಗಿಸುವ ಪರಿಮಳ ದ್ರವ್ಯಗಳು ವಾಯುವಿನಲ್ಲಿರುವ ಉಷ್ಣಾಂಶ ಮತ್ತು ವಿಷಾಣುಗಳನ್ನು ಹೋಗಲಾಡಿಸುವುದರ ಮೂಲಕ ರಕ್ತ ಶುದ್ಧಿಗೆ ಮತ್ತು ಆರೋಗ್ಯದ ಅಭಿವೃದ್ಧಿಗೆ ಅತ್ಯವಶ್ಯಕವಾದ ಆಮ್ಲಜನಕ, ಓಜೋನ್‌ಗಳನ್ನು ಹೆಚ್ಚಿಸುತ್ತವೆ. ಇದರ ಫಲವಾಗಿ ದುಃಖ, ಚಿಂತೆ, ಚಂಚಲತೆ ಮೊದಲಾದ ವಿಷಮ ಕಂಪನಗಳು ಮನಸ್ಸಿನಿಂದ ದೂರವಾಗಿ, ಮಿದುಳು ತಂಪಾಗುತ್ತದೆ. ಇದನ್ನೇ ಒಂದು ರೀತಿಯಲ್ಲಿ ಭೂತ ಬಾಧೆಯು ದೂರವಾಯಿತು ಎಂದು ಹೇಳಬಹುದು.

ಘಂಟೆ, ಶಂಖ, ನಗಾರಿ, ಜಾಗಟೆ, ಡೋಲು, ತಾಳ, ಓಲಗ ಮುಂತಾದ ವಾದ್ಯಗಳಿಂದ, ಸಂಗೀತ, ನೃತ್ಯ, ವೇದ-ಪ್ರಬಂಧ ಪಠನ ಇವುಗಳಿಂದ ಉಂಟಾಗುವ ಶಬ್ದದಿಂದಲೂ ಅಪರಿಮಿತ ಪ್ರಭಾವ ಆಗುತ್ತದೆ. ಮಂತ್ರ ಸ್ತೋತ್ರ, ಗೀತೆ ಕೀರ್ತನೆಗಳಲ್ಲಿನ ಪದಗಳ ಸರಿಯಾದ ಉಚ್ಚಾರಣೆಯಿಂದ ಉತ್ಪತ್ತಿಯಾಗುವ ನಾದದ ಅಲೆಗಳ ಮೂಲಕ ಉದ್ಭವಿಸಿದ ನೂತನ ಶಕ್ತಿಯು ನಮ್ಮ ಶರೀರದ ಒಳಗಿರುವ ನರನಾಡಿಗಳು, ಅಂಗಾಂಗಗಳು ಹಾಗೂ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನುಂಟು ಮಾಡುತ್ತದೆ. ಈ ನಾದದ ಅಲೆಗಳಿಂದ ವ್ಯಕ್ತಿಯು ಸ್ವತಃ ಆರೋಗ್ಯವಂತನಾಗಿ, ವಿಕಾಸಗೊಳ್ಳುವುದಲ್ಲದೆ, ತಾನು ಇಚ್ಛಿಸಿದ ರೀತಿಯಲ್ಲಿ ಇತರರ ಮೇಲೆ ಪ್ರಭಾವ ಬೀರುವ ಶಕ್ತಿಯನ್ನೂ ಪಡೆದುಕೊಳ್ಳುತ್ತಾನೆ. ಈ ಕಾರಣದಿಂದಲೇ ಪ್ರಾಚೀನ ಋಷಿ ಮುನಿಗಳು ಪರಿಶೀಲನೆ-ಪ್ರಯೋಗಗಳನ್ನು ನಡೆಸಿ, ಸಿದ್ಧಾಂತಗಳನ್ನು ಕಂಡುಹಿಡಿದು, ಅದಕ್ಕೆ ಯೋಗ್ಯವಾದ ಮಂತ್ರ ಸ್ತೋತ್ರ ಗೀತೆಗಳನ್ನು ರಚಿಸಿದ್ದಾರೆ.

ಘಂಟಾರವದಿಂದ ದುಷ್ಟ ಶಕ್ತಿಗಳು ಹಾಗೂ ಭೂತಪ್ರೇತ ಪಿಶಾಚಿಗಳು ದೂರ ಸರಿದು, ಸಾಧಕನ ಯತ್ನದಲ್ಲಿ ತೊಂದರೆ ತಪ್ಪಿ, ಅವನ ಮನಸ್ಸಿನ ಏಕಾಗ್ರತೆ ಹಾಗೂ ಭಗವಂತನ ಮೇಲಣ ಭಕ್ತಿ ವರ್ಧಿಸಲು ನೆರವು ಸಿಗುತ್ತದೆ. ಘಂಟಾನಾದವಿದ್ದಲ್ಲಿ ದೇವರು ಭಕ್ತನ ಪೂಜಾಸ್ಥಾನಕ್ಕೆ ಬರಬೇಕೆಂಬ ಪ್ರೀತಿಯ ಆಹ್ವಾನವಿರುತ್ತದೆಂದು ಬಲ್ಲವರು ಹೇಳುತ್ತಾರೆ. ಹೀಗೆ ಶಬ್ದವು ಕೀಟಾಣು, ರೋಗಾಣುಗಳನ್ನು ಹೋಗಲಾಡಿಸಿ, ವಾಯುವನ್ನು ಶುದ್ಧಿಗೊಳಿಸಿ, ಸ್ಫೂರ್ತಿಯನ್ನು ನೀಡುತ್ತದೆ.

ಶ್ರೇಷ್ಠ ಶಿಲೆಯಾದ ಮೂರ್ತಿ ಮತ್ತು ಸಾಲಿಗ್ರಾಮವನ್ನು ಮಂತ್ರ ಪೂರಿತವಾಗಿ ತೊಳೆದ, ಕೇಸರಿ ಏಲಕ್ಕಿ ಪಚ್ಚ ಕರ್ಪೂರ ತುಲಸಿಗಳಿಂದ ಕೂಡಿದ, ತೀರ್ಥವು ರೋಗನಾಶಕ ಹಾಗೂ ಆನಂದದಾಯಕ ಆಗಿದೆ.

ಶಠಾರಿ ಸ್ಪರ್ಶವು ನಾವು ಪರಮಾತ್ಮನ ದಾಸರು ಎಂಬುದನ್ನು ಸದಾ ಜ್ಞಾಪಿಸು ವುದರ ಮೂಲಕ ನಮ್ಮಲ್ಲಿನ ಅಹಂಕಾರವನ್ನು ಹೋಗಲಾಡಿಸುತ್ತದೆ.

ಭಗವಂತನ ಧ್ಯಾನ ಚಿಂತನೆಗಳಲ್ಲಿ ನಿರತರಾಗುವಾಗ, ಜಿಂಕೆ ಅಥವಾ ಹುಲಿಯ ಚರ್ಮದ ಆಸನದ ಮೇಲೆ ಕುಳಿತುಕೊಳ್ಳುವುದರಿಂದ ಯಾವ ರೀತಿಯ ಹೆದರಿಕೆ ಇಲ್ಲದೆ, ಶಾಂತಿ, ಏಕಾಗ್ರತೆಗಳಿಂದ ಭಗವಂತನನ್ನು ಭಜಿಸಲು ಸಾಧ್ಯವಾಗುತ್ತದೆ.

ದೇವಾಲಯಕ್ಕೆ ಹೋಗುವ ಮುನ್ನ, ದೇವರ ಪೂಜೆ ಮಾಡುವ ಮೊದಲು, ಸೂರ್ಯೋದಯಕ್ಕೆ ಮುಂಚೆ, ಹಲ್ಲು ಬಾಯಿ ಶುಚಿಗೊಳಿಸಿಕೊಂಡು, ನದಿತೀರ್ಥ ಗಳಲ್ಲಿ, ಕೆರೆಕೊಳಗಳಲ್ಲಿ ಸ್ನಾನ ಮಾಡುವುದರಿಂದ ಮಾನಸಿಕ ಸ್ವಚ್ಛತೆಯೂ ಉಂಟಾಗಿ ದೇಹದಲ್ಲಿ ಬಲ, ಶಕ್ತಿ, ಸ್ಮರಣ, ಆಯುಸ್ಸು ಹೆಚ್ಚುತ್ತದೆ. ದುಃಸ್ವಪ್ನಗಳು ದೂರ ವಾಗಿ, ಸತ್ತ್ವ ಗುಣವು ಹೆಚ್ಚಿ, ನಿತ್ಯದ ಕೆಲಸಗಳನ್ನು ಮಾಡಲು ಹುಮ್ಮಸ್ಸು ದೊರೆ ಯುತ್ತದೆ. ಸ್ನಾನದ ನಂತರ ಶುಭ್ರ ವಸ್ತ್ರ ಧರಿಸಿ, ಕ್ರಿಮಿನಾಶಕಗಳಾಗಿರುವ ನಾಮ, ಗಂಧ ಮುಂತಾದವುಗಳನ್ನು ಮೈಮೇಲೆ ಧರಿಸುವುದರಿಂದ ಅನೇಕ ಚರ್ಮರೋಗಗಳು ನಾಶವಾಗಿ ಮೆದುಳಿಗೆ ತಂಪು, ಮನಸ್ಸಿಗೆ ಹರ್ಷ ಉಂಟಾಗಿ, ಏಕಾಗ್ರತೆಯನ್ನು ಸಾಧಿಸಲು ಅನುಕೂಲವಾಗುತ್ತದೆ. ದೇವರ ಪೂಜೆಗಾಗಿ ತುಲಸಿ, ಹೂಗಳನ್ನು ತರಲು ಸ್ವಲ್ಪ ದೂರ ಎದೆ, ಬೆನ್ನುಗಳ ಮೇಲೆ ಬಟ್ಟೆ ಇಲ್ಲದೆ ನಡೆದು ಹೋಗಿ ಬರುವು ದರಿಂದ ಶರೀರಕ್ಕೆ ಬಲ, ಮನಸ್ಸಿಗೆ ಹರ್ಷ ಉಂಟಾಗಿ ಆರೋಗ್ಯವು ವರ್ಧಿಸುತ್ತದೆ. ಸೂರ್ಯ ರಶ್ಮಿಯಲ್ಲಿರುವ ಕಿರಣಗಳಿಂದ ನಮ್ಮ ದೇಹದ ಚರ್ಮದಲ್ಲಿ ಹುಟ್ಟಿದ ಜೀವಾತು ವಸ್ತುವು ದೇಹದ ರಕ್ಷಣೆಯ ಕಾರ್ಯದಲ್ಲಿ ನೆರವಾಗುತ್ತದೆ.

ದೇವರ ಪೂಜೆ ಮಾಡುವಾಗ, ದೇವಸ್ಥಾನಗಳಿಗೆ ಹೋಗುವಾಗ, ಶುಭ್ರವಾದ ರೇಷ್ಮೆ ಬಟ್ಟೆಗಳನ್ನು ಧರಿಸುವುದರಿಂದ, ಸಾಂಕ್ರಾಮಿಕ ರೋಗಗಳನ್ನು ಹರಡುವ ಕೀಟಾಣು, ರೋಗಾಣುಗಳು ಶರೀರವನ್ನು ಪ್ರವೇಶಿಸಲು ಅಡ್ಡಿಯುಂಟಾಗುತ್ತದೆ. ಉಪವಾಸನೆ ಮಾಡಿದುದರ ಫಲವಾಗಿ ದೇಹದಲ್ಲಿ ಉದ್ಭವವಾದ ಶಕ್ತಿಯು ದೇಹ ದಲ್ಲಿಯೇ ಉಳಿಯಲು ಸಹಾಯವಾಗುತ್ತದೆ. ಜೊತೆಗೆ ಇತರ ಭಕ್ತರ ಕಣ್ಣಿಗೆ ಸೌಂದರ್ಯ, ಸಂತಸ ಭಾವನೆಗಳುಂಟಾಗಲು ಸಾಧ್ಯವಾಗುತ್ತದೆ.

ಪ್ರಾತಃಕಾಲದ ಎಳೆಯ ಬಿಸಿಲಿನಲ್ಲಿ ಸಾಷ್ಟಾಂಗ ನಮಸ್ಕಾರ, ಪ್ರದಕ್ಷಿಣೆಗಳನ್ನು ಮಾಡುವುದರಿಂದ, ಶರೀರದಲ್ಲಿರುವ ವ್ಯಾಧಿಗಳು ನಿರ್ಮೂಲವಾಗಿ, ಮಾಂಸಖಂಡ ಗಳು ದಷ್ಟಪುಷ್ಟವಾಗಿ ಬೆಳೆದು, ವಜ್ರಕಾಯ ಲಭಿಸುತ್ತದೆ. ಇದರ ಫಲವಾಗಿ ಶಿರ, ಕರ, ಹೃದಯ ವಿಕಾಸಗೊಂಡು ಮೇಧಾ, ಕ್ರಿಯಾ, ಇಚ್ಛಾ ಎಂಬ ಮೂರು ಶಕ್ತಿ ಗಳೂ ಪ್ರಬಲಗೊಂಡು ಉತ್ತಮ ಮಾನವನಾಗಲು ಸಾಧ್ಯವಾಗುತ್ತದೆ.

ಹೀಗೆ ನಮ್ಮ ಪ್ರಾಚೀನ ಋಷಿಗಳು ನಮ್ಮ ದೇವಾಲಯಗಳನ್ನು ವಿಜ್ಞಾನ, ಕಲೆ, ಆರೋಗ್ಯ, ಸಂಸ್ಕೃತಿ, ಸಭ್ಯತೆ, ಏಕಾಗ್ರತೆಗಳೆಲ್ಲದರ ಕೇಂದ್ರವನ್ನಾಗಿಸಿ, ಸತ್ಯಂ ಶಿವಂ ಸುಂದರಂ ಎನ್ನುವುದರ ನೆಲೆವೀಡಾಗಿ ಮಾಡಿ, ಮಹೋಪಕಾರ ಮಾಡಿದ್ದಾರೆ

ಎಂಬುದು ನಮ್ಮ ವಿಚಾರ, ಕೃತಿ, ಜೀವನಗಳಲ್ಲಿ ಮೂಡಿಬರಬೇಕಾದುದು ಅತ್ಯಾವಶ್ಯಕ.

ಳ

ದೇವರೇ ಇಲ್ಲ ಎಂದು ಹೇಳುವ ಆಧುನಿಕ ವಿದ್ಯಾವಂತರ ತಂಡವೊಂದಿದ್ದರೂ, ಈ ಜಗತ್ತಿನ ಎಲ್ಲ ವ್ಯವಹಾರಗಳನ್ನೂ ನಿಯಮ ಬದ್ಧವಾಗಿ ನಿರ್ವಹಿಸುತ್ತಿರುವ ಅಗೋಚರ ಶಕ್ತಿಯೊಂದಿದೆ ಎಂಬುದನ್ನು ನಮ್ಮ ನಿತ್ಯ ಬದುಕಿನ ಅನುಭವಗಳಿಂದಲೇ ಅರಿತುಕೊಳ್ಳಬಹುದು. ಈ ದಿವ್ಯ ಶಕ್ತಿಯನ್ನು ಸಾಕ್ಷಾತ್ಕರಿಸಿಕೊಂಡು, ಅದರಂತೆ ಆಗಿ, ಆನಂದಾನುಭವವನ್ನು ಪಡೆಯಲು ಯತ್ನಿಸುವುದೇ ಪೂಜೆ ಎಂದರೆ ತಪ್ಪಾಗಲಾರದು.

ಆಗಾಗ ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದು ಬದುಕಿನ ಉಳಿದ ಸಮಯದಲ್ಲಿ ಮಾಡುವ ಅಕೃತ್ಯಗಳಿಗೆಲ್ಲ ರಹದಾರಿ, ಅಪ್ಪಣೆ ಚೀಟಿ, ಪರವಾನಗಿ, ಎಂದು ಅನೇಕರು ಭಾವಿಸಿರುವಂತೆ ತೋರುತ್ತದೆ. ಪದಾರ್ಥವನ್ನು ಬಿಟ್ಟು ನೆರಳನ್ನು ಬಲವಾಗಿ ಹಿಡಿದುಕೊಳ್ಳುವ ಪ್ರವೃತ್ತಿಯ ಈ ಜನರಿಗೆ ದೇವಾಲಯಗಳಲ್ಲಿರುವ ಅರ್ಚಾಮೂರ್ತಿಗಳು ಕೇವಲ ವಿಗ್ರಹಗಳಾಗಿವೆಯೇ ಹೊರತು ಆದರ್ಶ ಎನಿಸಿಲ್ಲ. ಆದುದರಿಂದಲೇ ಸಮಾಜದಲ್ಲಿ ಕಪಟ, ವಂಚನೆ, ಸುಳ್ಳು, ಕೊಲೆ, ಸುಲಿಗೆ, ದರೋಡೆ ಮುಂತಾದ ದುರಾಚಾರಗಳು ಕಂಡು ಬಂದು ನಾವು ಅಧಃಪಾತಾಳಕ್ಕೆ ಇಳಿಯುತ್ತಿದ್ದೇವೆ.

ಜನತೆಯನ್ನು ಪ್ರೀತಿಸಿ, ಅವರಿಗೆ ಸಲ್ಲಿಸುವ ದೈಹಿಕ ಮತ್ತು/ಅಥವಾ ಮಾನಸಿಕ ಸೇವೆ, ಸಹಾಯ, ಸಹಕಾರಗಳೇ ಜನಾರ್ದನನ ಕೈಂಕರ್ಯ. ಆದುದರಿಂದ ಭಕ್ತಿಯು ಕೇವಲ ತೋರಿಕೆಯ ಪ್ರವೃತ್ತಿಯಾಗಬಾರದು. ದಿನದಲ್ಲಿ ಕೆಲವು ಘಂಟೆಗಳ ಕಾಲವೋ, ವಾರದಲ್ಲಿ ಕೆಲವು ದಿನಗಳ ಕಾಲವೋ, ವಿಗ್ರಹಗಳ ಮುಂದೆ ಕುಳಿತು, ನಿಂತು, ಸ್ತುತಿಸಿ, ಪೂಜೆ ಸಲ್ಲಿಸಿದ ಭಕ್ತನು, ಅಲ್ಲಿಗೆ ತನ್ನ ಕರ್ತವ್ಯ ಮುಗಿಯಿತು ಎಂದು ಭಾವಿಸಿದರೆ ಅದು ತಪ್ಪಾಗುತ್ತದೆ. ತೋರಿಕೆಯ ಪೂಜೆ–ಭಜನೆಗಳಿಗಿಂತ, ಮಾನವನ ನಿತ್ಯದ ಪ್ರತಿಯೊಂದೂ ಕೆಲಸದಲ್ಲಿ ಪ್ರಾಮಾಣಿಕತೆ ಪ್ರತಿಬಿಂಬಿಸಬೇಕು. ಆಗ ಮಾತ್ರ ಅವನದು ನಿಜವಾದ ಭಕ್ತಿಯಾದೀತು. ಅಂದರೆ ಪ್ರತಿಯೊಂದು ಕರ್ತವ್ಯ ಕರ್ಮಗಳನ್ನೂ ಯಜ್ಞ ದೃಷ್ಟಿಯಿಂದ, ಫಲವನ್ನು ಅಪೇಕ್ಷಿಸದೆ ಮಾಡಿ, ಜನತೆಯನ್ನು ಉದ್ಧರಿಸುವುದರ ಮೂಲಕ ಆತ್ಮೋದ್ಧಾರ ಮಾಡಿಕೊಳ್ಳುವುದು ದೇವರ ಪೂಜೆಯ ಫಲ ಆಗಬೇಕು. ಮಾನವರಾರೂ ಪರನಾಶಕ, ಪರಪೀಡಕ, ಪರಸ್ವಾಪಹಾರಿ ಜೀವಿಗಳಾಗದೆ, ಎಲ್ಲರೂ ಪರೋಪಕಾರಿ, ಪರಾನುಕೂಲ, ಭಾವನಾತೃಪ್ತ, ನಿಸರ್ಗಸ್ಥ ಜೀವಿಗಳಾದರೆ, ಈಪ್ರಪಂಚದಲ್ಲಿ ಸರ್ವೋದಯ ಸಮಾಜವು ಬೆಳೆದು ಇಹದಲ್ಲಿಯೇ ಮೋಕ್ಷ ಸದೃಶ ಜೀವನವನ್ನು ಕಾಣಬಹುದು.

ಮುಖ್ಯವಾಗಿ ತಮ್ಮದೇ ಆದ ಸಂಸ್ಕೃತಿ, ಕಲೆ, ಧರ್ಮಗಳ ಸಂಘಟನೆ, ಪ್ರಸಾರ, ಪ್ರಚಾರಗಳಲ್ಲಿ ನಿರತರಾಗಿರುವ ದೇವಾಲಯಗಳು ನಮ್ಮ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಾಮಾಜಿಕ ಜೀವನದ ಅತ್ಯವಶ್ಯಕ ಅಂಗಗಳಾಗಿವೆ. ದೇವರು, ಧರ್ಮ, ಸೇವೆ ಇವುಗಳ ಹೆಸರಿನಲ್ಲಿ ಮಾನವ-ಮಾನವರಲ್ಲಿ ನಡೆಯುತ್ತಿರುವ ಅನ್ಯಾಯ, ಶೋಷಣೆ, ಮೋಸ, ಹಿಂಸೆ, ಜಾತೀಯತೆ, ಪಕ್ಷಪಾತ, ಭ್ರಷ್ಟಾಚಾರ ಮುಂತಾದ ಪಾತಕಗಳನ್ನೆಲ್ಲ ಹೋಗಲಾಡಿಸಲು ಕೈಗೊಳ್ಳುವ ತೀವ್ರ ಕ್ರಮಗಳಲ್ಲಿ ದೇವಾಲಯಗಳು ಪ್ರಮುಖ ಪಾತ್ರವನ್ನು ವಹಿಸುವಂತೆ ಮಾಡಬೇಕಾದುದು ಅಲ್ಲಿನ ಧರ್ಮದರ್ಶಿಗಳ, ಮಠಾಧಿಪತಿಗಳ ಹಾಗೂ ಸರ್ಕಾರಿ ಅಧಿಕಾರಿಗಳ ಆದ್ಯ ಕರ್ತವ್ಯ.

೫

ದೇವಾಲಯಗಳಲ್ಲಿ ನಿಷಿದ್ಧವಾದ ಕೆಲಸಗಳು ಹೀಗಿರುತ್ತವೆ. ಹಲ್ಲು ಬಾಯಿ ಶುದ್ಧಿ ಮಾಡಿಕೊಳ್ಳದೆ, ಸ್ನಾನ ಮಾಡದೆ, ಶುಭ್ರವಸ್ತ್ರ ಧರಿಸದೆ, ಗುಡಿಗೆ ಹೋಗುವುದು; ಪಾದರಕ್ಷೆಯನ್ನು ಹಾಕಿಕೊಂಡೇ ಪೂಜಾಸ್ಥಾನಕ್ಕೆ ಹೋಗುವುದು ಹಾಗೂ ಪ್ರಾರ್ಥನೆಯ ಸಮಯದಲ್ಲಿ ಅದನ್ನು ಕಾಲಿನಿಂದ ತೆಗೆಯದಿರುವುದು ; ಅರ್ಚಾ ಮೂರ್ತಿಯನ್ನು ನೋಡಿದಾಗ ನಮಸ್ಕರಿಸದಿರುವುದು ಮತ್ತು ಒಂದೇ ಕೈಯಿಂದ ದೇವರನ್ನು ನಮಸ್ಕರಿಸುವುದು ; ಪ್ರತಿಪ್ರದಕ್ಷಿಣೆ ಮುಗಿದಾಗಲೂ ದೇವರಿಗೆ ನಮಸ್ಕಾರ ಮಾಡದೆ ಮುಂದೆ ಹೋಗುವುದು ; ದೇವರ ಮುಂದೆ ಹೋಗಿ ಅಡ್ಡಲಾಗಿ ನಿಂತು, ಹಿಂದೆ ಇರುವ ಜನರಿಗೆ ದೇವರು ಕಾಣದಂತೆ ಮಾಡುವುದು ; ದೇವರೆದುರಿಗೆ ಕಾಲುನೀಡಿ ಮಂಡಿಗಳನ್ನೆತ್ತಿ ಕೈಗಳಿಂದ ಬಳಸಿ, ಬೆನ್ನು ತೋರಿಸಿ ಕುಳಿತುಕೊಳ್ಳುವುದು ; ದೇವರ ಮುಂದೆ ಊಟ ಮಾಡುವುದು, ಸುಳ್ಳು ಹೇಳುವುದು, ಇತರರೊಂದಿಗೆ ಗಟ್ಟಿಯಾಗಿ ಮಾತನಾಡುವುದು, ಲೌಕಿಕ ವಿಷಯಗಳನ್ನು ಚರ್ಚಿಸುವುದು, ತನ್ನನ್ನು ಹೊಗಳಿಕೊಳ್ಳುವುದು, ಮಕ್ಕಳನ್ನು ಮುದ್ದಿಸುವುದು, ಜಗಳದಲ್ಲಿ ನಿರತರಾಗುವುದು, ಇತರರನ್ನು ಹೊಗಳುವುದು, ಆಶೀರ್ವದಿಸುವುದು ಅಥವಾ ಬೈದು ಹಿಂಸಿಸುವುದು, ತನ್ನ ದೇಹವನ್ನು ಕಂಬಳಿಯಿಂದ ಸುತ್ತಿಕೊಳ್ಳುವುದು, ಅಶ್ಲೀಲ ಶಬ್ದಗಳನ್ನು ಉಪಯೋಗಿಸುವುದು, ಉಪವಾಸ–ಸತ್ಯಾಗ್ರಹಗಳನ್ನು ಮಾಡುವುದು ; ಹೆಚ್ಚು ಬೆಲೆಯ ಅತ್ಯುತ್ತಮ ವಸ್ತುಗಳನ್ನು ತರಲು ಶಕ್ತಿ-ಸಾಮರ್ಥ್ಯಗಳಿದ್ದರೂ, ದೇವರಿಗಾಗಿ ಕಳಪೆಯ ಪೂಜಾವಸ್ತುಗಳನ್ನು ತರುವುದು ; ದೇವರಿಗೆ ನೈವೇದ್ಯವಾಗದ, ನೀರು ಕುಡಿಯುವುದು, ಹಣ್ಣು-ತಿಂಡಿಗಳನ್ನು ತಿನ್ನುವುದು, ಹೂವನ್ನು ಮುಡಿಯುವುದು ; ಋತು ವಿಶೇಷವಾದ ಮೊದಲ ಮಾವು, ಬಾಳೆ, ತೆಂಗುಗಳನ್ನು ದೇವರಿಗೆ ಸಮರ್ಪಿಸದೆ ಮಾನವ ಮಿತ್ರರಿಗೆ ಕೊಡುವುದು ; ಒಂದು ದೇವರೆದುರಿಗೆ ಬೇರೆ ದೇವರುಗಳನ್ನು ಹಳಿದು ಮಾತನಾಡುವುದು—ಇವು ಭಗವದಪಚಾರಗಳು. ಆದರೆ ಹಿರಿಯರು ಮತ್ತು ಆಚಾರ್ಯರುಗಳನ್ನು ಕಂಡಾಗ ಅವರ ಯೋಗಕ್ಷೇಮವನ್ನು

ವಿಚಾರಿಸದೆ ಉದಾಸೀನ-ತಿರಸ್ಕಾರ ಮಾಡುವ ಭಾಗವತಾಪಚಾರವು ಈ ಭಗವದಪ ಚಾರಕ್ಕಿಂತಲೂ ಹೀನವಾದುದು. ಆದುದರಿಂದ ಸಮಾಜದ ಹಿರಿಯರು ಮತ್ತು ತಾಯಿ ತಂದೆಯರು ಈ ರೀತಿಯ ಅಪಚಾರಗಳು, ನಿಷಿದ್ಧ ಕಾರ್ಯಗಳು ತಮ್ಮಿಂದ ಆಗ ದಂತೆ ನೋಡಿಕೊಂಡು, ಅವುಗಳನ್ನು ಮಕ್ಕಳೂ ಮಾಡದಿರುವಂತೆ ಅವರಿಗೆ ಬಾಲ್ಯ ದಿಂದಲೇ ತಿಳಿಸಿ ಹೇಳಬೇಕು.

### ೬) ಪ್ರಮುಖ ಶ್ರೀ ವೈಷ್ಣವ ದೇವಾಲಯಗಳು

ಭಗವದ್ವ್ಯಕ್ತಿದೇಶೇಷು ಸ್ವಯಂ ವ್ಯಕ್ತೇಷು ಭೂತಲೇ
ಅಷ್ಟೋತರಶತೇ ಮುಖ್ಯಂ ರತ್ನಭೂತಂ ಚತುಷ್ಟಯಂ ।
ಶ್ರೀರಂಗಂ ವೇಂಕಟಾದ್ರಿಶ್ಚ ಹಸ್ತಿಶೈಲಸ್ತಥಾಪರಂ
ತತೋ ನಾರಾಯಣಾದ್ರೀಶ ದಿವ್ಯಸ್ಥಾನ ಚತುಷ್ಟಯಂ ॥

ಎಂಬ ಭಗವದ್ವಾಣಿಯಂತೆ ಕರುಣಾ ನಿವಾಸಿಯಾದ ಶ್ರೀಮನ್ನಾರಾಯಣನು, ಮಾತು ಮನಸ್ಸುಗಳಿಗೆ ಅಗೋಚರನಾದ ತನ್ನನ್ನು ಜೀವಿಗಳು ದರ್ಶನಮಾಡಿ ಕೃತಾರ್ಥರಾಗ ಲೆಂಬ ಉದ್ದೇಶದಿಂದ ಅರ್ಚಾವಿಗ್ರಹ ರೂಪದಲ್ಲಿ ಶ್ರೀರಂಗ, ತಿರುಮಲೆ, ಕಂಚಿ, ಮೇಲುಕೋಟೆ ಎಂಬ ನಾಲ್ಕು ಪ್ರಮುಖ ಕ್ಷೇತ್ರದಲ್ಲಿ ನೆಲಸಿದ್ದಾನೆ, ಈ ದಿವ್ಯದೇಶ ಗಳಲ್ಲಿ ವಾಸಮಾಡಿ, ಮೂರ್ತಿಗಳ ದರ್ಶನಮಾಡಿ, ಅವರ ಕೈಂಕರ್ಯ ಮಾಡ ಬೇಕೆಂಬುದು ಆಚಾರ್ಯ ರಾಮಾನುಜರ ದಿವ್ಯಾಜ್ಞೆ.

ಶ್ರೀರಂಗ ಮಂಗಳಮಣಿಂ ಕರುಣಾನಿವಾಸಂ
ಶ್ರೀ ವೇಂಕಟಾದ್ರಿ ಶಿಖರಾಲಯ ಕಾಳಮೇಘಂ ।
ಶ್ರೀ ಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲದೀಪಂ ॥

ಎಂಬೀ ಶ್ಲೋಕವನ್ನು ರಾಮಾನುಜರ ಆಜ್ಞೆಯಂತೆ ಶ್ರೀ ವೈಷ್ಣವರು ನಿತ್ಯವೂ ಅನು ಸಂಧಾನ ಮಾಡುತ್ತಾರೆ.

ಶ್ರೀರಂಗದಲ್ಲಿ ಪ್ರಣವಾಕಾರ ವಿಮಾನದ ದೇವಾಲಯದಲ್ಲಿ ಭಕ್ತರಿಗೆ ಮಂಗಳ ವನ್ನು ಕರುಣಿಸುವ ಚಿಂತಾಮಣಿಯಂತಹ ರಂಗನಾಥ ಆಗಿದ್ದಾನೆ ; ತಿರುಮಲೆಯ ಶ್ರೀ ವೇಂಕಟಾಚಲ ಶಿಖರದ ಆನಂದನಿಲಯ ವಿಮಾನದ ದೇವಾಲಯದಲ್ಲಿ ಕಪ್ಪು ಮೋಡದಂತೆ ಕರುಣೆಯ ಮಳೆಗರೆಯುವ ಶ್ರೀನಿವಾಸ ಆಗಿದ್ದಾನೆ ; ಕಂಚಿಯಲ್ಲಿ ಪುಣ್ಯಕೋಟಿ ವಿಮಾನದ ದೇವಾಲಯದಲ್ಲಿ ಭಕ್ತರ ಇಷ್ಟಾರ್ಥಗಳನ್ನೆಲ್ಲ ನೆರವೇರಿಸುವ ಉಜ್ವಲ ಪಾರಿಜಾತದಂತಹ ವರದರಾಜ ಆಗಿದ್ದಾನೆ ; ಅಜ್ಞಾನದ ಅಂಧಕಾರದಲ್ಲಿ ಕಣ್ಣು ಕಾಣಿಸದವರಿಗೆ ಯದುಗಿರಿಯ ತುದಿಯಲ್ಲಿ ದೀಪದ ಹಾಗೆ ನಿಂತು ದಾರಿತೋರಿ ಸುವ ಚಲುವ ನಾರಾಯಣ ಆಗಿದ್ದಾನೆ. ಶ್ರೀರಂಗ, ಕಂಚಿ, ತಿರುಮಲೆ ಇವು

ಮೂರೂ ಮೊದಲ ಶ್ರೀ ವೈಷ್ಣವ ಆಚಾರ್ಯರುಗಳ ಆಧ್ಯಾತ್ಮಿಕ ಹಾಗೂ ಸಾಮಾಜಿಕ ನೆಲೆಗಳು ಆಗಿದ್ದುವು. ಮೇಲುಕೋಟೆಯು ರಾಮಾನುಜರಿಂದ ಪ್ರಾಮುಖ್ಯ ಪಡೆಯಿತು.

ಶ್ರೀರಂಗ, ಕಂಚಿ, ಮೇಲುಕೋಟೆ ದೇವಾಲಯಗಳಲ್ಲಿ ಪಾಂಚರಾತ್ರ ಆಗಮ ದಂತೆಯೂ, ತಿರುಮಲೈನಲ್ಲಿ ವೈಖಾನಸ ಆಗಮದಂತೆಯೂ ಭಗವತ್ಪೂಜೆ ನಡೆಯು ತ್ತದೆ.

## 1) ಶ್ರೀರಂಗ

ತಮಿಳು ನಾಡಿನಲ್ಲಿ ಕಾವೇರಿ ನದಿಯ ದಡದಲ್ಲಿರುವ ಸುಪ್ರಸಿದ್ಧವಾದ ಸ್ಥಳ. ಮುಕುಂದಮಾಲೆಯನ್ನು ರಚಿಸಿ ಹಾಡಿದ, ಕುಲಶೇಖರ ಆಳ್ವಾರರು ತಮ್ಮ ಮಗಳಾದ ಕುಲವಲ್ಲಿಯನ್ನು ರಂಗನಾಥ ದೇವರಿಗೆ ವಿವಾಹ ಮಾಡಿಕೊಟ್ಟರು. ತೊಂಡರಡಿಪ್ಪೊಡಿ ಆಳ್ವಾರರು ಈ ದೇವರ ಪುಷ್ಪ ಕೈಂಕರ್ಯವನ್ನು ಮಾಡುತ್ತಿದ್ದರು. ಅಂಡಾಳ್ ಈ ದೇವರನ್ನು ವಿವಾಹವಾಗಿ ಅವನಲ್ಲೇ ಐಕ್ಯಳಾದಳು. ತಿರುಮಂಗೈ ಆಳ್ವಾರರು ಈ ದೇವರನ್ನು ಪ್ರಾರ್ಥಿಸಿ ತಿರುವಾಯ್ಮೊಳಿಗೆ, ವೇದಕ್ಕೆ ಸಮಾನವಾದ ಅರ್ಹತೆಯನ್ನು ಸಂಪಾದಿಸಿಕೊಟ್ಟರು. ಸುಪ್ರಸಿದ್ಧ ಕವಿ ಕಂಬನ್ ತಾವು ರಚಿಸಿದ ತಮಿಳು ರಾಮಾಯಣ ವನ್ನು ಮೊದಲು ಓದಿದ್ದು ಈ ದೇವರ ಸನ್ನಿಧಿಯಲ್ಲಿ.

ಶ್ರೀರಂಗದ ರಂಗನಾಥಸ್ವಾಮಿಯು ಭಕ್ತಿಯ ಆಗರವೆಂದು ತಿಳಿದಿದ್ದ ಆಚಾರ್ಯ ನಾಥಮುನಿಗಳು ಕೆಲಕಾಲ ಇಲ್ಲಿದ್ದು, ಇದನ್ನು ಶ್ರೀ ವೈಷ್ಣವ ಕೇಂದ್ರವನ್ನಾಗಿ ಮಾಡಿದರು. ಗುರುಗಳಾದ ರಾಮಮಿಶ್ರರ ಪ್ರಭಾವದಿಂದ ಶ್ರೀರಂಗಕ್ಕೆ ಬಂದ ಯಾಮುನಾಚಾರ್ಯರು ತಮ್ಮ ಪೂರ್ವಜರ ಅಪೂರ್ವ ಆಸ್ತಿ ಎನಿಸಿದ್ದ ರಂಗನಾಥ ನನ್ನು ಸಂದರ್ಶಿಸಿದಾಗ ವಿರಕ್ತಿ ಉಂಟಾಗಿ ಸಂನ್ಯಾಸವನ್ನು ಸ್ವೀಕರಿಸಿ ಇಲ್ಲಿಯೇ ನೆಲೆ ಯಾಗಿ ನಿಂತರು. ಇವರ ಮಗ ತಿರುವರಂಗರು ಈ ದೇವಾಲಯದ ಆಡಳಿತಾಧಿಕಾರಿ ಯಾಗಿ, ದೇವರನ್ನು ಗಾನಮಾಡುತ್ತ ಇಲ್ಲಿ ಸೇವೆ ಸಲ್ಲಿಸಿದರು. ತಮ್ಮ ಗುರು ಸಮಾನರಾದ ಯಾಮುನಾಚಾರ್ಯರ ಮನೋಭಿಷ್ಟಗಳನ್ನೆಲ್ಲ ಪೂರೈಸಿದ ರಾಮಾ ನುಜರು ಬಹುಕಾಲ ಈ ದೇವಾಲಯದ ನಿರ್ವಾಹಕರಾಗಿದ್ದು, ಅನೇಕ ಸುಧಾರಣೆ ಗಳನ್ನು ಜಾರಿಗೆ ತಂದರು. ಈ ಕಾರ್ಯದಲ್ಲಿ ರಾಮಾನುಜರಿಗೆ ದಾಶರಥಿ ಹೆಚ್ಚು ನೆರವು ನೀಡಿದರು. ಪರಾಶರ ಭಟ್ಟರು, ಅವರ ಮಗ ಶ್ರೀರಾಮ ಪಿಳ್ಳೈ ಈ ದೇವಾಲಯ ದಲ್ಲಿ ಪೌರೋಹಿತ್ಯ, ಪುರಾಣ ಪ್ರವಚನ, ಸ್ತೋತ್ರರಚನೆ ಮಾಡುತ್ತಿದ್ದರು. ವೇದಾಂತ ದೇಶಿಕರು ಈ ದೇವರನ್ನು ಭಕ್ತಿ ಪೂರ್ವಕವಾಗಿ ಸ್ತುತಿಸಿದ್ದಾರೆ. ಶ್ರುತಪ್ರಕಾಶಿಕೆಗೆ ಸಮ ಎನಿಸಿಕೊಂಡಿರುವ, ನಂಪಿಳ್ಳೈಯವರು ಹೇಳಿದುದನ್ನು ವಡಕ್ಕುತ್ತಿರುವೀಧಿ ಪಿಳ್ಳೈರವರು ಸಂಗ್ರಹಿಸಿರುವ, ಈಡುಮುಪ್ಪತ್ತಾರಾಯಿರಪ್ಪಡಿಯ ಪ್ರವಚನವನ್ನು ಮಣವಾಳಮಾಮುನಿಗಳು ಮಾಡಿದುದು ಈ ದೇವರ ಎದುರಿನಲ್ಲಿ. ನಲ್ಲಾನ್

ಚಕ್ರವರ್ತಿ ಹಾಗೂ ತಾತಾಚಾರ್ಯ ಪರಂಪರೆಗಳ ಆಚಾರ್ಯರು ಈ ದೇವಾಲಯದ ಶ್ರೀಕಾರ್ಯಕರ್ತರಾಗಿದ್ದರು.

## 2) ತಿರುಮಲೆ

ಆಂಧ್ರ ಪ್ರದೇಶದಲ್ಲಿ ತಿರುಪತಿಯ ಬಳಿ ಇರುವ ಬೆಟ್ಟದ ಮೇಲಿರುವ ಪ್ರಸಿದ್ಧ ಸ್ಥಳ. ಎಲ್ಲ ಆಳ್ವಾರುಗಳೂ ಇಲ್ಲಿನ ವೇಂಕಟಾಚಲ ಅಥವಾ ಶ್ರೀನಿವಾಸ ದೇವರನ್ನು ಸ್ತುತಿಸಿದ್ದಾರೆ. ಈ ಸ್ವಾಮಿಯ ಮೇಲೆ ನಮ್ಮಾಳ್ವಾರರು ರಚಿಸಿದ ದಿವ್ಯ ಪ್ರಬಂಧದ ಪಾಶುರಗಳಿಂದ ಪ್ರಭಾವಿತರಾದ ನಾಥಮುನಿಗಳು ಇಲ್ಲಿಗೆ ಬಂದಿದ್ದರು. ತಾತನಿಂದ ಪ್ರಭಾವಿತರಾದ ಯಾಮುನಾಚಾರ್ಯರೂ ಇಲ್ಲಿಗೆ ಬಂದಿದ್ದು, ಮೊಮ್ಮಗ ಹಾಗೂ ಶಿಷ್ಯ ಆದ ಪೆರಿಯ ತಿರುಮಲೆ ನಂಬಿಗಳನ್ನು (ಶ್ರೀಶೈಲ ಪೂರ್ಣ) ಇಲ್ಲಿ ಅಭಿಷೇಕದ ತೀರ್ಥ, ಅರ್ಚನೆಯ ಪುಷ್ಪ ಸರಬರಾಜು ಮಾಡುವ ಕೈಂಕರ್ಯ ಮಾಡಿಕೊಂಡು, ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಮಾಡುವಂತೆ ವ್ಯವಸ್ಥೆ ಮಾಡಿದರು. ರಾಮಾನುಜರು ಇಲ್ಲಿಗೆ ಬಂದು ಶ್ರೀಶೈಲ ಪೂರ್ಣರ ಬಳಿ ರಾಮಾಯಣದ ಗೂಢಾರ್ಥ ವನ್ನು ಕಲಿಯುತ್ತಾ ದೇವರ ಸೇವೆಯನ್ನು ಚೆನ್ನಾಗಿ ಮಾಡಿದರು. ರಾಮಾನುಜರ ಪ್ರಾರ್ಥನೆಯಂತೆ ಇಲ್ಲಿನ ದೇವಮೂರ್ತಿಯು ವಿಷ್ಣು ಸಂಕೇತವಾದ ಶಂಖ-ಚಕ್ರ ಗಳನ್ನು ಕೈಗಳಲ್ಲಿಯೂ, ಶ್ರೀ ಮಹಾಲಕ್ಷ್ಮಿಯನ್ನು ಎದೆಯ ಮೇಲೂ ಧರಿಸಿದ ಕಾರಣ ಇಲ್ಲಿನ ಅರ್ಚಾಮೂರ್ತಿಯು ವಿಷ್ಣು ಎಂದು ನಿರ್ಧರಿಸಲ್ಪಟ್ಟಿತು. ಈ ಕಾರ್ಯದಲ್ಲಿ ನಲ್ಲಾನ್ ಚಕ್ರವರ್ತಿ ಪರಂಪರೆಯ ವರದಾಚಾರ್ಯರು ನೆರವು ನೀಡಿದರು.

ರಾಮಾನುಜರ ಕೋರಿಕೆಯಂತೆ ಅವರ ಶಿಷ್ಯರಾದ ಅನಂತಾರ್ಯರು ದೇವರಿಗೆ ತೀರ್ಥ, ಹೂಗಳ ಸರಬರಾಜು ಮಾಡುವ ಕೈಂಕರ್ಯಕ್ಕಾಗಿ ಇಲ್ಲಿ ಬಂದು ನಿಂತರು. ರಾಮಾನುಜರ ಶ್ರೀ ಭಾಷ್ಯದ ಮಂಗಳ ಶ್ಲೋಕವು ಈ ದೇವರನ್ನು ಕುರಿತದ್ದು. ವೇದಾರ್ಥ ಸಂಗ್ರಹ ಎಂಬ ಉಪನ್ಯಾಸಗಳ ಮೂಲಕ ರಾಮಾನುಜರು ತಮ್ಮ ತತ್ತ್ವ ದರ್ಶನವನ್ನು ಅರ್ಪಿಸುವುದು ಈ ದೇವರಿಗೇ. ಈ ದೇವಾಲಯದಲ್ಲಿ ರಾಮಾನುಜರು ಅನೇಕ ಸುಧಾರಣೆಗಳನ್ನು ತರುವುದರ ಮೂಲಕ, ಇಲ್ಲಿನ ಆಡಳಿತವು ವ್ಯವಸ್ಥಿತವಾಗಿ ನಡೆದು, ಈ ದೇವಾಲಯವು ವಿಶ್ವವಿಖ್ಯಾತವಾಗಲು ಕಾರಣರಾಗಿದ್ದಾರೆ. ಶ್ರೀ ವೈಷ್ಣವ ಸಮುದಾಯದ 'ಶಾತ್ತಿನವರು ಗುಡಿಯ ವ್ಯವಸ್ಥೆಯನ್ನೂ, ಶಾತ್ತಾದವರು ಪುಷ್ಪ ಕೈಂಕರ್ಯವನ್ನೂ ಕೈಕೊಳ್ಳುವಂತೆ ಮಾಡಿ, ಗುಡಿಯಲ್ಲಿ ಎರಡೂ ಪಂಗಡದವ ರಿಂದ ಸೇವೆ ಸಲ್ಲುವಂತೆ ಏರ್ಪಡಿಸಿ, ಆ ಮೂಲಕ ದೇವರ ಎದುರಿನಲ್ಲಿ ಜಾತಿ-ಮತ, ಮೇಲು–ಕೀಳುಗಳ ಭೇದ ಸಲ್ಲದು ಎಂಬುದನ್ನು ತೋರಿಸಿಕೊಟ್ಟರು. ಇಲ್ಲಿನ ದೇವಾಲಯದ ಘಂಟೆಯು ವೇದಾಂತ ದೇಶಿಕರಾಗಿ ಅವತರಿಸಿ, ರಾಮಾನುಜ ಸಿದ್ಧಾಂತದ ಪ್ರಚಾರವನ್ನು ಚೆನ್ನಾಗಿ ಮಾಡಿ ಈ ಸ್ಥಳವನ್ನು ಕೊಂಡಾಡಿದ್ದಾರೆ.

### 3) ಕಂಚಿ

ತಮಿಳುನಾಡಿನಲ್ಲಿ ಇರುವ ಪ್ರಸಿದ್ಧ ಪುಣ್ಯಸ್ಥಳ. ಅಯೋಧ್ಯೆ, ಮಥುರೆ, ಮಾಯ (ಹರಿದ್ವಾರ), ಕಾಶಿ, ಕಂಚಿ, ಅವಂತಿಕಾ (ಉಜ್ಜಯಿನಿ), ದ್ವಾರಕೆ- ಎಂಬೀ ಮೋಕ್ಷದಾಯಕವಾದ ಏಳು ಪವಿತ್ರ ನಗರಗಳಲ್ಲಿ ಕಂಚಿಯು ಅತಿ ಮುಖ್ಯ ವಾದುದು. ಇದರ ಬಳಿಯ ತೂಪ್ಪಿಲ್ ಅಗ್ರಹಾರವು ವೇದಾಂತ ದೇಶಿಕರು ಜನ್ಮ ತಳೆದ ಸ್ಥಳ.

ಆಳ್ವಾರಾಚಾರ್ಯರು ಇದ್ದು ಶ್ರೀ ವೈಷ್ಣವ ಮತದ ಪ್ರಮುಖ ಕೇಂದ್ರವಾದ ಈ ನಗರದಲ್ಲಿ, ವಿಶಿಷ್ಟಾದ್ವೈತದ ರಕ್ಷಣೆ, ವಿಕಾಸ, ಪ್ರಚಾರಗಳಿಗೆ ಇಲ್ಲಿನ ವರದರಾಜ ದೇವರ ಕೊಡುಗೆ-ಸಹಾಯ ಅಪರಿಮಿತವಾದುದು. ರಾಮಾನುಜರಿಗೆ ಅದ್ವೈತ ಸಿದ್ಧಾಂತದ ಪಾಠ ಆದುದು ಇಲ್ಲಿ ; ರಾಮಾನುಜರು ವಿಶಿಷ್ಟಾದ್ವೈತದ ಸ್ಥಾಪಕ ರಾಗುವಂತೆ ಅನುಗ್ರಹಿಸೆಂದು ಯಾಮುನರು ಬೇಡಿಕೊಂಡುದು ಈ ಸ್ವಾಮಿಯ ಸನ್ನಿಧಿಯಲ್ಲಿ ; ಬೇಡ ದಂಪತಿಗಳ ವೇಷದಲ್ಲಿ ರಾಮಾನುಜರನ್ನು ರಕ್ಷಿಸಿ, ವಿಂಧ್ಯಾರಣ್ಯ ದಿಂದ ಕಂಚಿಗೆ ಒಂದೇ ರಾತ್ರಿಯಲ್ಲಿ ಕರೆತಂದವರು ಈ ವರದರಾಜಸ್ವಾಮಿ ಮತ್ತು ಅವನ ಪತ್ನಿ ಪೆರುಂದೇವಿತಾಯಿ. ಜೊತೆಗೆ ಬೇಡರ ವೇಷ ಧರಿಸಿದಾಗ ನೀರು ತರಿಸಿ ಕೊಂಡು ಕುಡಿದ ಶಾಲಕಿಣರ್ ಭಾವಿಯಿಂದ ಸ್ವಾಮಿಯ ತಿರುಮಜ್ಜನಕ್ಕಾಗಿ ತೀರ್ಥ ವನ್ನು ಕೊಂಡೊಯ್ಯುವ ಸೇವೆಯ ಮೂಲಕ ರಾಮಾನುಜರ ದೇವತಾ ಕೈಂಕರ್ಯವು ಆರಂಭವಾದುದು ಇಲ್ಲಿ ; ತೀರ್ಥವನ್ನು ತರುತ್ತಿದ್ದಾಗ ಇಲ್ಲಿ ಕಿವಿಗೆ ಬಿದ್ದ ಯಾಮುನರ ಸ್ತೋತ್ರರತ್ನವೇ ರಾಮಾನುಜರು ಅದ್ವೈತವನ್ನು ಬಿಟ್ಟು ವಿಶಿಷ್ಟಾದ್ವೈತವನ್ನು ಅಪ್ಪಲು ಕಾರಣವಾಯಿತು ; ರಾಮಾನುಜರ ಸಂದೇಹಗಳಿಗೆ ತಿರುಕಚ್ಚಿ ನಂಬಿಗಳ (ಕಾಂಚೀ ಪೂರ್ಣರ) ಮೂಲಕ ಷಡರ್ಥಗಳ ಉತ್ತರವನ್ನು ನೀಡಿ ಅವರಿಗೆ ಜ್ಞಾನಾ ನಂದಗಳ ಮಾರ್ಗದರ್ಶನ ನೀಡಿದವನು ಈ ಸ್ವಾಮಿ ; ಮಾಯಾವಾದಿ ಸಂನ್ಯಾಸಿ ಯಜ್ಞಮೂರ್ತಿಯ ಅತಿ ಕಠಿಣವಾದ ಪ್ರಶ್ನೆಗಳಿಗೆ ಕನಸಿನಲ್ಲಿ ಸಾಕ್ಷಾತ್ಕಾರವಾದ ವಿಶೇಷ ಅರ್ಥಗಳು ಅವನನ್ನು ಸೋಲಿಸಲು ರಾಮಾನುಜರಿಗೆ ಸಾಧ್ಯವಾದುದು ಈ ಸ್ವಾಮಿಯ ಕೃಪೆಯಿಂದ ; ಶ್ರೀ ಭಾಷ್ಯವನ್ನು ಬರೆಯಲು ಕೂರೇಶ (ಶ್ರೀವತ್ಸಾಂಕ ಮಿಶ್ರ) ರಂತಹ ಪ್ರತಿಭಾಶಾಲಿ ಶಿಷ್ಯನನ್ನು ರಾಮಾನುಜರಿಗೆ ಒದಗಿಸಿ ಕೊಟ್ಟವನು ಈ ಸ್ವಾಮಿ ; ವಿಶಿಷ್ಟಾದ್ವೈತವು ರಾಮಾನುಜ ದರ್ಶನ ಎನಿಸಿದುದು ಈ ದೇವರ ಪ್ರಸಾದದಿಂದಲೇ ; ಶ್ರೀ ಭಾಷ್ಯದ ಮೇಲಿನ ಸುಪ್ರಸಿದ್ಧ ಟೀಕೆಯಾದ ಶ್ರುತ ಪ್ರಕಾಶಿಕೆ ಗ್ರಂಥವು ವಾತ್ಸ್ಯವರದಾಚಾರ್ಯರಿಂದ ಹೇಳಲ್ಪಟ್ಟು ಸುದರ್ಶನಾಚಾರ್ಯ ರಿಂದ ರಚಿಸಲ್ಪಟ್ಟುದು ಇಲ್ಲಿ ; ವೇದಾಂತ ದೇಶಿಕರೆನಿಸಿ ವಿಶಿಷ್ಟಾದ್ವೈತವನ್ನು ಸ್ಥಿರವಾಗಿ ಪ್ರತಿಷ್ಠಾಪಿಸಿ ಪ್ರಖ್ಯಾತರಾದ ವೆಂಕಟನಾಥರನ್ನು, ಎಲ್ಲರಿಂದಲೂ ಸನ್ಮಾನಿತ ನಾಗೆಂದು ವಾತ್ಸ್ಯವರದಾಚಾರ್ಯರು ಹರಸಿದುದು ಈ ಸ್ವಾಮಿಯ ಸನ್ನಿಧಿಯಲ್ಲಿ ; ಶ್ರೀ ಭಾಷ್ಯದ ಸಾರ ಮತ್ತು ಅರ್ಥ ಪಂಚಕದ ಮೂಲ ಕಾಣಬರುವುದು, ವೇದಾಂತ

ದೇಶಿಕರು ತಮ್ಮ ಈ ಇಷ್ಟದೇವತೆಯನ್ನು ಕುರಿತು ರಚಿಸಿದ ವರದರಾಜ ಪಂಚಾಶತ್ ಎಂಬ ಸ್ತೋತ್ರದಲ್ಲಿ ; ಈ ದೇವಾಲಯದ ಶ್ರೀ ಕಾರ್ಯಕರ್ತರಾಗಿದ್ದ ತಾತಾಚಾರ್ಯ ವಂಶದವರು ವಿಶಿಷ್ಟಾದ್ವೈತವನ್ನು ಪ್ರಚಾರಮಾಡಿ ಕೀರ್ತಿಶಾಲಿಯಾಗಿರುವಂತೆ ಮಾಡಿದ್ದಾರೆ.

ಒಟ್ಟಿನಲ್ಲಿ ರಾಮಾನುಜರು, ಶ್ರೀ ರಂಗದ ರಂಗನಾಥ ದೇವಾಲಯದ ಆಸ್ತಿಯನ್ನು ವ್ಯವಸ್ಥೆ ಮಾಡಿ, ಅಲ್ಲಿನ ಪೂಜೆ, ಮತ ಪ್ರಚಾರ, ಸರಿಯಾಗಿ ನಡೆದುಕೊಂಡು ಬರುವಂತೆ ಮಾಡಿದರು ; ತಿರುಮಲೆಯ ಶ್ರೀನಿವಾಸ ಮತ್ತು ಮೇಲುಕೋಟೆಯ ತಿರುನಾರಾಯಣ ದೇವರುಗಳನ್ನು ಪುನರುಜ್ಜೀವನಗೊಳಿಸಿದವರೂ ರಾಮಾನುಜರೇ. ಆದರೆ ಈ ಮೂರೂ ದೇವರುಗಳ ಕೈಂಕರ್ಯವನ್ನು ನೆರವೇರಿಸಿದ ರಾಮಾನುಜರನ್ನು ಸೃಷ್ಟಿಸಿ ಕೊಟ್ಟವನು ಕಂಚಿಯ ವರದರಾಜಸ್ವಾಮಿ. ಆದುದರಿಂದಲೇ ಶ್ರೀ ವೈಷ್ಣವ ಮತದಲ್ಲಿ ಕಂಚಿಯ ದೇವರಿಗೆ ಹೆಚ್ಚು ಪ್ರಾಧಾನ್ಯವಿದೆ.

## 4) ಮೇಲುಕೋಟೆ

ಕರ್ನಾಟಕದ ಮಂಡ್ಯಜಿಲ್ಲೆಯಲ್ಲಿರುವ ಇದು ದಕ್ಷಿಣ ಬದರಿಕಾಶ್ರಮವೆಂದು ಪ್ರಸಿದ್ಧವಾದ ಪುಣ್ಯಕ್ಷೇತ್ರ. ಶ್ರೀ ವೈಷ್ಣವ ಮತದಲ್ಲಿ ಶ್ರೀರಂಗ, ಕಂಚಿಗಳಷ್ಟೇ ಖ್ಯಾತಿಯು ಮೇಲುಕೋಟೆಗೂ ಇದೆ.

ಶೈವ ಪಕ್ಷಪಾತಿಗಳಾದ ಚೋಳರಾಜರಿಂದ ತೊಂದರೆಯಾಗುವುದೆಂಬ ಭಯವನ್ನು ಉಂಟುಮಾಡಿ, ತನ್ನ ಸಾನ್ನಿಧ್ಯಕ್ಕೆ ಬರಮಾಡಿಕೊಂಡು, ತನ್ನ ದರ್ಶನದಿಂದ ಅವರಿಗೆ ಹರ್ಷವನ್ನು ಉಂಟುಮಾಡಿ, ಜನರನ್ನು ಸತ್ಪಥದಲ್ಲಿ ಒಯ್ಯುವ ಸ್ಫೂರ್ತಿ-ಉತ್ಸಾಹಗಳನ್ನು ನೀಡಿದ ಕರುಣಾಮಯಿ ದೇವರು ಈ ಊರಿನ ನಾರಾಯಣ ಮೂರ್ತಿ ; ಏತ್ತಕಲಂಗಳ್ ಎಂಬ ಗೋದಾದೇವಿಯ ತಿರುಪ್ಪಾವೈ ಪಾಶುರವನ್ನು ರಾಮಾನುಜರು ಸ್ಮರಿಸಿಕೊಂಡುದು ಇಲ್ಲಿದ್ದಾಗಲೇ ; ಶ್ರೀರಂಗದಿಂದ ತಪ್ಪಿಸಿಕೊಂಡು ಬರುವಾಗ ಧರಿಸಿಕೊಂಡು ಬಂದಿದ್ದ ಬಿಳಿಯ ವಸ್ತ್ರಗಳನ್ನು ಕಳಚಿಹಾಕಿ, ವೇದ ಪುಷ್ಕರಣಿಯಲ್ಲಿ ಸ್ನಾನಮಾಡಿ, ದತ್ತಾತ್ರೇಯರು ತಮ್ಮ ಉಡುಪನ್ನು ಇಟ್ಟಿದ್ದ ಪರಿಧಾನ ಶಿಲೆಯ ಮೇಲಿನಿಂದ ಕಾಷಾಯ ವಸ್ತ್ರಗಳನ್ನು ಧರಿಸಿ ಮತ್ತೆ ಸಂನ್ಯಾಸಿ ವೇಷವನ್ನು ಧರಿಸಿದುದು ಇಲ್ಲಿ ; ಜೈನ ಮತೀಯನಾಗಿದ್ದ ಹೊಯ್ಸಳರಾಜ ಬಿಟ್ಟೀದೇವನನ್ನು ಶ್ರೀ ವೈಷ್ಣವನಾಗಿಮಾಡಿ, ಅವನಿಗೆ ವಿಷ್ಣುವರ್ಧನ ಎಂಬ ಹೆಸರನ್ನು ಕೊಟ್ಟುದು ಇಲ್ಲಿ : ಖಿಲವಾಗಿ ಹೋಗಿದ್ದ ಈ ಕ್ಷೇತ್ರವನ್ನು ಪುನಃ ಮೇಲೆತ್ತಿ, ಮುಳ್ಳು ಪೊದೆಗಳಲ್ಲಿ ಮುಚ್ಚಿ ಹೋಗಿದ್ದ ಮೂಲವಿಗ್ರಹದ ಪ್ರತಿಷ್ಠಾಪನೆ ಮತ್ತು ದೇವಾಲಯದ ನಿರ್ಮಾಣ ಕಾರ್ಯದಲ್ಲಿ ರಾಮಾನುಜರಿಗೆ ನೆರವಾದವನು ವಿಷ್ಣುವರ್ಧನ ; ಇಲ್ಲಿನ ತಿರುನಾರಾಯಣ ದೇವಾಲಯದಲ್ಲಿ ಪ್ರತಿಷ್ಠಿಸಿದ ಉತ್ಸವ ಮೂರ್ತಿಯನ್ನು ಬಹಳ ಶ್ರಮವಹಿಸಿ ದೂರದಿಂದ ತರಲು ನೆರವು ನೀಡಿದ ಅಸ್ಪೃಶ್ಯರೆನಿಸಿದ

ಹಿಂದೂಗಳಿಗೆ ರಾಮಾನುಜರು ಶ್ರೀ ವೈಷ್ಣವ ದೀಕ್ಷೆಯನ್ನು ನೀಡಿ, ಅವರನ್ನು ತಿರುಕುಲತ್ತಾರ್ ಎಂದು ಕರೆದು, ಅವರಿಗೆ ಸ್ನಾನ, ದೇವಾಲಯ ಪ್ರವೇಶ, ದೇವ ಮೂರ್ತಿದರ್ಶನ, ತೀರ್ಥ ಪ್ರಸಾದಗಳಿಗೆಲ್ಲ ಅವಕಾಶ ಮಾಡಿಕೊಟ್ಟುದು ಇಲ್ಲಿ ; ತನ್ನ ಪ್ರಾಣಪ್ರಿಯನಾದ ಉತ್ಸವ ಮೂರ್ತಿಯನ್ನು ಅಗಲಿರಲಾರೆನೆಂದು ತಿರು ನಾರಾಯಣ ಪುರಕ್ಕೆ ಬಂದ ಮುಸಲ್ಮಾನ ರಾಜಕುವರಿ ಬೀಬಿನಾಚ್ಚಿಯಾರ್ ಐಕ್ಯ ವಾದುದು ಈ ದೇವರಲ್ಲಿ ; ಅವಳ ವಿಗ್ರಹವನ್ನು ಮೂಲವಿಗ್ರಹದ ಪಾದಗಳ ಬಳಿ ಇರುವಂತೆ ರಾಮಾನುಜರು ಆದೇಶವಿತ್ತುದು ಇಲ್ಲಿ ; ಇಂಪಾಗಿ ಹಾಡುತ್ತಿದ್ದ, ಪ್ರಸಿದ್ಧ ವಿದ್ವಾಂಸರಾದ ಸೋಮಯಾಜಿಯಾಂಡಾನ್‌ರವರು ರಾಮಾನುಜರ ಇಚ್ಛೆಯಂತೆ ಇಲ್ಲಿ ನಿಂತು, ದೇವಾಲಯದ ಪೂಜಾ ವ್ಯವಸ್ಥೆಯನ್ನು ನೋಡಿಕೊಂಡು, ಕಾಲಕ್ಷೇಪ ಗೋಷ್ಠಿಯನ್ನು ನಡೆಸುತ್ತ, ಅನೇಕ ಗ್ರಂಥಗಳನ್ನು ರಚಿಸಿದರು.

ನಾಲೂರಾಚ್ಚಾನ್ ಪಿಳ್ಳೈಯವರು ಈ ದೇವರ ಕೈಂಕರ್ಯದಲ್ಲಿ ನಿರತರಾಗಿದ್ದು ಶಿಷ್ಯರಾದ ಜನನ್ಯಾಚಾರ್ಯ, ತಿರುವಾಯ್ಮೊಳಿ ಪಿಳ್ಳೈಗಳಿಗೆ ಈಡುಮುಪ್ಪತ್ತಾರಾಯಿ ರಪ್ಪಡಿಯನ್ನು ಉಪದೇಶಿಸಿದರು ; ಜನನ್ಯಾಚಾರ್ಯರ ಅಥವಾ ತಿರುನಾರಾಯಣ ಪುರತ್ತು ಆಯ್‌ರವರು ಕಾಲಕ್ಷೇಪ ಗೋಷ್ಠಿ ಸುಪ್ರಸಿದ್ಧವೆನಿಸಿದ್ದಿತು ; ಇವರು ಮಣವಾಳ ಮಾಮುನಿಗಳಿಗೆ ಇಲ್ಲಿ ತಮ್ಮ ಜ್ಞಾನಾನುಭವಗಳನ್ನೆಲ್ಲಾ ಕಲ್ಪಿಸಿಕೊಟ್ಟರು.

ರಾಮಾನುಜರು ಮೇಲುಕೋಟೆಯನ್ನು ಬಿಟ್ಟು ಶ್ರೀರಂಗಕ್ಕೆ ಹಿಂದಿರುಗುವಾಗ ಸ್ವತಃ ಪ್ರಾಣಪ್ರತಿಷ್ಠೆಮಾಡಿ, ಆಶೀರ್ವದಿಸಿ ಕೊಟ್ಟ ಅವರ ವಿಗ್ರಹವು ಇರುವುದು ಇಲ್ಲಿನ ದೇವಾಲಯದಲ್ಲಿ. ಇಲ್ಲಿಗೆ ಭೇಟಿ ನೀಡಿ ಈ ಸ್ವಾಮಿಯ ಕೃಪೆಗೆ ಪಾತ್ರರಾದ ವೇದಾಂತ ದೇಶಿಕರ ಹಾಗೂ ಮಣವಾಳ ಮಾಮುನಿಗಳ ಸನ್ನಿಧಿಗಳೂ ಇಲ್ಲಿವೆ. ಯತಿರಾಜ, ಪರಕಾಲ, ಅಹೋಬಿಲ ಮಠಗಳಿದ್ದು ರಾಮಾನುಜ ದರ್ಶನದ ಪ್ರಚಾರ ಆಗುತ್ತಲಿದೆ. ಈ ಕಾರ್ಯದಲ್ಲಿ ಇಲ್ಲಿನ ವಿಶಿಷ್ಟಾದ್ವೈತ ಸಂಶೋಧನ ಕೇಂದ್ರವೂ ಸಹಾಯ ಮಾಡುತ್ತಿದೆ.

# ವಿಶಿಷ್ಟಾದ್ವೈತದ ಹುಟ್ಟು ಮತ್ತು ಬೆಳವಣಿಗೆ

ಈ ಪ್ರಪಂಚವನ್ನು ಶರೀರವಾಗಿ ಹೊಂದಿರುವ ಪರಮಾತ್ಮನನ್ನು ಕುರಿತು ಹೇಳುವ ವಿಶಿಷ್ಟಾದ್ವೈತ ವೇದಾಂತವು ಅನಾದಿಯಾದ ವೈದಿಕ ದರ್ಶನವೆಂದು ಅನೇಕರು ಒಪ್ಪಿಕೊಂಡಿದ್ದಾರೆ. ಉಪನಿಷತ್ತು, ಗೀತೆ, ಬ್ರಹ್ಮಸೂತ್ರ ಎಂಬೀ ಪ್ರಸ್ಥಾನತ್ರಯಗಳ ನಿಜವಾದ ಅರ್ಥವನ್ನು ಶ್ರುತಿ, ಸ್ಮೃತಿ, ಪುರಾಣ, ಆಗಮ, ಕಾವ್ಯ, ಇತಿಹಾಸಗಳಿಗೆ ಅನುಗುಣವಾಗಿ ತಿಳಿಸುವ ಸಿದ್ಧಾಂತ ಇದೊಂದೇ ಎಂಬುದಾಗಿ ಖ್ಯಾತಿವೆತ್ತ ಪೌರಸ್ತ್ಯ ಹಾಗೂ ಪಾಶ್ಚಾತ್ಯ ವಿದ್ವಾಂಸರು ಹೇಳಿದ್ದಾರೆ.

ಪ್ರಾಪಂಚಿಕವಾದ ನಡೆವಳಿಕೆಗಳಿಗೂ ವಿಶಿಷ್ಟಾದ್ವೈತ ಸಿದ್ಧಾಂತಕ್ಕೂ ಹೆಚ್ಚು ಸಾಮರಸ್ಯವಿದೆ ಎಂಬುದು ಅನೇಕ ದಾರ್ಶನಿಕರ ಅಭಿಪ್ರಾಯ. ವಸುಧೈವ ಕುಟುಂಬಕಂ, ಲೋಕಸೇವೆಯೇ ಈಶಸೇವೆ, ಎನ್ನುವ ಈ ಸಿದ್ಧಾಂತವನ್ನು ಸರಿಯಾಗಿ ತಿಳಿದು ಆಚರಿಸಿದಾಗಲೇ ಈ ಪ್ರಪಂಚದಲ್ಲಿ ಸುಖಶಾಂತಿ ಸಮಾಧಾನಗಳು ಏರ್ಪಟ್ಟು, ಮಾನವ ಜನಾಂಗವು ಸುರಕ್ಷಿತವಾಗಿ ಬಾಳಲು ಸಾಧ್ಯ. ಆದುದರಿಂದ ಈ ಸಿದ್ಧಾಂತದ ಅಧ್ಯಯನ, ಅಧ್ಯಾಪನ, ಪ್ರಚಾರ ಬೇಗ ಆಗಬೇಕಾದುದು ಅತ್ಯಾವಶ್ಯಕ.

ವಿಶಿಷ್ಟಾದ್ವೈತ ಸಿದ್ಧಾಂತವು ಸಂಸ್ಕೃತ ಭಾಷೆಯಲ್ಲಿರುವ ವೇದಗಳಿಂದ ಪ್ರಾರಂಭವಾಗುತ್ತದೆ. ಪುರುಷ ಸೂಕ್ತದಲ್ಲಿ ಹೇಳಿರುವಂತೆ ಪರಬ್ರಹ್ಮನು ತನಗೆ ಬೇಕೆನಿಸಿದಾಗ ಅಚಿತ್ ರೂಪದಲ್ಲಿ ವ್ಯಕ್ತವಾಗುತ್ತಾನೆ. ಈಶ, ಪ್ರಶ್ನ, ಕೇನ, ಮಾಂಡೂಕ, ಶ್ವೇತಾಶ್ವತಾರ ಉಪನಿಷತ್ತುಗಳಲ್ಲಿ ಸ್ವಲ್ಪವಾಗಿದ್ದರೂ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಉಪನಿಷತ್ತುಗಳಲ್ಲಿ ಈ ಸಿದ್ಧಾಂತವು ಸ್ಫುಟವಾಗಿ ಪ್ರತಿಪಾದಿತವಾಗಿದೆ. ಮನು, ಆಪಸ್ತಂಭ, ಯಾಜ್ಞವಲ್ಕ್ಯ ಸ್ಮೃತಿಗಳಲ್ಲಿ, ವಿಷ್ಣು ಪುರಾಣದಲ್ಲಿ, ರಾಮಾಯಣ ಮಹಾಭಾರತ–ಭಾಗವತಗಳಲ್ಲಿ, ಪಾಂಚರಾತ್ರ ಆಗಮ ದಲ್ಲಿ ಸಹ ಈ ಸಿದ್ಧಾಂತವು ವಿಶದವಾಗಿ ನಿರೂಪಿಸಲ್ಪಟ್ಟು ಆಚಾರ್ಯರುಗಳ ಅನು ಷ್ಠಾನದಲ್ಲಿ ಪ್ರತಿಫಲಿಸಿದೆ.

ವಿಶಿಷ್ಟಾದ್ವೈತ ಸಿದ್ಧಾಂತವು ಸಂಸ್ಕೃತ ಸಾಹಿತ್ಯದಲ್ಲೇ ಅಲ್ಲದೆ ತಮಿಳಿನಲ್ಲಿರುವ ಆಳ್ವಾರುಗಳ ದಿವ್ಯ ಪ್ರಬಂಧದಲ್ಲಿಯೂ ಕಾಣಬರುತ್ತದೆ. ಸಂಸ್ಕೃತದ ಗ್ರಂಥಗಳಲ್ಲಿ ಬಂದಿರುವ ಭಾವನೆಗಳೆಲ್ಲವೂ ತಮಿಳಿನ ಪ್ರಬಂಧದಲ್ಲಿ ಅಡಗಿವೆ. ಜೊತೆಗೆ ಸಂಸ್ಕೃತ ವೇದಾಂತ ಸಾಹಿತ್ಯವು ಹೇಳದೆ ಬಿಟ್ಟಿರುವ ಅನೇಕ ಸಮಸ್ಯೆಗಳ ಪರಿಹಾರವು ತಮಿಳು ಪ್ರಬಂಧಗಳಲ್ಲಿ ಕಾಣಬರುತ್ತದೆ.

ವ್ಯಾಸರು ರಚಿಸಿದ ಬ್ರಹ್ಮಸೂತ್ರಗಳಿಗೆ ಬೋಧಾಯನರು, ವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ ವಿಶಿಷ್ಟಾದ್ವೈತ ಪರವಾಗಿ ರಚಿಸಿದ ವೃತ್ತಿಯಲ್ಲಿ ವಿಸ್ತೀರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಆಮೇಲೆ ಆಚಾರ್ಯ ಬ್ರಹ್ಮನಂದಿ ಅಥವಾ ಟಂಕರು ತಾವೂ ರಚಿಸಿದ ವಾಕ್ಯದಲ್ಲಿ ಸಂಗ್ರಹವಾಗಿ ವ್ಯಾಖ್ಯಾನವನ್ನು ಬರೆದರು. ದ್ರಮಿಡಾಚಾರ್ಯ ಅಥವಾ ನೈಧ್ರುವ ಮಾಡಪೂಶಿ ಆಳ್ವಾನ್ ಎಂಬುವರು ಟಂಕರ ವಾಕ್ಯಕ್ಕೆ ಸಂಗ್ರಹವಾಗಿ ಭಾಷ್ಯವನ್ನು ಬರೆದರು. ಗುಹದೇವ, ಕಪರ್ದಿ, ಭಾರುಚಿಗಳ ವ್ಯಾಖ್ಯಾನ, ನಾಥಮುನಿಗಳ ಮತ್ತು ಯಾಮುನರ ಗ್ರಂಥಗಳು, ಇವುಗಳೆಲ್ಲೂ ಈ ಭಾವನೆಗಳಿವೆ. ಈ ಮೇಲಿನ ಗ್ರಂಥಗಳನ್ನೆಲ್ಲ ಆಧಾರವಾಗಿಟ್ಟುಕೊಂಡು, ಅವುಗಳಲ್ಲಿನ ಪಂಕ್ತಿಗಳನ್ನು ಪ್ರಮಾಣೀಕರಿಸಿ, ಬ್ರಹ್ಮಸೂತ್ರಗಳಿಗೆ ಆಚಾರ್ಯ ರಾಮಾನುಜರು ಬರೆದ ಶ್ರೀ ಭಾಷ್ಯವು ಈ ಸಿದ್ಧಾಂತಕ್ಕೆ ಬಹು ಮುಖ್ಯವಾದ ಆಧಾರ ಗ್ರಂಥ. ವಾದ ರೂಪದಲ್ಲಿರುವ ಶ್ರೀ ಭಾಷ್ಯವು ಶಾಸ್ತ್ರಜ್ಞರಿಗೆ ಮಾತ್ರ ತಿಳಿಯುವುದರಿಂದ, ಈ ವಿಷಯವನ್ನು ಕುರಿತು ರಾಮಾನುಜರು ತಮ್ಮ ಶರಣಾಗತಿ, ಶ್ರೀರಂಗ, ವೈಕುಂಠ ಎಂಬ ಗದ್ಯತ್ರಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ರಾಮಾನುಜರು ತಮಗಿಂತ ಮೊದಲೇ ಪ್ರಚಾರದಲ್ಲಿದ್ದ ಒಂದು ಸಂಪ್ರದಾಯವನ್ನು ಯಾಮುನರ ಅಂತಿಮೇಚ್ಛೆಯಂತೆ ಶಾಸ್ತ್ರ ಅಥವಾ ಸಿದ್ಧಾಂತದ ಮಟ್ಟಕ್ಕೆ ಏರಿಸಿ, ಅದಕ್ಕೆ ಗಣ್ಯವಾದ ಸ್ಥಾನವನ್ನು ಸಂಪಾದಿಸಿ ಕೊಟ್ಟರೇ ಹೊರತು, ಸ್ವತಂತ್ರವಾದ ನೂತನ ಮತವೊಂದನ್ನೇನೂ ಸೃಷ್ಟಿಸಲಿಲ್ಲ. ಸಂಪ್ರದಾಯ ಸಿದ್ಧವಾದ ವಿಷಯಗಳನ್ನೆಲ್ಲ ಸ್ವಬುದ್ಧಿಯಿಂದ ಪರಿಷ್ಕರಿಸಿ ಶಾಸ್ತ್ರ ರೂಪವಾಗಿ ಸ್ಥಾಪಿಸಿದುದಲ್ಲದೆ ಅದರ ರಹಸ್ಯವು ಜನರಿಗೆ ತಿಳಿಯುವಂತೆ ಪ್ರಚಾರ ಮಾಡುವ ಕಾರ್ಯದಲ್ಲಿಯೂ ತುಂಬಾ ಶ್ರದ್ಧೆ, ಉತ್ಸಾಹಗಳನ್ನು ವಹಿಸಿದರು.

ಹೀಗೆ ವೇದ, ಉಪನಿಷತ್ತು, ಸ್ಮೃತಿ, ಪುರಾಣ, ಆಗಮ, ಕಾವ್ಯ, ಇತಿಹಾಸ ದಿವ್ಯಪ್ರಬಂಧಗಳಿಗೆಲ್ಲ ಸಮಾನವಾದ ಪ್ರಾಶಸ್ತ್ಯವನ್ನಿತ್ತು, ಯಾವ ವೇದ ವಾಕ್ಯವನ್ನೂ ಅಮುಖ್ಯವೆಂದು ಕಡೆಗಣಿಸದೆ, ಎಲ್ಲವನ್ನೂ ಮುಖ್ಯವೆಂದೇ ಅಂಗೀಕರಿಸಿ, ಅವುಗಳಲ್ಲಿ ಕಾಣುವ ಭೇದ-ಅಭೇದ ಅಥವಾ ವಿರೋಧೋಕ್ತಿಗಳಿಗೆ ಸುಂದರವಾಗಿ ಹೊಂದಿಕೊಳ್ಳುವ ಅರ್ಥವನ್ನೂ, ಸಮಂಜಸವಾದ ವಿವರಣೆಯನ್ನೂ ನೀಡಿ, ಯಾವುದೇ ವಿಧವಾದ ಸಂದೇಹ, ಅನುಮಾನಗಳಿಗೂ ಎಡೆಯಿಲ್ಲದಂತೆ ಸ್ಥಾಪಿತವಾಗಿರುವ ಈ ಸವಿಶೇಷಾದ್ವೈತ ಅಥವಾ ಸಗುಣ ವಿಶಿಷ್ಟಾದ್ವೈತವು ಅತ್ಯುತ್ತಮವಾಗಿರುವುದರಲ್ಲಿ ಸಂಶಯವಿಲ್ಲ.

ಅಭೇದ ಶ್ರುತಿಗಳಿಂದ ಅದ್ವೈತ ಹುಟ್ಟಿತು, ಭೇದ ಶ್ರುತಿಗಳಿಂದ ದ್ವೈತ ಹುಟ್ಟಿತು. ಭೇದ ಶ್ರುತಿಗೆ ಅದ್ವೈತವೂ, ಅಭೇದ ಶ್ರುತಿಗೆ ದ್ವೈತವೂ ಸಮಾಧಾನ ಹೇಳಲು ಸಮರ್ಥವಾಗಲಿಲ್ಲ. ಆದರೆ ರಾಮಾನುಜರು ಶ್ರುತಿ ವಾಕ್ಯಗಳನ್ನು ಭೇದ, ಅಭೇದ, ಘಟಕ ಎಂದು ಮೂರು ವಿಭಾಗ ಮಾಡಿ ಸಾಮಂಜಸ್ಯ ತಂದರು. ತತ್ತ್ವ

ತ್ರಯವು ಬೇರೆ ಬೇರೆಯಾಗಿರುವುದರಿಂದ ಭೇದವನ್ನು ಒಪ್ಪಿಕೊಂಡಂತಾಯಿತು. ಪ್ರಪಂಚಕ್ಕೂ ಬ್ರಹ್ಮಕ್ಕೂ ಶರೀರಾತ್ಮಭಾವ ಸಂಬಂಧವಿರುವುದರಿಂದಲೂ, ಶರೀರ–ಆತ್ಮ ಎರಡೂ ಒಂದೇ ಎಂದು ಹೇಳುವ ವೈದಿಕ–ಲೌಕಿಕ ರೂಢಿ ಇರುವುದರಿಂದಲೂ, ಅಭೇದವನ್ನು ಒಪ್ಪಿದಂತಾಯಿತು. ಒಂದು ಬಗೆಯಲ್ಲಿ ಭೇದವನ್ನೂ, ಇನ್ನೊಂದು ಬಗೆಯಲ್ಲಿ ಅಭೇದವನ್ನೂ ಹೇಳುವುದರಿಂದ ಭೇದಾ ಭೇದವನ್ನೂ ಒಪ್ಪಿಕೊಂಡಂತಾಯಿತು. ಹೀಗೆ ಸಹಜವಾಗಿ ಅದ್ವೈತಾರ್ಥವನ್ನು ಕೊಡುವ ಶ್ರುತಿವಚನಗಳನ್ನೂ, ಶಬ್ದಾರ್ಥಾನುಸಾರ ದ್ವೈತಾರ್ಥವನ್ನು ಕೊಡುವ ವೇದೋಕ್ತಿಗಳನ್ನೂ ಒಪ್ಪಿಕೊಂಡು, ಈ ದ್ವೈತಾದ್ವೈತ ಶ್ರುತಿ ವಚನಗಳಿಂದ ಅಭಿವ್ಯಕ್ತವಾಗುವ ಪರಬ್ರಹ್ಮ ತತ್ತ್ವವನ್ನು ಉಪನಿಷತ್ತುಗಳಲ್ಲಿ ಉಕ್ತವಾದ ತತ್ತ್ವಗಳೊಂದಿಗೆ ಸಮಂಜಸ, ಸಾಮರಸ್ಯ ಆಗಿರುವಂತೆ ಅರ್ಥವನ್ನು ಪ್ರಕಾಶಗೊಳಿಸಿ, ಪರಸ್ಪರ ವಿರೋಧವೆಂದು ತೋರುವ ವೇದ ಭಾಗವನ್ನು ಘಟಕ ಶ್ರುತಿವಚನಗಳ ಮೂಲಕ ಸಮನ್ವಯಗೊಳಿಸಲಾಗಿದೆ.

ವಿಶಿಷ್ಟಾದ್ವೈತ ದರ್ಶನದಲ್ಲಿಯೂ ಇತರ ದರ್ಶನಗಳಂತೆಯೇ ಪರಬ್ರಹ್ಮನು ಸತ್ಯ, ಪರಿಪೂರ್ಣ, ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿ, ಅನಂತ, ನಿಯಂತೃ, ರಕ್ಷಕ, ಆಧಾರ ಆಗಿದ್ದಾನೆ. ಆದರೆ ಈ ಸಿದ್ಧಾಂತದಲ್ಲಿನ ಪರಬ್ರಹ್ಮನು ಅಂದರೆ ಲಕ್ಷ್ಮಿಯೊಡಗೂಡಿದ ನಾರಾಯಣನು ಸೌಶೀಲ್ಯ, ಸೌಂದರ್ಯ, ಸೌಲಭ್ಯಗಳಿಂದ, ದುರ್ಗುಣ–ನ್ಯೂನತೆಗಳಿಲ್ಲದ ಕಲ್ಯಾಣ ಗುಣಗಳಿಂದ ಕೂಡಿದ ಸಗುಣ ಬ್ರಹ್ಮನೆನಿಸಿದ್ದಾನೆ. ಪರಸ್ಪರ ಭಿನ್ನವಾದ ಜೀವ-ಜಗತ್ತುಗಳೆರಡೂ, ಅವುಗಳಿಂದ ಬೇರೆಯಾಗಿರುವ ಲಕ್ಷ್ಮೀನಾರಾಯಣನ ದೇಹ ಮತ್ತು ಪ್ರಕಾರಗಳು ಹಾಗೂ ಅವನಿಗೆ ಸಂಬಂಧಿಸಿದ ಗುಣಗಳು ಆಗಿವೆ. ಅಂದರೆ ವಿಶಿಷ್ಟನಾದ ಪರಮಾತ್ಮನ ಹಾಗೂ ಪ್ರಕೃತಿ ಪುರುಷರ ಸಂಬಂಧವು ಒಂದನ್ನೊಂದು ಎಡಬಿಡದ ಅಪೃಥಕ್ ಸಂಬಂಧವಾಗಿದೆ.

ಶ್ರೀಮನ್ನಾರಾಯಣನಿಗೆ ತನ್ನ ದೇಹವಾದ ಈ ಪ್ರಪಂಚದ ಪ್ರಾಣಿಗಳ ಬಗ್ಗೆ ಅಸಾಧಾರಣವಾದ ಕರುಣೆ ಪ್ರೀತಿಗಳಿವೆ. ಪರಮಾತ್ಮನು ಶರೀರಿ, ಶೇಷಿ ಆಗಿದ್ದರೆ, ಜೀವ ಜಗತ್ತುಗಳು ಅವನ ಶರೀರ, ಶೇಷ ಆಗಿವೆ. ಜೀವನಿಲ್ಲದ ದೇಹವು ಹೇಗೆ ಬದುಕಲಾರದೋ ಹಾಗೆ ಪರಮಾತ್ಮನಿಲ್ಲದ ಜೀವ ಜಗತ್ತುಗಳು ಬಾಳಲಾರವು. ದೇಹದ ಕಾರ್ಯಗಳೆಲ್ಲ ಜೀವನ ಸುಖ ಸಂತೋಷಗಳಿಗಾಗಿ ಇರುವಂತೆ, ಜೀವಜಗತ್ತುಗಳಿರುವುದೂ ಪರಮಾತ್ಮನ ಸಲುವಾಗಿ. ಪರಮಾತ್ಮನಲ್ಲಿಯೇ ಅಡಗಿದ್ದು, ಅವನ ಸಂಕಲ್ಪವಾದಾಗ ಅವನಿಂದ ಹೊರ ಬಂದು, ಕೊನೆಗೆ ಅವನಲ್ಲೇ ಸೇರುವ, ಈ ಜೀವ ಜಗತ್ತುಗಳು ಮಿಥ್ಯೆ, ಕಲ್ಪಿತ ಆಗಿರದೆ, ಸತ್ಯ ಶಾಶ್ವತ ಆಗಿವೆ.

ತನ್ನ ದೇಹವೆನಿಸಿದ ಈ ಜಗತ್ತಿನ ಸಕಲ ಪ್ರಾಣಿಗಳೂ ಏಕ ದೇಹ ನ್ಯಾಯದಂತೆ ಪರಸ್ಪರ ಅನುಕೂಲವಾಗಿ ಐಕಮತ್ಯದಿಂದ ಇರಬೇಕೆಂಬುದು ಪರಮಾತ್ಮನ ಅಪೇಕ್ಷೆ. ಶರೀರದಲ್ಲಿ ಯಾವುದೇ ಅವಯವಕ್ಕೆ ನೋವು ಉಂಟಾದರೂ ಅದು ಜೀವಾತ್ಮನಿಗೆ

ಅಸಹ್ಯವಾಗುವಂತೆ, ಜಗತ್ತಿನ ಯಾವುದೇ ಪ್ರಾಣಿಗೆ ಅನ್ಯಾಯ, ದ್ರೋಹ ಆದರೂ ಅದು ಪರಮಾತ್ಮನಿಗೆ ಸಹ್ಯವಾಗುವುದಿಲ್ಲ. ಈ ಜಗತ್ತು ಪರಮಾತ್ಮನ ಲೀಲಾ ವಿಭೂತಿ, ಜೀವಿಗಳೆಲ್ಲ ಭಕ್ತರು, ಭಾಗವತರು ಎಂದು ತಿಳಿದು, ಯಾವ ಫಲಾಪೇಕ್ಷೆಯೂ ಇಲ್ಲದೆ ನಿಸ್ವಾರ್ಥ ಮನೋಭಾವದಿಂದ ಸಮಾಜ ಸೇವೆಗೆ ಎಲ್ಲರೂ ತಮ್ಮ ತನುಮನ ಧನಗಳನ್ನು ಒಪ್ಪಿಸಬೇಕು. ಆತ್ಮೋನ್ನತಿ ಅಥವಾ ಶಾಶ್ವತ ಸುಖವನ್ನು ಪಡೆಯಬೇಕಾದರೆ, ಪರಮ ದೇವತೆಯಾದ ಶ್ರೀಮನ್ನಾರಾಯಣನನ್ನು ಅರಿತು ಅವನಲ್ಲಿ ಅಚಲವಾದ ಭಕ್ತಿ ಮತ್ತು ಸಂಪೂರ್ಣ ಶರಣುಭಾವವನ್ನು ಹೊಂದಿರಬೇಕು. ಪರಮ ಪುರುಷಾರ್ಥವಾದ ಪರಿಪೂರ್ಣ ಬ್ರಹ್ಮಾನುಭವ ಅಥವಾ ಮೋಕ್ಷಕ್ಕೆ ಜಾತಿ, ಲಿಂಗ, ಗುಣ, ದೇಶ, ಕಾಲ ಮುಂತಾದುವುಗಳ ಭೇದವಿಲ್ಲದೆ ಎಲ್ಲರೂ ಅರ್ಹರು ಮತ್ತು ಅಧಿಕಾರಿಗಳು.

ಭುವನ ಸುಂದರನಾದ ನಾರಾಯಣನನ್ನು ಮೂರ್ತಿ ಅಥವಾ ಸಾಲಿಗ್ರಾಮ ರೂಪದಲ್ಲಿ ದೇವಾಲಯ–ಮನೆಗಳಲ್ಲಿ ಆರಾಧಿಸಬೇಕು. ಭಗವಂತನ ಆಜ್ಞಾರೂಪವಾದ ವೇದ–ಶಾಸ್ತ್ರಗಳಲ್ಲಿ ಹೇಳಿರುವಂತೆ ನಡೆದುಕೊಳ್ಳಲು ಯತ್ನಿಸಬೇಕು. ವರ್ಣ, ಆಶ್ರಮಗಳಿಗೆ ವಿಹಿತವಾದ ನಿತ್ಯ, ನೈಮಿತ್ತಿಕ, ಐಚ್ಛಿಕ ಕರ್ತವ್ಯ ಕರ್ಮಗಳೆಲ್ಲವನ್ನೂ ಭಗವದಾಜ್ಞೆ, ನಾರಾಯಣ ಪ್ರೀತ್ಯರ್ಥ ಎಂದು ತಿಳಿದು, ಭಗವತ್ಕೈಂಕರ್ಯ ರೂಪದಲ್ಲಿ ಅನುಷ್ಠಿಸಬೇಕು. ಆಗಮ, ಪುರಾಣ, ಮಹಾಕಾವ್ಯ, ದಿವ್ಯಪ್ರಬಂಧ ಎಲ್ಲವೂ ವೇದಗಳಂತೆಯೇ ಪ್ರಮಾಣಗಳು ಎಂದು ನಂಬಬೇಕು.

ಹೀಗೆ ವೈಶಿಷ್ಟ್ಯ, ಶ್ರೇಷ್ಠತೆಗಳಿಂದ ಕೂಡಿದ ವಿಶಿಷ್ಟಾದ್ವೈತವು ತಾರ್ಕಿಕವಾಗಿ, ನೈತಿಕವಾಗಿ, ಧಾರ್ಮಿಕವಾಗಿ ಸ್ಫೂರ್ತಿ ನೀಡಿ ಉನ್ನತಿಗೆ ನೆರವಾಗುವಂತ ಸಿದ್ಧಾಂತ. ಇದರಲ್ಲಿ ಭಾರತೀಯ ತಾತ್ತ್ವಿಕ ಹಾಗೂ ಧಾರ್ಮಿಕ ಆಲೋಚನೆಯು ಸಿದ್ಧಿಯನ್ನು ಗಳಿಸಿದೆ. ಪಾಶ್ಚಾತ್ಯ ವಿದ್ವಾಂಸರ ಸವಾಲು–ಆಹ್ವಾನಗಳಿಗೆ ಸರಿಯಾಗಿ ಉತ್ತರ ನೀಡಿ, ಭಾರತೀಯ ಆದರ್ಶ ಮತ್ತು ಭಾವನೆಗಳನ್ನು ನಿರೂಪಿಸಲು ವಿಶಿಷ್ಟಾದ್ವೈತ ವೇದಾಂತಕ್ಕೆ ಮಾತ್ರ ಸಾಧ್ಯವಾಗುತ್ತದೆ.

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸುವವರ ಮುಖ್ಯ ಆರಾಧ್ಯ ದೈವವಾದ ನಾರಾಯಣ ಅಥವಾ ಮಹಾವಿಷ್ಣುವು ಸರ್ವಕಾಲದಲ್ಲಿಯೂ, ದೈವ ಕೃಪೆಯ ಪ್ರತೀಕವೂ, ಕ್ಷಮಾದೇವಿಯೂ ಆದ ತನ್ನ ಕಾಂತೆಯಾದ ಶ್ರೀ ಮಹಾಲಕ್ಷ್ಮಿಯೊಂದಿಗೆ ಕೂಡಿಯೇ ಜಗದ್ವ್ಯಾಪಾರಗಳನ್ನು ನಡೆಸುತ್ತಾನೆ. ಲಕ್ಷ್ಮೀನಾರಾಯಣ ಎಂಬ ದಿವ್ಯ ದಂಪತಿಗಳು ಒಂದೇ ತತ್ತ್ವ. ಇಬ್ಬರನ್ನೂ ಒಟ್ಟಿಗೇ ಪೂಜಿಸಬೇಕು ಎಂದು ಹೇಳಿದ ಯಾಮುನಾಚಾರ್ಯರ ಆದೇಶದಂತೆ ವಿಷ್ಣು ಭಕ್ತರು ತಮ್ಮನ್ನು ಶ್ರೀ ವೈಷ್ಣವ ಎಂದೂ, ತಮ್ಮದನ್ನು ಶ್ರೀ ವೈಷ್ಣವ ಮತ ಎಂದೂ ಕರೆದುಕೊಳ್ಳ ತೊಡಗಿದರು.

ಹೀಗೆ ವೇದ ವೇದಾಂತ ಪುರಾಣೇತಿಹಾಸಾಗಮ ಬ್ರಹ್ಮಸೂತ್ರಗಳಲ್ಲಿ ಪ್ರತಿ

ಪಾದಿಸಲ್ಪಟ್ಟು, ಅನುಭಾವಿ ಆಳ್ವಾರುಗಳ ದ್ರಾವಿಡ ಪ್ರಬಂಧಗಳಲ್ಲಿ ಅಡಗಿದ್ದ, ಈ ವಿಶಿಷ್ಟಾದ್ವೈತ ಸಂಪ್ರದಾಯವನ್ನು ರಾಮಾನುಜರು ತಮ್ಮ ಗ್ರಂಥಗಳ ಮೂಲಕ ತಾರ್ಕಿಕವಾಗಿ, ಸುವ್ಯವಸ್ಥಿತ ಸಿದ್ಧಾಂತ-ಶಾಸ್ತ್ರರೂಪದಲ್ಲಿ ಕ್ರೋಢೀಕರಿಸಿ, ಸಂಸ್ಕರಿಸಿ, ಪ್ರತಿಪಾದಿಸಿ, ರಕ್ಷಿಸಿದುದಲ್ಲದೆ, ಲೋಕದ ಸಮಸ್ತ ಜನರಿಗೂ ಆತ್ಮೋದ್ಧಾರ ಗಳಿಸಿ ಕೊಡಬೇಕೆಂಬ ಘನ ಉದ್ದೇಶದಿಂದ ಶ್ರೀರಂಗದ ರಂಗನಾಥ ಸ್ವಾಮಿಯಲ್ಲಿ ಶರಣಾಗತಿ ಮಾಡಿ ವರ ಪಡೆದು, ಆಮೇಲೆ ಆಸೇತು ಹಿಮಾಚಲದವರೆಗಿನ ಭಾರತದಲ್ಲೆಲ್ಲ ಸಂಚರಿಸಿ ಪ್ರಚಾರ ಮಾಡಿ, ತಮ್ಮ ನಂತರವೂ ಈ ಸಿದ್ಧಾಂತದ ಪ್ರಚಾರವು ಮುಂದು ವರೆಯಬೇಕೆಂಬ ಉದ್ದೇಶದಿಂದ, 74 ಮಠ ಪೀಠಗಳನ್ನು ಸ್ಥಾಪಿಸಿ, ಅವುಗಳಿಗೆ ಯೋಗ್ಯನಾದ ವಿದ್ವಾಂಸ ಶಿಷ್ಯರನ್ನು ಸಿಂಹಾಸನಾಧಿಪತಿಗಳಾಗಿ ನೇಮಿಸಿದರು. ತತ್ತ್ವ, ಹಿತ, ಪುರುಷಾರ್ಥಗಳ ಸುಂದರ, ಅನುಭವ ಸಿದ್ಧ ವಿವರಣೆಗಳ ಮೂಲಕ ರಾಮಾನುಜರು ಜಗತ್ತಿನ ಎಲ್ಲ ಜೀವಿಗಳ ಉದ್ಧಾರಕ್ಕೆ ಸುಗಮವಾದ ಹೆದ್ದಾರಿಯನ್ನು ನಿರ್ಮಿಸಿ ಕೊಟ್ಟರು. ಈ ಕಾರಣದಿಂದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಎಂಬೆರುಮಾನಾರ್ ದರ್ಶನಂ ಅಥವಾ ರಾಮಾನುಜ ಸಿದ್ಧಾಂತ ಎಂಬ ಹೆಸರೇ ಹೆಚ್ಚಾಗಿ ಬಳಕೆಯಲ್ಲಿದೆ.

ತಮಿಳಿನಲ್ಲಿದ್ದ ದಿವ್ಯ ಪ್ರಬಂಧಗಳ ಬಗೆಯೂ, ವೇದಗಳಂತೆಯೇ ರಾಮಾನುಜರಿಗೆ ಅಪಾರ ಜ್ಞಾನ-ಪ್ರೇಮ, ಗೌರವಗಳು ಇದ್ದರೂ, ಆ ಕಾಲದ ಪದ್ಧತಿಯಂತೆ ಅವರು ಕೇವಲ ಸಂಸ್ಕೃತದಲ್ಲಿರುವ ವೈದಿಕ ಪ್ರಮಾಣಗಳನ್ನೇ ಬಳಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ಪ್ರಚಾರ ಮಾಡಿದರು. ಆದರೂ ದಿವ್ಯ ಪ್ರಬಂಧಗಳಿಗೆ ತಮ್ಮ ಅಂತಃಸ್ಫೂರ್ತಿಯಿಂದ ಅಪೂರ್ವವಾದ ಅರ್ಥವಿವರಣೆಯನ್ನು ನೀಡಿ, ಅವುಗಳಿಗೆ ತಮ್ಮ ಜ್ಞಾನಪುತ್ರ ಹಾಗೂ ಪ್ರಿಯ ಶಿಷ್ಯ ಆಗಿದ್ದ ಪಿಳ್ಳಾನ್‌ರವರಿಂದ ವ್ಯಾಖ್ಯಾನವನ್ನು ಬರೆಸಿ ಅದಕ್ಕೂ ಪರಮ ಮಾನ್ಯತೆ ನೀಡುವಂತೆ ಮಾಡಿದರು. ಶ್ರೀಮನ್ನಾರಾಯಣನೇ ಪರತತ್ತ್ವ, ಅವನ ಪಾದಾರವಿಂದಗಳಲ್ಲಿ ಪ್ರಪತ್ತಿ ಮಾಡುವುದೇ ಪರಮಹಿತ, ಅವನ ಕೈಂಕರ್ಯವೇ ಪರಮ ಪುರುಷಾರ್ಥ, ಎಂಬೀ ಅಭಿಪ್ರಾಯಗಳು ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪ್ರಧಾನವಾಗಿ ಪ್ರತಿಪಾದಿಸಲ್ಪಡಲು ದ್ರಾವಿಡ ಪ್ರಬಂಧದ ವಿಶಿಷ್ಟ ಕೊಡುಗೆಯೇ ಕಾರಣವೆನ್ನಬಹುದು.

ಮಿಕ್ಕ ಸಿದ್ಧಾಂತಗಳಿಗೆ ಪ್ರಸ್ಥಾನತ್ರಯವಿದ್ದರೆ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಪ್ರಸ್ಥಾನ ಚತುಷ್ಟಯವಿದೆ. ಸಂಸ್ಕೃತ ಉಪನಿಷತ್ತು, ತಮಿಳು ಪ್ರಬಂಧ ಎರಡನ್ನೂ ಪ್ರಮಾಣವಾಗಿ ಹೊಂದಿರುವ ವಿಶಿಷ್ಟಾದ್ವೈತವು ಉಭಯ ವೇದಾಂತ ಎನಿಸಿ, ರಾಮಾನುಜರು ಉಭಯ ವೇದಾಂತ ಸಿಂಹಾಸನಾಧಿಪತಿ ಎಂದು ಕರೆಸಿಕೊಂಡರು.

ವಿಶಿಷ್ಟಾದ್ವೈತಿಗಳು ಪರಮ ಪ್ರಾಪ್ಯನಾದ ಬ್ರಹ್ಮ ಸ್ವರೂಪ, ಪರಮಾತ್ಮನಿಗೆ ಶೇಷಭೂತನಾದ ಜೀವನ ಸ್ವರೂಪ, ಪರಮಾತ್ಮ ಪ್ರಾಪ್ತಿಗೆ ಉಪಾಯ ಸ್ವರೂಪ, ಪರಮಾತ್ಮನನ್ನು ಹೊಂದಿ ಅನುಭವಿಸುವ ಫಲದ ಸ್ವರೂಪ, ಪರಮಾತ್ಮನ ಪ್ರಾಪ್ತಿಗೆ

ಪ್ರತಿಬಂಧಕವಾಗಿರುವ ವಿರೋಧ ಸ್ವರೂಪ ಎಂಬೀ ಅರ್ಥಪಂಚಕವನ್ನು ಅರಿತು ಆಚರಿಸುವ ಪೂಜ್ಯರು ; ಅಭಿಗಮನ, ಉಪಾದಾನ, ಇಜ್ಯಾಪೂಜಾ, ಅಧ್ಯಯನ–ಅಧ್ಯಾಪನ, ಯೋಗ ಎಂಬೀ ಪಂಚಕಾಲ ನಿತ್ಯಕರ್ಮವನ್ನು ಮಾಡುವ ವಿಷ್ಣು ಭಕ್ತರು ; ತಾಪ, ಪುಂಡ್ರ, ನಾಮ, ಮಂತ್ರ, ಯಾಗ ಎಂಬೀ ಪಂಚ ಸಂಸ್ಕಾರಗಳನ್ನು ಹೊಂದಿ, ನಾರಾಯಣನ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎಂಬೀ ಪಂಚರೂಪವನ್ನು ನಂಬಿ ಉಪಾಸಿಸುವವರು ; ಆದುದರಿಂದ ಇವರು ತಮ್ಮನ್ನು ಐಯಂಗಾರ್ ಎಂದು ಕರೆದುಕೊಳ್ಳುತ್ತಾರೆ.

ಹೀಗೆ ನಮ್ಮಾಳ್ವಾರರ ಮೂಲಕ ಕಲಿತು, ಮೊಟ್ಟಮೊದಲು ನಾಥಮುನಿಗಳಿಂದ ಪ್ರವರ್ತಿಸಲ್ಪಟ್ಟ ಈ ಸಿದ್ಧಾಂತವನ್ನು ಅವರ ಮೊಮ್ಮಗ ಯಾಮುನ ಮುನಿಗಳು ತಮ್ಮ ಗ್ರಂಥಗಳಿಂದ ಚೆನ್ನಾಗಿ ಬೆಳಸಿ ಬೋಧಿಸಿದರು. ಅದನ್ನು ಚೆನ್ನಾಗಿ ಕಾಪಾಡಿ ಲೋಕದಲ್ಲಿ ಸ್ಥಿರ ಪ್ರತಿಷ್ಠೆ ಮಾಡಿದ ರಾಮಾನುಜರು ದರ್ಶನ ಸ್ಥಾಪನಾಚಾರ್ಯರೆನಿಸಿದರು. ಸಂಸ್ಕೃತ, ತಮಿಳು ಹಾಗೂ ಮಣಿಪ್ರವಾಳಗಳಲ್ಲಿನ ತಮ್ಮ ಅಪಾರ ಗ್ರಂಥಗಳ ಮೂಲಕ ಈ ಸಿದ್ಧಾಂತಕ್ಕೆ ಸ್ಥಿರವಾದ ಸ್ಥಾನ ಸಿಗುವಂತೆ ಶ್ರಮಿಸಿದ ವೇದಾಂತ ದೇಶಿಕರು ದರ್ಶನ ಪ್ರತಿಷ್ಠಾಪನಾಚಾರ್ಯರೆನಿಸಿದರು ಮತ್ತು ವಡಗಲೆ ಪಂಗಡದ ನಾಯಕರೆನಿಸಿದರು. ಹಾಗೆಯೇ ದೇವಾಲಯಗಳ ಜೀರ್ಣೋದ್ಧಾರ ಮತ್ತು ಸ್ಥಾಪನೆ, ಉಪದೇಶ, ಗ್ರಂಥ ನಿರ್ಮಾಣ ಇವುಗಳಿಂದ ತೆಂಗಲೆ ಪಂಗಡದ ನಾಯಕರೆನಿಸಿದ ಮಣವಾಳ ಮಾಮುನಿಗಳೂ ಅಪಾರ ಸೇವೆ ಸಲ್ಲಿಸಿದ್ದಾರೆ.

ಆಳ್ವಾರುಗಳ ದ್ರಾವಿಡ ಪ್ರಬಂಧ ; ಯಾಮುನಾಚಾರ್ಯರ ಸಿದ್ಧಿತ್ರಯ, ಗೀತಾರ್ಥಸಂಗ್ರಹ, ಆಗಮ ಪ್ರಾಮಾಣ್ಯ, ಸ್ತೋತ್ರರತ್ನ, ಚತುಶ್ಲೋಕೀ ; ರಾಮಾನುಜಾಚಾರ್ಯರ ಶ್ರೀಭಾಷ್ಯ, ವೇದಾಂತದೀಪ, ವೇದಾಂತಸಾರ, ವೇದಾರ್ಥ ಸಂಗ್ರಹ, ಗೀತಾಭಾಷ್ಯ, ಗದ್ಯತ್ರಯ, ನಿತ್ಯಗ್ರಂಥ ; ಪರಾಶರ ಭಟ್ಟರ ವಿಷ್ಣು ಸಹಸ್ರನಾಮ ಭಾಷ್ಯ ; ಪಿಳ್ಳಾನ್‌ರವರ ಆರಾಯಿರಪ್ಪಡಿ ; ಸುದರ್ಶನ ಸೂರಿಗಳ ಶ್ರುತ ಪ್ರಕಾಶಿಕೆ ; ಪಿಳ್ಳೈ ಲೋಕಾಚಾರ್ಯರ ಶ್ರೀವಚನ ಭೂಷಣ ; ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರರ ಆಚಾರ್ಯ ಹೃದಯಂ ; ವೇದಾಂತ ದೇಶಿಕರ ತಾತ್ಪರ್ಯ ಚಂದ್ರಿಕೆ, ತತ್ತ್ವಟೀಕೆ, ನ್ಯಾಯ ಸಿದ್ಧಾಂಜನ, ಈಶಾವಾಸ್ಯ ಮತ್ತು ಸ್ತೋತ್ರರತ್ನ ಭಾಷ್ಯ, ಪಾಂಚರಾತ್ರ ಸಚ್ಚರಿತ್ರೆ, ನಿಕ್ಷೇಪರಕ್ಷೆ, ರಸಹ್ಯತ್ರಯ ಸಾರ, ಶತದೂಷಣಿ, ದ್ರಮಿಡೋಪನಿಷದ್ಭಾಷ್ಯ ; ವಡಕ್ಕುತ್ತಿರುವೀಧಿ ಪಿಳ್ಳೈಯವರ ಈಡು ಮುಪ್ಪತ್ತಾರಾಯಿರಪ್ಪಡಿ ; ಪ್ರತಿವಾದಿ ಭಯಂಕರ ಅಣ್ಣನ್‌ರವರ ಚಂಡಮಾರುತ, ರಂಗರಾಮಾನುಜರ ದಶೋಪನಿಷದ್ಭಾಷ್ಯ–ಮುಂತಾದ ಗ್ರಂಥಗಳಲ್ಲಿ ಈ ಸಿದ್ಧಾಂತವು ಚೆನ್ನಾಗಿ ಪ್ರತಿಪಾದಿತವಾಗಿದೆ.

ಮಲಿನವಾಗುತ್ತಿದ್ದ ಭಕ್ತಿ ಪಂಥವನ್ನು ಪುನರುತ್ಥಾನಗೊಳಿಸಿ, ಜ್ಞಾನಿಗಳಿಗೇ ಅಲ್ಲದೆ ಜನ ಸಾಮಾನ್ಯರಿಗೂ ಸಹ ಆಧ್ಯಾತ್ಮವನ್ನು ಸಾಧಿಸಲು ನೆರವು ನೀಡಿದ

ರಾಮಾನುಜ ದರ್ಶನವು ಗುಡಿ ಗೋಪುರಗಳನ್ನು ಕಟ್ಟಿ, ಆಗಮೋಕ್ತ ಪೂಜೆಗಳನ್ನು ಮಾಡಿ, ಪರಮ ಪದವನ್ನು ಹೊಂದಲು ಸ್ಫೂರ್ತಿಯನ್ನು ನೀಡಿತು. ಮುಖ್ಯವಾಗಿ ಭಕ್ತಿ ಪಂಥವಾದ ಈ ದರ್ಶನದಲ್ಲಿ ಅಪಾರವಾದ ಉತ್ಕೃಷ್ಟ, ಸ್ತೋತ್ರ ಸಾಹಿತ್ಯವು ಬೆಳೆದು ಬಂದಿದೆ. ಆಳ್ವಾರುಗಳು, ಯಾಮುನ, ರಾಮಾನುಜ, ಕೂರೇಶ, ಪರಾಶಭಟ್ಟ, ವೇದಾಂತದೇಶಿಕ, ಮಣವಾಳ ಮಾಮುನಿ, ಮುಂತಾದ ಆಚಾರ್ಯರುಗಳು ಈ ಸಿದ್ಧಾಂತದ ಸಾರಸರ್ವಸ್ವವನ್ನೂ ತಮ್ಮ ಸ್ತೋತ್ರಗಳಲ್ಲಿ ಭಟ್ಟಿ ಇಳಿಸಿ ಭಗವಂತನ ಅನುಗ್ರಹವನ್ನು ಪಡೆದುಕೊಳ್ಳಲು ಅನುಕೂಲ ಮಾಡಿ ಕೊಟ್ಟಿದ್ದಾರೆ.

# ರಾಮಾನುಜರ ವಿಶಿಷ್ಟಾದ್ವೈತ ವೇದಾಂತ

ವಿಶಿಷ್ಟಾದ್ವೈತ ವೇದಾಂತ ಅಥವಾ ಶ್ರೀ ವೈಷ್ಣವ ಮತದಲ್ಲಿ ಪ್ರಮೇಯ (ಜ್ಞಾನದ ವಸ್ತು) ಮತ್ತು ಪ್ರಮಾಣ (ಜ್ಞಾನದ ಸಾಧನ) ಎಂಬ ಎರಡು ವಿಭಾಗ ಗಳಿವೆ.

## ಎ. ಪ್ರಮೇಯ

ಪ್ರಮೇಯದಲ್ಲಿ ತತ್ತ್ವ, ಹಿತ, ಪುರುಷಾರ್ಥಗಳೆಂಬುದಾಗಿ ಮೂರು ವಿಧ. ದರ್ಶನದಲ್ಲಿ ತಿಳಿದುಕೊಳ್ಳಬೇಕಾದ ವಸ್ತುವೇ ತತ್ತ್ವ ; ತಿಳಿದುಕೊಂಡು ಹೊಂದ ಬೇಕಾದ ಫಲ ಅಂದರೆ ಎಂದೆಂದಿಗೂ ಅಳಿವು ಇಲ್ಲದ ಪ್ರಯೋಜನವೇ ಪುರುಷಾರ್ಥ ; ಈ ಫಲವನ್ನು ಪಡೆಯಲು ಅನುಷ್ಠಿಸಬೇಕಾದ ಉಪಾಯ ಅಂದರೆ ಅನುಸರಿಸಬೇಕಾದ ಮಾರ್ಗವೇ ಹಿತ ಅಥವಾ ಸಾಧನ.

### 1. ತತ್ತ್ವ

ತತ್ತ್ವದಲ್ಲಿ ಅಚಿತ್, ಚಿತ್, ಈಶ್ವರ ಎಂದು ಮೂರು ಉಂಟು.

### 1) ಅಚಿತ್

ಜ್ಞಾನವೆಂಬ ಗುಣ ಇಲ್ಲದಿರುವ, ಅಂದರೆ ತನ್ನನ್ನು ತಾನೇ ತಿಳಿಯುವ ಶಕ್ತಿ ಇಲ್ಲದ, ಸರ್ವದಾ ವಿಕಾರ ಹೊಂದುತ್ತಿರುವ ಅಂದರೆ ಬೇರೆ ಬೇರೆ ಅವಸ್ಥೆಗಳನ್ನು ಪಡೆಯುತ್ತಿರುವ, ಅಚಿತ್ ಅಥವಾ ಚೈತನ್ಯವಿಲ್ಲದುದು ತ್ರಿಗುಣ, ಕಾಲ, ಶುದ್ಧ ಸತ್ವ ಎಂದು ಮೂರುವಿಧ.

(i) ಈ ಜಗತ್ತಾಗಿ ಪರಿಣಮಿಸುವ ತ್ರಿಗುಣ ಅಥವಾ ಪ್ರಕೃತಿಯು ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೂ ಸೇರಿರುವ 24 ತತ್ತ್ವಗಳಿಂದಾಗಿದೆ. ಕಾರ್ಯಕಾರಣ ರೂಪದಿಂದ, ಉತ್ತರೋತ್ತರಾವಸ್ಥಾ ಭೇದಗಳಿಂದ ಪ್ರಕೃತಿಯು 24 ತತ್ತ್ವಗಳಾಗಿ ಪರಿಣಮಿಸುತ್ತದೆ ಎನ್ನಬಹುದು. ಇದು ಮೇಲೆ, ಕೆಳಗೆ, ಸುತ್ತಲೂ, ಎಂಟುದಿಕ್ಕುಗಳಲ್ಲೂ ವ್ಯಾಪಿಸಿಕೊಂಡಿದೆ. ಮೂಲ ಪ್ರಕೃತಿ ; ಮಹತ್ ; ಅಹಂಕಾರ ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು ;

ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ ಎಂಬ ಐದು ಜ್ಞಾನೇಂದ್ರಿಯಗಳು ; ಮನಸ್ಸು ಎಂಬ ಅಂತರಿಂದ್ರಿಯ : ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ತನ್ಮಾತ್ರೆಗಳು : ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಐದು ಮಹಾಭೂತಗಳು–ಇವು ಪ್ರಕೃತಿಯ 24 ತತ್ತ್ವಗಳು. ಪ್ರಕೃತಿಯೇ ಮೊದಲಾಗಿ, ಪೃಥ್ವಿ ಕೊನೆಯದಾದ ಈ 24 ಅಚಿತ್ ತತ್ತ್ವಗಳಲ್ಲಿ ಹಿಂದಿನ ತತ್ತ್ವಗಳಿಂದ ಮುಂದಿನ ತತ್ತ್ವಗಳು ಹುಟ್ಟುತ್ತವೆ.

(ii) ಕಾಲವು ಕ್ಷಣ, ಮುಹೂರ್ತ, ಹಗಲು, ರಾತ್ರಿ, ದಿನ, ವಾರ, ಪಕ್ಷ, ಮಾಸ, ಋತು, ಅಯನ, ಸಂವತ್ಸರ, ಯುಗ, ಮನ್ವಂತರ, ಪರಾರ್ಧ ಆದಿ ವಿಭಾಗವುಳ್ಳದ್ದು ಆಗಿ, ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಸಹಾಯಕ ಕಾರಣವಾಗಿ ಎಲ್ಲವನ್ನೂ ಆವರಿಸಿಕೊಂಡಿದೆ.

(iii) ರಜಸ್ಸು, ತಮಸ್ಸು ಇಲ್ಲದಿರುವ, ಸ್ವಯಂ ಪ್ರಕಾಶವುಳ್ಳ, ಸುಖ ಆನಂದ ಮಯ ಆಗಿರುವ, ಶುದ್ಧ ಸತ್ತ್ವವು ಮುಕ್ತ, ನಿತ್ಯ, ಪರಮಾತ್ಮ ಇವರ ಶರೀರ ಮತ್ತು ಪರಮ ಪದ ಎಂಬ ವೈಕುಂಠಲೋಕ, ಆಗಿದೆ. ಇದೇ ಪಂಚೋಪನಿಷನ್ಮಯಃ ಪಂಚಶಕ್ತಿಮಯ ಎನಿಸಿಕೊಂಡಿದೆ.

## 2) ಚಿತ್

ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿಗಳಿಗಿಂತ ಬೇರೆ, ವಿಲಕ್ಷಣ ಆಗಿರುವ ಚಿತ್ ಅಥವಾ ಚೇತನನು ನಿತ್ಯ, ಅಜಡ, ಆನಂದರೂಪಿ, ಅಣುಸ್ವರೂಪಿ, ಅವ್ಯಕ್ತ, ನಿರವಯವ, ನಿರ್ವಿಕಾರ, ಜ್ಞಾನಾಶ್ರಯ, ಕರ್ತಾ, ಭೋಕ್ತಾ, ಜ್ಞಾನ ಸ್ವರೂಪಿ, ಈಶ್ವರ ನಿಯಾಮ್ಯ, ಈಶ್ವರಶೇಷ ಆಗಿ ಅಸಂಖ್ಯಾತನಾಗಿದ್ದಾನೆ. ಈ ಸ್ವಯಂ ಪ್ರಕಾಶಿಸುವ ಗುಣವುಳ್ಳ ಜೀವಾತ್ಮರಲ್ಲಿ ಬದ್ಧ, ಕೇವಲ, ಮುಮುಕ್ಷು, ಮುಕ್ತ, ನಿತ್ಯ ಎಂದು ಐದು ವಿಧ.

(i) ಅನಾದಿ ಕಾಲದಿಂದಲೂ ಕರ್ಮದ ನಿಯಮಗಳಿಗೆ ಒಳಪಟ್ಟು, ಕೆಟ್ಟ ಮತ್ತು ಒಳ್ಳೆಯ ಕರ್ಮಗಳ ಫಲವನ್ನು ಅನುಭವಿಸುವ ಸಲುವಾಗಿಯೇ ಈ ಜಗತ್ತಿನಲ್ಲಿ ಸುರ, ನರ, ಪ್ರಾಣಿ, ಸಸ್ಯಗಳ ರೂಪದಲ್ಲಿ ಹುಟ್ಟುತ್ತ ಇರುವವರು ಬದ್ಧ ಸಂಸಾರಿಗಳು.

(ii) ಸಂಸಾರದಲ್ಲಿ ಉಪೇಕ್ಷೆ, ಜಿಗುಪ್ಸೆ ಹೊಂದಿ, ಆತ್ಮಾನುಭವದಲ್ಲಿ ತೃಪ್ತರಾಗಿರುವವರು ಕೇವಲರು.

(iii) ಮೋಕ್ಷ ಪಡೆಯಬೇಕೆಂಬ ಇಚ್ಛೆಯುಳ್ಳವರು ಮುಮುಕ್ಷುಗಳು.

(iv) ಒಮ್ಮೆ ಬದ್ಧ ಜೀವಿಗಳಾಗಿದ್ದು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳೆಂಬ ಸಾಧನಗಳ ಮೂಲಕ, ಭಗವಂತನ ಅನುಗ್ರಹದಿಂದ, ಹುಟ್ಟು-ಸಾವುಗಳ ಸಂಸಾರ

ಚಕ್ರದಿಂದ ಬಿಡುಗಡೆ ಹೊಂದಿ, ವೈಕುಂಠ ಲೋಕದಲ್ಲಿ ನಿತ್ಯಸೂರಿಗಳೊಂದಿಗೆ ಪರಮಾತ್ಮನೊಡನೆ ಆನಂದಾನುಭವದಲ್ಲಿ ಇರುವವರು ಮುಕ್ತರು.

(v) ಪುಣ್ಯ ಪಾಪ ರೂಪವಾದ, ಕರ್ಮದ ಸೋಂಕೇ ಇಲ್ಲದೆ ಸಂಸಾರ ಬಂಧನಕ್ಕೆ ಒಳಗಾಗದ, ಭಗವಂತನ ಬಳಿ ಅವನ ಕೈಂಕರ್ಯವನ್ನು ಮಾಡುತ್ತಾ ಆನಂದದಿಂದ ಇರುವವರು ನಿತ್ಯರು.

24 ಪ್ರಕೃತಿ ತತ್ತ್ವಗಳಿಂದ ಕೂಡಿರುವ ಜೀವನು 25ನೆಯ ತತ್ತ್ವ.

### 3) ಈಶ್ವರ

26 ನೆಯ ತತ್ತ್ವವೆನಿಸಿದ ಈಶ್ವರನೇ ಪರಬ್ರಹ್ಮ. ಯಾವ ಹೇಯ ಗುಣಗಳೂ ಇಲ್ಲದ, ಸಕಲ ಕಲ್ಯಾಣ ಗುಣಗಳನ್ನು ಹೊಂದಿರುವ, ಲಕ್ಷ್ಮೀ ಸಮೇತನಾದ ನಾರಾಯಣನು, ಚಿತ್ ಅಚಿತ್ ಎಂಬ ಎರಡೂ ತತ್ತ್ವಗಳನ್ನು ತನಗೆ ವಿಶೇಷಣ, ಶರೀರವನ್ನಾಗಿ ಹೊಂದಿದ್ದು, ಅವುಗಳಿಗೆ ಆಧಾರ, ಸ್ವಾಮಿ ಆಗಿ, ಎಲ್ಲ ದೇಶ ಕಾಲಗಳಲ್ಲೂ, ಎಲ್ಲ ಚೇತನ-ಅಚೇತನಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು, ಸೃಷ್ಟಿ ಸ್ಥಿತಿ ಸಂಹಾರವೆಂಬ ಜಗದ್ವ್ಯಾಪಾರಗಳನ್ನು ನಡೆಸುತ್ತಾನೆ. ಆದರೂ ಅವನಿಗೆ ಯಾವ ಗುಣ ದೋಷಗಳೂ ಅಂಟುವುದಿಲ್ಲ. ಸರ್ವಜ್ಞ, ಸರ್ವವ್ಯಾಪಿ, ಸರ್ವಶಕ್ತ, ಸರ್ವರಕ್ಷಕ, ಸತ್ಯಜ್ಞಾನ ಆನಂದ ಅನಂತಕಲ್ಯಾಣ ಗುಣಾಕರ ಆದ ಅವನೇ ಜಗತ್ತಿನ ಉಪಾದಾನ ಹಾಗೂ ನಿಮಿತ್ತಕಾರಣನಾಗಿದ್ದಾನೆ. ವಿವಿಧ ರೀತಿಯ ಜನರ ಆಸೆಯನ್ನು ಪೂರೈಸುವ ಸಲುವಾಗಿ ಅವನಿಗೆ ಪರ, ವ್ಯೂಹ, ವಿಭವ, ಹಾರ್ದ, ಅರ್ಚಾ ಎಂಬ ಐದು ರೂಪಗಳುಂಟು. ಮೊದಲಿನ ನಾಲ್ಕು ರೂಪಗಳು ಎಲ್ಲರಿಗೂ ಕಾಣಿಸದಿದ್ದರೂ, ಮನೆ–ದೇವಾಲಯಗಳಲ್ಲಿರುವ ಅರ್ಚಾರೂಪವನ್ನು ಸೇವಿಸಿ, ಎಲ್ಲರೂ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಸಾಧ್ಯವಿದೆ.

## 2. ಹಿತ

ಜೀವನದಲ್ಲಿ ತತ್ತ್ವದ ಸರಿಯಾದ ತಿಳಿವಳಿಕೆ ಉಂಟಾಗುವ ದಿವ್ಯವಾದ ಆನಂದಾನುಭವವನ್ನು ಪಡೆಯಬೇಕೆಂಬ ಆಸೆ ಹುಟ್ಟಿದಾಗ ಅಂದರೆ ಪುರುಷಾರ್ಥವು ಲಭಿಸಲು ಸಹಾಯ ಮಾಡುವ ಉಪಾಯವನ್ನು ಜೀವನು ಹುಡುಕುತ್ತಾನೆ. ಇದಕ್ಕೆ ಭಕ್ತಿಯೋಗವೇ ಸರಿಯಾದ ಸಾಧನವಾದರೂ, ಕರ್ಮ ಜ್ಞಾನಗಳ ನಂತರವೇ ಭಕ್ತಿ ಮಾಡುವುದು ಒಳ್ಳೆಯದು.

1) ತಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ನಾನು, ನನ್ನದು ಎಂಬ ಅಹಂಕಾರ ಮಮಕಾರಗಳಿಲ್ಲದೆ, ಫಲಾಪೇಕ್ಷೆ ಇಲ್ಲದೆ, ಮಾಡುವುದು ಕರ್ಮಯೋಗ.

2) ಕರ್ಮದಿಂದ ಸುಪ್ರೀತನಾದ ಭಗವಂತನು ಜೀವಿಗೆ ಇಂದ್ರಿಯ ನಿಗ್ರಹ

ಶಕ್ತಿಯನ್ನು ಕರುಣಿಸಿದಾಗ, ಜೀವಿಯು ತನ್ನ ಆತ್ಮದ ಅರಿವಿಗಾಗಿ ಅಂದರೆ ಆತ್ಮಾವಲೋಕನದಲ್ಲಿ ತೊಡಗುವುದು ಜ್ಞಾನಯೋಗ.

3) ಇದು ಸಾಧಿಸಿದ ನಂತರ ಜೀವಾತ್ಮನು ಭಗವಂತನಲ್ಲಿ ಶ್ರದ್ಧೆ ಪ್ರೀತಿಗಳಿಂದ ಕೂಡಿದ್ದು, ಪರಮಾತ್ಮನಲ್ಲದ ಇತರ ವಸ್ತು-ವಿಷಯ-ವ್ಯಕ್ತಿಗಳಲ್ಲಿ ತನ್ನ ಮನಸ್ಸನ್ನು ಹರಿಸದೆ, ಭಗವಂತನನ್ನು ಏಕಾಗ್ರಚಿತ್ತದಿಂದ ನಿರಂತರವಾಗಿ ಧ್ಯಾನಿಸುವುದು ಭಕ್ತಿಯೋಗ. ಈ ಪರಭಕ್ತಿಯು, ಪರಜ್ಞಾನ, ಪರಮ ಭಕ್ತಿಗಳನ್ನು ಉಂಟುಮಾಡುತ್ತದೆ.

4) ಅತಿ ಕಷ್ಟವಾದ ಜ್ಞಾನಯೋಗ, ಅತಿ ಸುಲಭವಲ್ಲದ ಭಕ್ತಿಯೋಗ ಇವು ಕೆಲವರಿಗೆ ಮಾತ್ರ ಸಾಧ್ಯ. ಜ್ಞಾನ, ಶಕ್ತಿ, ಉಚ್ಚಕುಲದಲ್ಲಿ ಜನ್ಮ, ಇವು ಇಲ್ಲದವರಿಗಾಗಿ, ಭಕ್ತಿಮಾಡಲು ಆಗದವರಿಗಾಗಿ, ಪ್ರಪತ್ತಿಯೋಗವು ಹೇಳಲ್ಪಟ್ಟಿದೆ. ಭಗವಂತನಿಗೆ ಅನುಕೂಲನಾಗಿ ನಡೆದುಕೊಳ್ಳುವ ಸಂಕಲ್ಪಮಾಡುವುದು, ಅವನಿಗೆ ಪ್ರತಿಕೂಲನಾಗದೆ ಅವನ ಆಜ್ಞೆಗಳಿಗೆ ವಿರೋಧವಾಗಿ ನಡೆದುಕೊಳ್ಳದಿರುವುದು, ಬೇರೆ ಆಶ್ರಯ-ಶಕ್ತಿ-ಸಾಧನಗಳು ಇಲ್ಲದಿರುವುದು, ಅವನೊಬ್ಬನೇ ತನಗೆ ಉಪಾಯವೆಂಬ ನಂಬಿಕೆಯಿಂದ ಅವನಲ್ಲಿ ಮಹಾ ವಿಶ್ವಾಸ ಹೊಂದಿರುವುದು, ತನ್ನ ಉದ್ಧಾರ-ರಕ್ಷಣೆಗಳಿಗಾಗಿ ಅವನಲ್ಲಿ ಮೊರೆಯಿಡುವುದು-ಈ ಐದು ಅಂಶಗಳು ಪ್ರಪತ್ತಿಯೋಗವನ್ನು ಅನುಸರಿಸುವವರಲ್ಲಿ ಇರಬೇಕಾಗುತ್ತದೆ.

5) ದೈವಸಾಕ್ಷಾತ್ಕಾರಕ್ಕಾಗಿ ನಡೆಯುವ ಮನುಷ್ಯ ಪ್ರಯತ್ನದಲ್ಲಿ ಆಚಾರ್ಯನ ಅನುಗ್ರಹ ಜೀವಿಯ ಮೇಲೆ ಆದರೆ ಇನ್ನೂ ಉತ್ತಮ.

ಪ್ರಪತ್ತಿಯನ್ನು ಮಾಡಿದ ನಂತರ ತಾನು ಮಾಡುವ ಕೆಲಸಗಳೆಲ್ಲವೂ ಭಗವಂತನ ಕೈಂಕರ್ಯವೆಂದೇ ತಿಳಿದು, ಕರ್ತೃತ್ವವನ್ನು ಬಿಟ್ಟು, ನಿಷ್ಕಾಮ ಭಾವನೆಯಿಂದ ಮಾಡುತ್ತ ಬಂದರೆ, ಭಗವಂತನ ಅನುಗ್ರಹದಿಂದ ಸುಖ ಶಾಂತಿ ಸಮಾಧಾನಗಳು ದೊರಕಿ, ಇಹದಲ್ಲಿಯೂ ಮೋಕ್ಷ ಸದೃಶ ಜೀವನವನ್ನು ನಡೆಸಬಹುದು.

## 3. ಪುರುಷಾರ್ಥ

ಪುರುಷರಿಂದ ಅಪೇಕ್ಷಿಸಲ್ಪಡತಕ್ಕವು ಅಥವಾ ಅವರಿಗೆ ಪ್ರಯೋಜನವಾಗುವಂಥವು ಪುರುಷಾರ್ಥ, ಇವು ನಾಲ್ಕು.

1) ಪ್ರಾಣಿಗಳ ರಕ್ಷಣಾರ್ಥವಾಗಿ ಮಾಡುವ ಶಾಸ್ತ್ರೀಯ ಕಾರ್ಯಗಳು ಧರ್ಮ.

2) ವರ್ಣಾಶ್ರಮಗಳಿಗೆ ಉಚಿತವಾಗಿದ್ದು, ಧರ್ಮಕ್ಕೆ ಕುಂದು ಬರದಂತೆ ಸಂಗ್ರಹಿಸಿದ ಧನ ಧಾನ್ಯ ಮುಂತಾದುವು ಅರ್ಥ.

3) ಧನಧಾನ್ಯ, ವಸ್ತುಭೂಷಣ, ಪುತ್ರ ಮಿತ್ರಕಳತ್ರ, ಪಶುಗೃಹಕ್ಷೇತ್ರ, ಚಂದನ ಕುಸುಮ ತಾಂಬೂಲ ಮುಂತಾದ ಪದಾರ್ಥಗಳಲ್ಲಿ ವಿಷಯಾನುಭವದಿಂದ

ಉಂಟಾಗುವುದು ಐಹಿಕ ಕಾಮ ; ಸ್ವರ್ಗಾದಿ ಲೋಕಗಳಲ್ಲಿ ಹಸಿವು, ಬಾಯಾರಿಕೆ, ಮೋಹ, ಶೋಕ, ಮುಪ್ಪು, ಮರಣಗಳಿಲ್ಲದೆ ವಿಷಯಾನುಭವದಿಂದ ಸುಖ ಪಡುವುದು ಪಾರಲೌಕಿಕಕಾಮ. ಹೀಗೆ ಕಾಮದಲ್ಲಿ ಎರಡು ವಿಧ.

4) ಭಗವಂತನ ಆಶ್ರಯಣ ಬಲದಿಂದ ಪುಣ್ಯ ಪಾಪಗಳು ಕಳೆದ ನಂತರ ಸ್ಥೂಲ ಶರೀರವನ್ನು ತ್ಯಜಿಸಿ, ಸೂಕ್ಷ್ಮ ಶರೀರದಿಂದ ಅರ್ಚಿರಾದಿ ಮಾರ್ಗದಲ್ಲಿ ಹೋಗಿ, ವಿರಜಾ ನದಿಯಲ್ಲಿ ಸ್ನಾನಮಾಡಿ ಸೂಕ್ಷ್ಮ ಶರೀರವನ್ನು ನೀಗಿ, ಶ್ರೀ ಭೂನೀಳಾ ಸಮೇತವಾಗಿ ದಿವ್ಯ ಮಂಟಪದಲ್ಲಿ ದಿವ್ಯ ಸಿಂಹಾಸನದಲ್ಲಿ ಆದಿಶೇಷನ ಮೇಲೆ ಕುಳಿತಿರುವ ಶ್ರೀಮನ್ನಾರಾಯಣನನ್ನು ಅನುಭವಿಸುತ್ತ ನಿತ್ಯ ಕೈಂಕರ್ಯದಿಂದ ನಿತ್ಯಾನಂದವನ್ನು ಪಡೆಯುವುದು ಮೋಕ್ಷ.

ಮುಖ್ಯವಾಗಿ ಶ್ರೀ ವೈಕುಂಠಲೋಕದಲ್ಲಿ ಸದಾ ಭಗವಂತನ ಕೈಂಕರ್ಯ ಪೂರ್ಣ ಆನಂದಾನುಭವ ಸಿಗುವುದೇ ಪರಮ ಪುರುಷಾರ್ಥ. ಪ್ರಪತ್ತಿ ಮಾಡಿದವನಿಗೆ ಇದರ ಸವಿ ಇಹಲೋಕದಲ್ಲಿಯೂ ಸಿಗುತ್ತದೆ. ಕಾಲಬಂದಾಗ ಭಗವಂತನು ಜೀವಾತ್ಮನನ್ನು ಇಹಲೋಕದ ಪಾಂಚಭೌತಿಕವಾದ ಶರೀರದಿಂದ ಬಿಡಿಸಿ, ಪ್ರಕಾಶಮಾನವಾದ ಅರ್ಚಿರಾದಿ ಮಾರ್ಗದಲ್ಲಿ ವೈಕುಂಠಕ್ಕೆ ಕರೆಸಿಕೊಳ್ಳಲು ಏರ್ಪಾಡು ಮಾಡುತ್ತಾನೆ.

## ಬಿ. ಪ್ರಮಾಣ

ಯಥಾರ್ಥವಾದ ಜ್ಞಾನಾನುಭವವನ್ನು ಮಾಡಿಕೊಡುವುದು ಪ್ರಮಾಣವೆನಿಸುತ್ತದೆ. ಜ್ಞಾನ ಸಾಧನಗಳಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ ಎಂದು ಮೂರುವಿಧ.

1) ನಮ್ಮ ಇಂದ್ರಿಯಗಳಿಗೂ ಪದಾರ್ಥಗಳಿಗೂ ಸಂಬಂಧವುಂಟಾಗಿ ಸನ್ನಿಕರ್ಷದಿಂದ ಮನಸ್ಸಿನ ಮೂಲಕ ಆತ್ಮನಿಗೆ ಸಾಕ್ಷಾತ್ತಾಗಿ ಗೋಚರವಾಗುವುದೇ ಪ್ರತ್ಯಕ್ಷ ಅನುಭವ. ಇದಕ್ಕೆ ಸಾಧನವಾದ ಇಂದ್ರಿಯಗಳು ಪ್ರತಕ್ಷ ಪ್ರಮಾಣ. ಮುಖ್ಯವಾಗಿ ಪ್ರತ್ಯಕ್ಷಾನುಭವಕ್ಕೆ ಪದಾರ್ಥ, ಪಂಚೇಂದ್ರಿಯ, ಮನಸ್ಸು, ಆತ್ಮ ಎಲ್ಲವೂ ಕಾರ್ಯಗತವಾಗಿದ್ದು ಸಹಕರಿಸಬೇಕು.

2) ಸಾಹಚರ್ಯ ನಿಯಮವೆಂಬ ವ್ಯಾಪ್ತಿ ಜ್ಞಾನವೇ ಅನುಮಾನ ಪ್ರಮಾಣ. ಪರಾಮರ್ಶ ಜ್ಞಾನವೇ ವ್ಯಾಪಾರ. ಎರಡು ವಸ್ತುಗಳು ಒಂದನ್ನೊಂದು ಎಡಬಿಡದೆ ಜೊತೆ ಜೊತೆಯಲ್ಲಿಯೇ ಇರುವುದನ್ನು ಕಂಡಿದ್ದು, ಆವೆರಡರಲ್ಲಿ ಒಂದು ವಸ್ತುವನ್ನು ಕಂಡಾಗ, ಇನ್ನೊಂದು ವಸ್ತುವೂ ಅಲ್ಲಿ ಇರಲೇಬೇಕು ಎಂದು ನಿರ್ಣಯಿಸುವುದು ಅನುಮಾನ. ಇದರಲ್ಲಿ ಪ್ರತಿಜ್ಞಾ, ಹೇತು, ಉದಾಹರಣೆ, ಉಪನಯ, ನಿಗಮನ ಎಂಬ ಐದು ಮೆಟ್ಟಿಲುಗಳುಂಟು.

3) ಇದ್ದುದನ್ನು ಇದ್ದಂತೆ ತಿಳಿದು ಹೇಳುವ ಆಪ್ತವಾಕ್ಯವೇ ಶಬ್ದ ಪ್ರಮಾಣ. ಪದ ಜ್ಞಾನವೇ ಕರಣ, ಪದಾರ್ಥ ಜ್ಞಾನವೇ ದ್ವಾರ, ಶಬ್ದ ಬೋಧವೇ ಫಲ.

ವೇದ, ಸ್ಮೃತಿ, ಆಗಮ, ಪುರಾಣ, ಇತಿಹಾಸ, ದಿವ್ಯ ಪ್ರಬಂಧ ಇವೆಲ್ಲ ಶಬ್ದ ಪ್ರಮಾಣದಲ್ಲಿ ಸೇರಿವೆ.

ಮುಖ್ಯವಾಗಿ ವಿವಿಧ ವಸ್ತು ವಿಷಯ ವ್ಯಕ್ತಿಗಳ ಸಂಪರ್ಕವು ಇಂದ್ರಿಯಗಳ ಮೂಲಕ ಆದಾಗ, ಸರಿಯಾಗಿ ತರ್ಕ ಅಥವಾ ವಿಚಾರ ಮಾಡಿದಾಗ, ವೇದ ಉಪನಿಷತ್ತು ಪುರಾಣ ಆಗಮ ಇತಿಹಾಸ ದಿವ್ಯಪ್ರಬಂಧ ಮುಂತಾದುದನ್ನು ಸರಿಯಾಗಿ ಅಧ್ಯಯನ ಮಾಡಿದಾಗ, ಜ್ಞಾನ ಅಥವಾ ತಿಳಿವಳಿಕೆ ಉಂಟಾಗುತ್ತದೆ. ಈ ಮೂರೂ ಪ್ರಮಾಣಗಳಿಂದ ಪಡೆದ ಜ್ಞಾನವು ಜೀವಿಯು ಉತ್ತಮ ಜೀವನವನ್ನು ನಡೆಸಲು ಹಾಗೂ ಭಗವಂತನ ಅನುಗ್ರಹ–ಅನುಭವಗಳನ್ನು ಪಡೆಯಲು ಸಹಾಯ ಮಾಡುತ್ತದೆ.

೧೧

# ರಾಮಾನುಜ ಸಿದ್ಧಾಂತ ಸಾರ

ಆಸ್ಯೋಚಿತಾಂ ಪರಮ ವೈದಿಕ ದರ್ಶನಸ್ಯ
ರಾಮಾನುಜಾರ್ಯ ರಚಿತೋಽಪಕೃತಿಂ ಕೃತಜ್ಞಃ ।
ರಂಗೇಶ್ವರಃ ಪ್ರಕಟಯನ್ಪ್ರಥಯಾ ಬಭೂವ
ರಾಮಾನುಜಸ್ಯ ಮತಮಿತ್ಯಭಿದಾನಮಸ್ಯ ॥

ಮಾರ್ಗೇರಾಮಾನುಜೀಯೇ ಸಕಲಚಿದಚಿದಶ್ಚಾಂಶ ಶೇಷಾಃ ಶರೀರಂ
ಶೇಷೀ ನಾರಾಯಣಸ್ಯಾನ್ನಿರವಧಿ ಗುಣಯುಗ್ಬ್ರಹ್ಮ ಲಕ್ಷ್ಮೀ ವಿಶಿಷ್ಟಃ ।
ಜೀವಾ ಬ್ರಹ್ಮಾಂಶ ಭೂತಾಃ ಪರಮ ಸಮತಯಾ ದಿವ್ಯ ವೈಕುಂತ ಲೋಕೇ
ಮುಕ್ತಿರ್ಭಕ್ತ್ಯಾಪ್ರಪತ್ಯಾ ಭವತಿಚನಿಯತಂ ಜ್ಞಾನ ಕರ್ಮೋಽಭಯೇನ ॥

ಸರ್ವೇವೇದಾಃ ಪ್ರಮಾಣಂ ತ್ರಿತಯ ಮನುಗುಣಂ ಸಾತ್ವಿಕಂ ಸಾರ ಶಾಸ್ತ್ರಂ
ಶ್ರೀಮನ್ನಾರಾಯಣಾಖ್ಯಂ ಚಿದಚಿದನುಗತಂ ಸದ್ಗುಣಶ್ಚೇಷಿತತ್ತ್ವಮ್ ।
ಭಕ್ತಿರ್ಮುಕ್ತೇರುಪಾಯಃ ಪ್ರಪದನಮಪಿ ತತ್ಸರ್ವ ಸತ್ತ್ವಾಧಿಕಾರ್ಯಂ
ಮುಕ್ತಿ ರ್ಲೋಕೇಪರಸ್ಮಿನ್ ಪರಭಜನಮಿತಿ ಶ್ರೀಮತಂ ವೈಷ್ಣವಾನಾಮ್ ॥

ಶ್ರೀಮಲ್ಲಕ್ಷ್ಮಣ ಯೋಗಿನಸ್ತುಭುವನಂ ಸತ್ಯಂ ತದೀಶ ಶ್ರಿಯಃ—
ಕಾಂತೋ ಬ್ರಹ್ಮ ಸಏವ ಸೋಽಖಿಲತನುಃ ಭಿನ್ನಾಸ್ತುತಶ್ಚೇತನಾಃ ।
ಸತ್ಯಾಸಂಸೃತಿರೀಶ ನಿಗ್ರಹ ಕೃತಾ ಮುಕ್ತಿಸ್ತು ಭಕ್ತ್ಯಾದಿನಾ
ತತ್ಪ್ರಾಪ್ತಿಃ ಪರಮೇ ಪದೇ ತದನು ಭೂತ್ಯಾಖ್ಯೇತಿ ಸಂಚಕ್ಷ ಸೇ ॥

ಆತ್ಮೈಕ್ಯಂ ದೇವತೈಕ್ಯಂ ತ್ರಿಕಸಮಧಿಗತಾ ತುಲ್ಯತೈಕ್ಯಂ ತ್ರಯಾಣಾಂ
ಅನ್ಯತ್ರೈಶ್ವರ್ಯಮಿತ್ಯಾದ್ಯ ನಿಪುಣ ಘಣಿತಿರಾದ್ರಿಯಂ ತೇನ ಸಂತಃ ।
ತ್ರಯ್ಯಂತೈರೇಕ ಕಂಠೈರ್ತದನುಗುಣ ಮನುವ್ಯಾಸ ಮುಖ್ಯೋಕ್ತಿಭಿಶ್ಚ
ಶ್ರೀಮನ್ನಾರಾಯಣೋನಃ ಪತಿರಖಿಲತನುಃ ಮುಕ್ತಿದೋ ಮುಕ್ತಭೋಗ್ಯಃ ॥

ಯತಿಕ್ಷ್ಮಾ ಭೃದ್ದೃಷ್ಟಂ ಮತಮಿಹ ನವೀನಂ ತದಪಿಕಿಂ
ತತಃ ಪ್ರಾಗೇವಾನ್ಯದ್ವದ ತದಪಿಕಿಂ ವರ್ಣ ನಿಕಷೇ ।

ನಿಶಾಮ್ಯಂ ತಾಂಯದ್ವಾ ನಿಜಮತಿ ತಿರಸ್ಕಾರ ವಿಗಮಾತ್
ನಿರಾತಂಕಾಷ್ಟಂಕ ದ್ರಮಿಡ ಗುಹದೇವ ಪ್ರಭೃತಯಃ ॥

ದೃಷ್ಟೇsಪಹ್ನೂಕ್ಯ ಭಾವಾದನುಮಿತಿ ವಿಷಯೋ ಲಾಘವಸ್ಯಾಮಸಾರಾತ್
ಶಾಸ್ತ್ರೇಣ್ಯೈವಾನಪೇಯೋ ವಿಹತಿ ವಿರಹಿತೇ ನಾಸ್ತಿಕತ್ವ ಪ್ರಹಾಣಾತ್ ।
ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬಂಧೈಃ
ತ್ರಾತುಂ ಸಮ್ಯಗ್ಯತೀಂದ್ರೈರಖಿಲತಮಃ ಕರ್ಶನಂ ದರ್ಶನಂ ಚ ॥

ಲಕ್ಷ್ಮೀನಾಥಾಖ್ಯಸಿಂಧೌ ಶಠರಿಪುಜಲದಃ ಪ್ರಾಪ್ಯಕಾರುಣ್ಯನೀರಂ
ನಾಥಾದ್ರಾವಭ್ಯಷಿಂಚತ್ತದನು ರಘುವರಾಂಭೋಜ ಚಕ್ಷುರ್ಝರಾಭ್ಯಾಮ್ ।
ಗತ್ವಾತಾಂ ಯಾಮುನಾಖ್ಯಾಂ ಸರಿತಿಮಥಯತೀಂದ್ರಾಖ್ಯ ಪದ್ಮಾಕರೇಂದ್ರಃ
ಸಂಪೂರ್ಯ ಪ್ರಾಣಿಸಸ್ಯೇ ಪ್ರವಹತಿ ಸತತಂ ದೇಶಿಕೇಂದ್ರ ಭ್ರಮೌಘೈಃ ॥

## ರಾಮಾನುಜರ ದಿವ್ಯಾಜ್ಞೆ

ಶ್ರೀಭಾಷ್ಯದ್ರವಿಡಾಗಮೋ ಪ್ರವಚನೇ ಶ್ರೀಶಸ್ಥಲೇಷ್ವನ್ಯಹಂ
ಕೈಂಕರ್ಯಂ ಯದುಶೈಲ ನಿತ್ಯವಸತಿಸ್ಸಾರ್ಥದ್ವಯೋಚ್ಚಾರಣಮ್ ।
ಯದ್ವಾ ಭಾಗವತಾಭಿಮಾನ ವಸತಿ ಶ್ರೇಯಸ್ಸತಾಮಿತ್ಯಲಂ
ಶಿಷ್ಯಾನ್ಪ್ರಾಹ ಯತೀಶ್ವರಃ ಪರಮಗಾದ್ವಿಷ್ಣೋಃ ಪದಂ ಶಾಶ್ವತಮ್ ॥

ಪಠಿತ್ವಾ ಭಾಷ್ಯಂ ತತ್ಪ್ರವಚನಮಶಕ್ತೌಶಠರಿಪೋ
ಗಿರಿಶ್ರದ್ಧಾವಾಸಃ ಪ್ರಭುಪರಿಚಿತಸ್ಥಾನ ನಿವಹೇ ।
ಪ್ರಭೋಃ ಕೈಂಕರ್ಯಂವಾ ಪ್ರಪದನಮನೋರರ್ಥ ಮನನಂ
ಪ್ರಪನ್ನಾನಾಂ ವಾಮೇ ಭವತು ಪರಿಚರ್ಯಾ ಪರಿಚಯಃ ॥

# ರಾಮಾನುಜರ ಹಿರಿಮೆ

1. ಮೊದಲು ಗುರುಗಳಾಗಿದ್ದು, ಆಮೇಲೆ ಶಿಷ್ಯರಾದ, ಯಾದವ ಪ್ರಕಾಶರ ಗೋಷ್ಠಿಯಲ್ಲಿ ಕಲಿಯುತ್ತಿದ್ದ ರಾಮಾನುಜರನ್ನು ಯಾಮುನರು ದೂರದಿಂದಲೇ ಕಟಾಕ್ಷಿಸಿ, ಅವರು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರವರ್ತಕರಾಗುವಂತೆ ಅನುಗ್ರಹಿಸಿ, ಅವರನ್ನು ಇಳೆಯ ಪೆರುಮಾಳ್ ಎಂದು ಕರೆದರು. ಜೊತೆಗೆ ತಮ್ಮ ಐವರು ಮುಖ್ಯ ಶಿಷ್ಯರೂ ರಾಮಾನುಜರಿಗೆ ಕಲಿಸಬೇಕೆಂದು ಆದೇಶವಿತ್ತರು.

2. ಮಹಾಪೂರ್ಣರು (ಪೆರಿಯನಂಬಿ) ರಾಮಾನುಜರ ಮುಖ್ಯ ಆಚಾರ್ಯ ರಾಗಿ ಅವರನ್ನು ರಾಮಾನುಜನ್ ಎಂದು ಕರೆದರು.

3. ಶ್ರೀರಂಗದಿಂದ ಮಧುರೆಗೆ ಬೇಸರವಿಲ್ಲದೆ ಹದಿನೆಂಟು ಬಾರಿ ಹೋಗಿ ಗೋಷ್ಠೀಪೂರ್ಣರನ್ನು (ತಿರುಕ್ಕೋಟ್ಟಿಯೂರ್‌ನಂಬಿ) ಒಲಿಸಿಕೊಂಡು, ಅವರಿಂದ ಬಹಳ ಶ್ರಮಪಟ್ಟು ಕಲಿತ ಅತಿ ಗೋಪ್ಯವಾದ ಮಂತ್ರಗಳ ರಹಸ್ಯಾರ್ಥವನ್ನು, ಸಕಲ ಚೇತನರ ಉದ್ಧಾರವಾಗಲೆಂಬ ಉದ್ದೇಶದಿಂದ ಎಲ್ಲರಿಗೂ ಉಪದೇಶಿಸಿದ ರಾಮಾನುಜರ ಬಗ್ಗೆ ಕೋಪಗೊಂಡಿದ್ದ ಗುರುಗಳು, ಭಗವಂತನ ಕಾರುಣ್ಯಕ್ಕಿಂತಲೂ ರಾಮಾನುಜರ ಕಾರುಣ್ಯ ಮಹತ್ತರವಾದುದು ಎಂದು ಹೇಳಿದುದಲ್ಲದೆ, ರಾಮಾನುಜ ರಲ್ಲಿರುವಷ್ಟು ವಿಶಾಲ ಭಾವನೆ, ಔದಾರ್ಯ ತನ್ನಲ್ಲಿ ಬರಲಿಲ್ಲವಲ್ಲಾ ಎಂದು ಶೋಕಿಸಿ, ರಾಮಾನುಜರನ್ನು ಎಂಬೆರುಮಾನಾರ್ ಎಂದು ಕರೆದು, ವಿಶಿಷ್ಟಾದ್ವೈತವು ಎಂಬೆರು ಮಾನಾರ್ ದರ್ಶನವೆಂದು ಕರೆಯಲ್ಪಡಲಿ ಎಂದು ಹರಸಿದರು.

4. ರಾಮಾನುಜರಿಗೆ ದಿವ್ಯ ಪ್ರಬಂಧಗಳ ಅರ್ಥವನ್ನು ಕಲಿಸಿದ ಮಾಲಾಧರರು (ತಿರುಮಲೈಯಾಂಡಾನ್) ತನಗಿಂತ ರಾಮಾನುಜರಿಗೇ ಪೂರ್ವಾಚಾರ್ಯರ ಅಭಿ ಪ್ರಾಯವು ಚೆನ್ನಾಗಿ ತಿಳಿದಿದೆಯೆಂದು ಹೇಳಿ ಅವರನ್ನು ಶಠಗೋಪನ್ ಪೊನ್ನಡಿ ಎಂದು ಕರೆದರು.

5. ಸೋದರ ಮಾವನಾದ ಶ್ರೀ ಶೈಲಪೂರ್ಣರಲ್ಲಿ (ತಿರುಮಲೆನಂಬಿ) ಕಾಲ ಕ್ಷೇಪ ಮಾಡಿ, ಪ್ರಪತ್ತಿವೇದ, ಶರಣಾಗತಿಶಾಸ್ತ್ರ ಎನಿಸಿದ ರಾಮಾಯಣದ ಗೂಢಾರ್ಥ ವನ್ನೆಲ್ಲಾ ಅರಿತು, ತಿರುಮಲೆಯ ಶ್ರೀನಿವಾಸ ದೇವರಿಗೆ ಮನಃಪೂರ್ವಕವಾಗಿ ಸೇವೆ ಸಲ್ಲಿಸಿ, ಗುರುಗಳಿಂದ ರಾಮಾನುಜರು ಕೋಯಿಲಣ್ಣನ್ ಎಂದು ಕರೆಸಿಕೊಂಡರು.

6. ವರರಂಗ ಗಾಯಕರಿಗೆ (ಆಳವಂದಾರಾಳ್ವಾನ್) ಚೆನ್ನಾಗಿ ಸೇವೆ ಮಾಡಿ, ಅವರಿಂದ ದಿವ್ಯ ಪ್ರಬಂಧದ ಮೂಲವನ್ನು ಹಾಗೂ ಆಚಾರ್ಯಾಭಿಮಾನದ ಲಕ್ಷಣ

ಗಳನ್ನು ಗ್ರಹಿಸಿ ಕೈಂಕರ್ಯ ಸಾಮ್ರಾಜ್ಯದ ಒಡೆಯರೆನಿಸಿ, ಗುರುಗಳಿಂದ ಲಕ್ಷ್ಮಣ ಮುನಿ ಎಂದು ಕರೆಸಿಕೊಂಡರು.

7. ಗುರುಗಳಿಗೆ ಗೌರವ ಸಲ್ಲಿಸಲಾಗದ, ಆಧ್ಯಾತ್ಮಿಕ ಸಾಧನೆಗೆ ಹಾಗೂ ನೂತನ ಸಿದ್ಧಾಂತದ ಪ್ರಚಾರಕ್ಕೆ ಅಡ್ಡಿಯಾಗಿದ್ದ, ಗೃಹಸ್ಥ ಜೀವನವನ್ನು ತೊರೆದು, ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ಕಂಚಿಯ ವರದರಾಜ ಸ್ವಾಮಿಯ ಸನ್ನಿಧಿಯಲ್ಲಿ ಸ್ವೀಕರಿಸಿ. ದೇವರಿಂದಲೇ ಯತಿರಾಜ ಎಂದು ಕರೆಸಿಕೊಂಡರು.

8. ಶ್ರೀರಂಗದ ರಂಗನಾಥಸ್ವಾಮಿಯಿಂದ ಉಡೈಯವರ್ ಎಂದು ಕರೆಸಿ ಕೊಂಡರು.

9. ತಿರುಮಲೆಯ ಶ್ರೀನಿವಾಸ ಸ್ವಾಮಿಗೆ ಶಂಖಚಕ್ರಗಳನ್ನು ಕೊಟ್ಟು ದೇಶಿ ಕೇಂದ್ರನ್ ಎಂದು ಕರೆಸಿಕೊಂಡರು.

10. ಮೇಲುಕೋಟೆಯ ಚೆಲುವನಾರಾಯಣಸ್ವಾಮಿಯನ್ನು ಪುತ್ರನಾಗಿ ಭಾವಿಸಿ ಸ್ವಾಮಿತಂದೆ ಎಂದು ಕರೆಸಿಕೊಂಡರು.

11. ರಾಮಾನುಜರು ಕೂರೇಶರ ನೆರವಿನಿಂದ ಶ್ರೀಭಾಷ್ಯವನ್ನು ರಚಿಸಿ, ಪರಾಶರ ಭಟ್ಟರಿಂದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನವನ್ನು ಬರೆಸಿ, ಪಿಳ್ಳಾನ್‌ರವ ರಿಂದ ತಿರುವಾಯ್ಮೊಳಿಗೆ ಭಾಷ್ಯವನ್ನು ಬರೆಸಿ, ಆ ಮೂಲಕ ಯಾಮುನರ ಅಂತಿ ಮೇಚ್ಛೆಯನ್ನು ಪೂರೈಸಿ, ಯಾಮುನಾಂಗುಳಿ ಮೋಚಕ ಎಂದು ಕರೆಸಿಕೊಂಡರು.

12. ರಾಮಾನುಜರು ರಚಿಸಿದ ಶ್ರೀಭಾಷ್ಯವನ್ನು ಆಲಿಸಿದ ಕಾಶ್ಮೀರದ ಶ್ರೀನಗರದ ಭಟ್ಟಿ ಮಂಟಪದಲ್ಲಿ ಭಾಷ್ಯಕಾರ ಎಂದು ಕರೆಸಿಕೊಂಡರು.

13. ಭಿಕ್ಷೆಗೆ ಹೋಗುತ್ತಿದ್ದ ಕಾಲದಲ್ಲಿ ಸಕಲ ವೇದ ಶಾಸ್ತ್ರಾರ್ಥಸಾರ ಎನಿಸಿ ರುವ ತಿರುಪ್ಪಾವೈ ಗೀತೆಯನ್ನು ಹಾಡುತ್ತ ತಿರುಪ್ಪಾವೈ ಜೀಯರ್ ಎಂದು ಕರೆಸಿ ಕೊಂಡರು.

14. ಆಂಡಾಳ್ ಆಸೆಪಟ್ಟು, ನೆರವೇರಿಸಲಾಗದಿದ್ದ ಹರಕೆ ಕೈಂಕರ್ಯವನ್ನು ಪೂರ್ಣಗೊಳಿಸಿ ಅಂದರೆ ನೂರು ಕೊಡ ಕ್ಷೀರಾನ್ನ ಮತ್ತು ನೂರು ಕೊಡ ಬೆಣ್ಣೆ ಗಳನ್ನು ತಿರುಮಾಲಿರುಂಶೋಲೈನಲ್ಲಿರುವ ಸುಂದರ ಬಾಹುಸ್ವಾಮಿಗೆ, ಕಿಡಾಂಬಿ ಆಚ್ಚಾನ್ ಸಹಾಯದಿಂದ ಸಮರ್ಪಿಸಿ ಗೋದಾಭೀಷ್ಟ ಪ್ರಪೂರಕ, ಗೋದಾಗ್ರಜ, ಎಂದು ಕರೆಸಿಕೊಂಡರು.

15. ಸಾರಾಸಾರಮಿಶ್ರವಾದ ಶಾಸ್ತ್ರಗಳಲ್ಲಿ ಅಸಾರವಾದುದನ್ನು ತ್ಯಜಿಸಿ, ಸಾರವಾದುದನ್ನೇ ಆರಿಸಿಕೊಂಡು, ಬ್ರಹ್ಮಜ್ಞಾನಕ್ಕೆ ಪ್ರೇರಕರಾಗಿ, ಅದನ್ನು ಪ್ರಕಾಶ ಗೊಳಿಸಿ, ವಿಷ್ಣುಪತ್ನಿಯಾದ ಶ್ರೀದೇವಿಯ ಹೆಜ್ಜೆಯನ್ನನುಸರಿಸಿ ರಾಜಹಂಸ ಎಂದು ಕರೆಸಿಕೊಂಡರು.

16. ಭಗವಂತನನ್ನು ಮಾತ್ರ ಅಪೇಕ್ಷಿಸಿ, ಮಧುರ ಭಾವನೆಗಳೇ ತುಂಬಿರುವ ದಿವ್ಯ ಪ್ರಬಂಧಗಳ ಕಾಲಕ್ಷೇಪ ಮಾಡಿ, ನೂರಾರು ದಿವ್ಯ ದೇಶಗಳನ್ನು ಸಂದರ್ಶಿಸಿ,

ಗ್ರಂಥಗಳನ್ನು ರಚಿಸಿ, ತಡೆ ಆತಂಕಗಳಿಲ್ಲದ ಗೌರವಾದರಗಳನ್ನು ಪಡೆದು ಭೃಂಗರಾಜ ಎಂದು ಕರೆಸಿಕೊಂಡರು.

17. ಶ್ರೀರಂಗದ ದೇವಾಲಯದ ಅಧಿಕಾರಿಯಾಗಿದ್ದ ತಿರುವರಂಗತ್ತಮುದನಾರ್ ಎಂಬುವರು, ತಾಯಿಯ ಇಚ್ಛೆಯಂತೆ, ಶ್ರೀವೈಷ್ಣವ ಮತವನ್ನು ಅಪ್ಪಿ, ರಾಮಾನುಜರ ಆದೇಶದಂತೆ ಕೂರೇಶರ ಶಿಷ್ಯರಾದರು. ಆಮೇಲೆ ರಾಮಾನುಜರನ್ನು ಕುರಿತು ಅವರು ಹಾಡಿದ ರಾಮಾನುಜ ನೂತ್ತಂದಾದಿಯು ದಿವ್ಯ ಪ್ರಬಂಧದ ಭಾಗವಾಗಿ, ಪ್ರಪನ್ನಗಾಯತ್ರಿ ಎಂಬ ಹೆಸರಿನಿಂದ ಪಾರಾಯಣ ಮಾಡಲ್ಪಡುತ್ತಿದೆ.

18. ಶಿಷ್ಯರಾದ ಆಂಧ್ರಪೂರ್ಣರು (ವಡುಗನಂಬಿ) ಯತಿರಾಜ ವೈಭವ ಮತ್ತು ರಾಮಾನುಜ ಅಷ್ಟೋತ್ತರಗಳನ್ನು ರಚಿಸಿದ್ದಾರೆ.

19. ಶ್ರೀರಂಗದಲ್ಲಿ ಪಿಳ್ಳಾನ್, ಶ್ರೀಪೆರಂಬೂದೂರಿನಲ್ಲಿ ಮುದಲಿಯಾಂಡಾನ್, ಕಂಚಿಯಲ್ಲಿ ನಡಾದೂರಾಳ್ವಾನ್, ತಿರುಪತಿಯಲ್ಲಿ ತಿರುಮಲೆನಂಬಿ, ಈ ನಾಲ್ವರೂ ಆ ಸ್ಥಳಗಳಲ್ಲಿ ರಾಮಾನುಜರ ಮೂರ್ತಿ ಇರುವ ಸನ್ನಿಧಿಗಳನ್ನು ಕಟ್ಟಿಸಿದ್ದಾರೆ.

20. ನಾರಾಯಣ, ರಾಮಾನುಜ ಎಂಬೆರಡೂ ಶಬ್ದಗಳು ನಾಲ್ಕು ಅಕ್ಷರಗಳಿಂದ ಕೂಡಿವೆ. ನಾರಾಯಣ ಎಂಬುದು ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆ ಎಂಬೆರಡೂ ಕಾರ್ಯಗಳನ್ನು ಮಾಡುತ್ತ, ಬಂಧ—ಮೋಕ್ಷಗಳೆರಡಕ್ಕೂ ಕಾರಣವಾಗಿದೆ; ಆದರೆ ರಾಮಾನುಜ ಎಂಬುದು ತನ್ನ ಕಾರುಣ್ಯದ ಮಹಿಮೆಯಿಂದ ಕೇವಲ ಮೋಕ್ಷವನ್ನೇ ಅನುಗ್ರಹಿಸುತ್ತದೆ. ಆದುದರಿಂದ ನಾರಾಯಣ ಎಂಬ ಪದಕ್ಕಿಂತ ರಾಮಾನುಜ ಎಂಬ ಪದವೇ ಶ್ರೇಷ್ಠವಾದುದು ಎಂಬುದಾಗಿ ಕೂರೇಶರು ಹೇಳಿದ್ದಾರೆ.

21. ರಾಮಾನುಜ ಎಂಬ ನಾಲ್ಕು ಅಕ್ಷರಗಳೇ ತಿರುಮಂತ್ರ. ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳಿಗಿಂತ ರಾಮಾನುಜರ ಪಾದಗಳ ಕೈಂಕರ್ಯವೇ ಪರಮ ಪುರುಷಾರ್ಥ ಎಂದು ನಡಾದೂರಮ್ಮಾಳ್ ಹೇಳಿದ್ದಾರೆ.

22. ರಾಮಾನುಜರು ಸಕಲಲೋಕಗಳಿಗೂ ಗುರು. ಅವರು ಮಾತ್ರ ಎಲ್ಲರಿಗೂ ಮುಕ್ತಿಯನ್ನು ಕರುಣಿಸಬಲ್ಲರು ಎಂದು ಕಣಿಯನೂರು ಶಿರಿಯಾಚ್ಚಾನ್ ಹೇಳಿದ್ದಾರೆ.

23. ರಾಮಾನುಜರೆಂಬ ಸೂರ್ಯನು ಪುಣ್ಯಗಳೆಂಬ ಕಮಲದ ಹೂಗಳನ್ನು ವಿಕಾಸಗೊಳಿಸಿ, ಪಾಪಗಳೆಂಬ ಅಂಧಕಾರವನ್ನು ಧ್ವಂಸಗೊಳಿಸಿ, ಲೋಕೋಜ್ಜೀವನಕ್ಕಾಗಿ ಅವತರಿಸಿದವರು ಎಂದು ಕಂದಾಡೈಯಾಂಡಾನ್ ಹೇಳಿದ್ದಾರೆ.

24. ರಾಮಾನುಜರು ಹುಟ್ಟಿದುದರಿಂದಲೇ ಶರಣಾಗತಿ (ಪ್ರಪತ್ತಿ)ಗೆ ಒಂದು ಪ್ರಮುಖ ಸ್ಥಾನ ದೊರೆಕಿತು ಎಂದು ಪಿಳ್ಳೈಪ್ಪೆರುಮಾಳ್ ಆಯ್ಯಂಗಾರ್ಯರು ತಮ್ಮ ಯತಿರಾಜರ್ ಅಂತಾದಿಯಲ್ಲಿ ಹೇಳಿದ್ದಾರೆ.

25. ತಾಯಿ ಸೀತೆ, ಮಗ ಪ್ರಹ್ಲಾದ, ತಮ್ಮ ವಿಭೀಷಣ, ಗುರು ಶಠಗೋಪ, ಶಿಷ್ಯ ರಾಮಾನುಜ—ಈ ಐವರಲ್ಲಿ ಮಾತ್ರ ದೀನದಲಿತರ ಬಗ್ಗೆ ಸಮಾನ

ಭೂತಿ, ಕರುಣೆಗಳನ್ನು ನೋಡಬಹುದು ಎಂದು ಅಳಗಿಯ ಮಣವಾಳ ನಾಯನಾರ್ ತಮ್ಮ ಆಚಾರ್ಯ ಹೃದಯಂನಲ್ಲಿ ಹೇಳಿದ್ದಾರೆ.

26. ಕವಿತಾರ್ಕಿಕ ಕೇಸರಿ, ಸರ್ವತಂತ್ರ ಸ್ವತಂತ್ರ ಎನಿಸಿದ ನಿಗಮಾಂತ ಮಹಾದೇಶಿಕರು ಯತಿರಾಜ ಸಪ್ತತಿಯನ್ನು ಬರೆದಿದ್ದಾರೆ.

27. ಮಣವಾಳ ಮಾಮುನಿಗಳು ಯತಿರಾಜ ವಿಂಶತಿ, ಉಪದೇಶ ರತ್ನ ಮಾಲೆ, ಆರ್ತಿಪ್ರಬಂಧಗಳನ್ನು ರಚಿಸಿದ್ದಾರೆ.

28. ಬಲರಾಮನ ತಮ್ಮ ಶ್ರೀಕೃಷ್ಣನು ಯಮುನಾ ನದಿಯಲ್ಲಿ ಜಲಕ್ರೀಡೆ ಮಾಡಿ, ಕಾಳಿಂಗನ ಹೆಡೆಯ ಮೇಲೆ ನರ್ತನ ಮಾಡಿ, ದಡದಲ್ಲಿ ಲೋಕ ಮೋಹಕ ಲೀಲೆಗಳನ್ನು ಎಸಗಿ, ನರಕಾಸುರನನ್ನು ಸಂಹರಿಸಿ, ದಿವ್ಯವಾಣಿಯಿಂದ ಗೀತೋಪದೇಶ ಮಾಡಿದ್ದಾನೆ ; ಹಾಗೆಯೇ ರಾಮಾನುಜರು, ಯಾಮುನರ ಗ್ರಂಥವನ್ನು ಓದಿ ಅವರ ಶಿಷ್ಯರ ಮೂಲಕ ಅವರ ಅಭಿಪ್ರಾಯಗಳೆಲ್ಲವನ್ನೂ ತಿಳಿದುಕೊಂಡು, ಗ್ರಂಥ ರಚನೆ ಮಾಡಿ, ನರಕ ಮಾರ್ಗವನ್ನು ತಪ್ಪಿಸಲು, ಭಕ್ತಿ ಪ್ರಪತ್ತಿಗಳಿಂದ ಪರಮ ಪದದ ಮಹಾದ್ವಾರವನ್ನು ತೆರೆದಿಟ್ಟು, ಶ್ರೀ ವೈಷ್ಣವ ಮತ–ಸಮಾಜಗಳ ಸಂಘಟನೆಗಾಗಿ ಅನೇಕ ಲೀಲೆಗಳನ್ನು ಆಚರಿಸಿ ತೋರಿಸಿದರು ಎಂಬುದಾಗಿ ವೆಂಕಟಾಧ್ವರಿಯು ತಮ್ಮ ವಿಶ್ವಗುಣಾದರ್ಶ ಚಂಪೂ ಕಾವ್ಯದಲ್ಲಿ ಹೇಳಿದ್ದಾರೆ.

೧೩

# ರಹಸ್ಯತ್ರಯ ಸಾರ ಸಂಗ್ರಹ

೧

ಪರಮಾಚಾರ್ಯನಾದ ಸರ್ವೇಶ್ವರನು ತಾನೇ ಸೃಷ್ಟಿಸಿದ ಚತುರ್ಮುಖ ಬ್ರಹ್ಮನಿಗೆ ವೇದಗಳನ್ನು ಉಪದೇಶಿಸಿ, ಆಮೇಲೆ ಆ ವೇದಗಳನ್ನು ಮಧುಕೈಟಭರೆಂಬ ರಾಕ್ಷಸರಿಂದ ರಕ್ಷಿಸಿ, ನಾರದ, ಪರಾಶರ, ಶುಕ, ಶೌನಕರ ಮೂಲಕ ಸಂಪ್ರದಾಯವನ್ನು ಕಲಿಸಿದನು. ಹಂಸ, ಹಯಗ್ರೀವ, ಮತ್ಸ್ಯ, ನಾರಾಯಣ, ಎಂಬೀ ಅವತಾರಗಳ ಕಾಲದಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ಕುರಿತು ಉಪದೇಶ ನೀಡಿದ್ದಾನೆ. ವಾಲ್ಮೀಕಿ, ವ್ಯಾಸ ಮಹರ್ಷಿಗಳಲ್ಲಿ ಅಂತರ್ಯಾಮಿಯಾಗಿ ನೆಲಸಿ, ಅವರು ರಾಮಾಯಣ, ಬ್ರಹ್ಮಸೂತ್ರ, ಮಹಾಭಾರತ, ಭಾಗವತ ಮುಂತಾದ ಶ್ರೇಷ್ಠ ಧಾರ್ಮಿಕ ಗ್ರಂಥಗಳನ್ನು ರಚಿಸುವಂತೆ ಮಾಡಿದನು. ಶ್ರೀರಾಮ, ಶ್ರೀಕೃಷ್ಣ ಅವತಾರ ಕಾಲಗಳಲ್ಲಿ ಚರಮ ಶ್ಲೋಕಗಳನ್ನು ಉಪದೇಶಿಸಿ ಆ ಮೂಲಕ ಪ್ರಪತ್ತಿ ಮಾರ್ಗವನ್ನು ತೋರಿಸಿ ಕೊಟ್ಟು ರಕ್ಷಿಸಿದ್ದಾನೆ. ಆಳ್ವಾರುಗಳ ರೂಪದಲ್ಲಿ ಅಭಿನವ ದಶಾವತಾರವನ್ನು ಮಾಡಿ, ದಿವ್ಯ ಪ್ರಬಂಧವನ್ನು ಅನುಗ್ರಹಿಸಿ, ಪ್ರಪತ್ತಿಮಾರ್ಗವನ್ನು ಎತ್ತಿಹಿಡಿದು ಸಾಮಾನ್ಯ ಜನರನ್ನು ಉದ್ಧರಿಸಿದ್ದಾನೆ. ಇಂತಹ ಶ್ರಿಯಃಪತಿಯಾದ ನಾರಾಯಣನು ನಮಗೆ ಪ್ರಥಮ ಆಚಾರ್ಯ, ಪರತತ್ತ್ವ, ಪರಮಹಿತ ಹಾಗೂ ಪರಮ ಪುರುಷಾರ್ಥ ಎಲ್ಲವೂ ಆಗಿದ್ದಾನೆ ಎಂಬುದು ಶ್ರೀ ವೈಷ್ಣವ ಮತದ ದೃಢ ನಂಬಿಕೆಯಾಗಿದೆ.

ಶ್ರೀಮನ್ನಾರಾಯಣನಿಂದ ವಿಶಿಷ್ಟಾದ್ವೈತ ತತ್ತ್ವವೆಂಬ ಆತ್ಮ ವಿದ್ಯೆಯ ರಹಸ್ಯವನ್ನು ಪಡೆದ ವಿಷ್ಣುಪತ್ನಿ ಮಹಾಲಕ್ಷ್ಮಿಯು ಶ್ರೀ ವೈಷ್ಣವ ಆಚಾರ್ಯ ಪರಂಪರೆಯಲ್ಲಿ ಎರಡನೆಯವಳು. ಮಹಾಲಕ್ಷ್ಮಿಯಿಂದ ವಿಷ್ವಕ್ಸೇನರಿಗೆ, ವಿಷ್ವಕ್ಸೇನರಿಂದ ನಮ್ಮಾಳ್ವಾರರಿಗೆ, ನಮ್ಮಾಳ್ವಾರರಿಂದ ಯೋಗದೆಸೆಯಲ್ಲಿ ನಾಥಮುನಿಗಳಿಗೆ, ನಾಥಮುನಿಗಳಿಂದ ಉಯ್ಯಕ್ಕೊಂಡಾರ್ ಮತ್ತು ಮಣಕ್ಕಾಲ್ ನಂಬಿಗಳ ಮೂಲಕ ಆಳವಂದಾರರಿಗೆ, ಆಳವಂದಾರರಿಂದ ಪೆರಿಯನ

ಉಪದೇಶಿಸಲ್ಪಟ್ಟಿತು.

ವೇದ–ಪ್ರಬಂಧಗಳಲ್ಲಿರುವ ಈ

ಪರಂಪರೆಯಾಗಿ ಪ್ರವರ್ತಿಸಲ್ಪಡುತ್ತ

ರೆಲ್ಲರೂ ಭೂಮಿಯ ಮೇಲೆ

ಅವತಾರಗಳೇ ಆಗಿದ್ದಾರೆ ಎಂದ

ರಲ್ಲಿ ಹಾಗೂ ಅವರ ಆಚಾರ್ಯರುಗಳಲ್ಲಿ ಭಕ್ತಿ ಗೌರವಗಳನ್ನು ತೋರಿಸಬೇಕು. ಈ ಆಚಾರ್ಯರುಗಳಲ್ಲಿ ನಾಥ, ಯಾಮುನ, ರಾಮಾನುಜ ಈ ಮೂವರೂ ನಮಗೆ ಮಹೋಪಕಾರ ಮಾಡಿರುವುದರಿಂದ ಅವರ ವಿಷಯದಲ್ಲಿ ಅತ್ಯಧಿಕವಾದ ಭಕ್ತಿ ಗೌರವ ಗಳನ್ನು ಹೊಂದಿರಬೇಕು.

೨

ವರ್ಣಾಶ್ರಮ ಧರ್ಮಗಳನ್ನು ಸರಿಯಾಗಿ ಅನುಷ್ಠಿಸುವುದರ ಮೂಲಕ ಇಂದ್ರಿಯಗಳಿಂದ ಅನುಭವಿಸುವ ಸುಖದಲ್ಲಿ ವೈರಾಗ್ಯ ಉಂಟಾಗಬೇಕು. ಜ್ಞಾನ ಸ್ವರೂಪಿ, ಭಗವಂತನಿಗೆ ದಾಸ ಆದ ಜೀವಾತ್ಮನು ಪರಮಾತ್ಮನಿಗೆ ಸೇವೆ ಸಲ್ಲಿಸ ಬೇಕು.

ಭೂಲೋಕದಲ್ಲಿ ಸುಖಕ್ಕೆ ಸಾಧನವಾಗಿ ಹೇಳಿರುವ ಕಾಮ್ಯ ಕರ್ಮಗಳು ಅಲ್ಪಸಾರವಾದುವು. ಮೇಲಿನ ಲೋಕಗಳಲ್ಲಿ ಸುಖ ನೀಡುವ ಕರ್ಮಗಳನ್ನು ವಿವರಿ ಸುವ ವೇದಭಾಗವು ಸಾರವಾದುದು. ತನ್ನನ್ನೇ ಅನುಭವಿಸುವಂತಹ ಕೈವಲ್ಯವನ್ನು ವಿವರಿಸುವ ವೇದಭಾಗವು ಸಾರತರವಾದುದು. ಆದರೆ ಪರಮಾತ್ಮನ ಅನುಭವ ಉಂಟಾಗಲು ಸಾಧನವಾದ ವೇದಭಾಗವು ಅಂದರೆ ತತ್ತ್ವಹಿತ ಪುರುಷಾರ್ಥಗಳನ್ನು ಉಪದೇಶಿಸುವ ರಹಸ್ಯತ್ರಯವು ಸಾರತಮವಾದುದು. ಆದುದರಿಂದ ಪರಮಾತ್ಮ, ಜೀವಾತ್ಮ, ಉಪಾಯ, ಪ್ರತಿಬಂಧಕ, ಪ್ರಯೋಜನ ಎಂಬ ಮುಕ್ತಿಗೆ ಸಾಧನವಾದ, ಅರ್ಥ ಪಂಚಕಗಳನ್ನು ತಿಳಿದುಕೊಳ್ಳಬೇಕು.

ಚೇತನ-ಅಚೇತನಗಳಿಂದ ಕೂಡಿರುವ ಜಗತ್ತು ಸರ್ವೇಶ್ವರನಾದ ಶ್ರೀಮನ್ನಾರಾ ಯಣನ ಶರೀರ. ಸಕಲ ಜಗತ್ತುಗಳಿಗೆ ಭಗವಂತನೇ ಆತ್ಮನು. ಈ ಶರೀರಾತ್ಮ ಭಾವವೇ ಶ್ರೀ ವೈಷ್ಣವ ಮತದಲ್ಲಿ ಅತಿಮುಖ್ಯವಾದ ಹಾಗೂ ಆಧಾರ ಸ್ತಂಭದಂತಿ ರುವ ಪ್ರಧಾನ ಪ್ರತಿತಂತ್ರ. ಚೇತನರಾದ ಜೀವರು ಮತ್ತು ಅಚೇತನಗಳಾದ ಜಡ ಪದಾರ್ಥಗಳು ಪರಮಾತ್ಮನಿಂದ ಧರಿಸಲ್ಪಟ್ಟು, ನಿಯಮಿಸಲ್ಪಟ್ಟು, ಅವನ ಉಪ ಯೋಗಕ್ಕಾಗಿಯೇ ಇರುವ ವಸ್ತುಗಳು. ತನ್ನ ಸಂಕಲ್ಪದಿಂದ ಜಗತ್ತು ಉಂಟಾಗಲು, ಅದರ ಸ್ಥಿತಿ, ವ್ಯಾಪಾರಗಳಿಗೆ ಪರಮಾತ್ಮನು ಕಾರಣನಾಗಿದ್ದಾನೆ.

ಜೀವಾತ್ಮನು ಶರೀರವನ್ನು ಧರಿಸಿರುವಂತೆ, ಭಗವಂತನು ಪ್ರಪಂಚವನ್ನು ಧರಿಸಿ, ಇಲ್ಲಿನ ವಸ್ತುಗಳಲ್ಲಿರುವ ಗುಣಗಳಿಗೆ ಆಧಾರವಾಗಿದ್ದಾನೆ. ಎಲ್ಲ ವಸ್ತು ಗಳಲ್ಲಿಯೂ ನೆಲಸಿದ್ದು ಅವುಗಳ ಸ್ಥಿತಿಗೆ ಕಾರಣನಾಗಿದ್ದಾನೆ. ಎಲ್ಲ ವಸ್ತುಗಳೂ ಭಗವಂತನ ಸಂಕಲ್ಪಾಧೀನವಾಗಿವೆ. ಜೀವಾತ್ಮನು ಇಲ್ಲದಿದ್ದಾಗ ಶರೀರವು ನಾಶವಾಗು ವಂತೆ ಭಗವಂತನು ಇಲ್ಲದಿದ್ದರೆ ಪ್ರಪಂಚವೂ ಇರಲಾರದು.

ಭಗವಂತನು ಆಧಾರ, ಧಾರಕ, ಶೇಷಿ ಆದರೆ, ಜೀವಾತ್ಮರು ಆಧೇಯ, ಶೇಷ ಭೂತರು, ಭಗವಂತನ ಆಜ್ಞಾಧಾರಕರು ಆಗಿದ್ದಾರೆ.

ಅನಂತಜ್ಞಾನಾನಂದ ಸ್ವರೂಪ, ಸಮಸ್ತ ಕಲ್ಯಾಣ ಗುಣ ಪರಿಪೂರ್ಣ, ಸರ್ವ ಲೋಕಗಳಿಗೂ ಆಶ್ರಯನಾದ, ಅಪ್ರಾಕೃತ ದಿವ್ಯಮಂಗಳ ವಿಗ್ರಹ ಸ್ವರೂಪ, ಅನಂತ ವಿಭೂತಿ ವಿಶಿಷ್ಟ, ಆದ ಭಗವಂತನು ಸರ್ವಾವಸ್ಥೆಗಳಲ್ಲೂ ತನ್ನ ಸಹಧರ್ಮಿಣಿಯಾದ ಶ್ರೀದೇವಿಯೊಡನೆ ಕೂಡಿದವನಾಗಿಯೇ ಲೀಲಾರೂಪ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ಮೊದಲಾದ ವ್ಯಾಪಾರಗಳನ್ನು ಉಳ್ಳವನಾಗಿದ್ದಾನೆ.

ಸಂಸಾರಿಗಳಾದ ಜೀವಾತ್ಮರು 'ಬದ್ಧರು.' ಅವಿದ್ಯೆ, ಕರ್ಮ, ವಾಸನೆ, ರುಚಿ, ಶರೀರ ಸಂಬಂಧ ಇವುಗಳಿಂದ ಕೂಡಿದ್ದು ಸುಖದುಃಖ ಜ್ಞಾನಗಳನ್ನು ಅನುಭವಿಸುತ್ತ, ಮೋಕ್ಷ ಸಿಗುವವರೆಗೂ ಪಾಪ ಪುಣ್ಯಗಳಲ್ಲಿ ಪ್ರವೃತ್ತರಾಗಿರುತ್ತಾರೆ. ಅಂದರೆ ಅವರು ಭಗವಂತನ ಪ್ರಾಪ್ತಿಗೆ ಪ್ರತಿಬಂಧಕಗಳಾದ ಕರ್ಮ ಪ್ರವಾಹದಿಂದ ಕಟ್ಟಲ್ಪಟ್ಟವರು ; ಮುಕ್ತರು ಭಕ್ತಿ ಪ್ರಪತ್ತಿಗಳ ಮೂಲಕ ಸಂಸಾರ ಬಂಧನವನ್ನು ಬಿಡಿಸಿಕೊಂಡು, ಸ್ವರೂಪಾವಿರ್ಭಾವವನ್ನು ಪಡೆದು, ಕಳೆದುಕೊಂಡಿದ್ದ ಭಗವಂತನ ಸೇವೆಯನ್ನು ಮತ್ತೆ ಪಡೆದವರು ; ನಿತ್ಯರು ಭಗವಂತನಂತೆಯೇ ಅನಾದಿಯಾಗಿ, ಜ್ಞಾನ ಸಂಕೋಚವಿಲ್ಲದೆ, ಸಂಸಾರ ವಾಸನೆಯೇ ತಿಳಿಯದೆ ಭಗವಂತನಿಗೆ ನಿರಂತರವಾಗಿ ಸೇವೆ ಸಲ್ಲಿಸುವವರು.

ಅಚೇತನ, ಚೇತನ, ಪರಮಾತ್ಮ ಎಂಬ ಮೂರು ತತ್ತ್ವಗಳ ಯಥಾರ್ಥ ಸ್ವರೂಪವನ್ನು ಮಾನವರೆಲ್ಲರೂ ತಿಳಿಯಬೇಕು. ಸತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿ, ಕಾಲ, ಶುದ್ಧಸತ್ವ ಎಂಬೀ ಜ್ಞಾನವಿಲ್ಲದ ವಸ್ತುಗಳು ಅಚೇತನ. ಸಂಸಾರಿಗಳು, ಮುಕ್ತರು, ನಿತ್ಯರು ಇವರೆಲ್ಲ ಚೇತನ. ಅಚೇತನ ವಸ್ತುಗಳ ಸ್ಥಿತಿ–ಪ್ರವೃತ್ತಿಗಳು ಹಾಗೂ ಚೇತನರ ಸ್ಥಿತಿ, ನಿತ್ಯತ್ವ, ಕ್ರಿಯೆಗಳು ಭಗವದಧೀನವಾಗಿವೆ. ಭಗವಂತನು ಸ್ವತಂತ್ರ, ಜೀವಾತ್ಮನು ಅವನ ದಾಸ, ಜ್ಞಾನದಿಂದ ಕೂಡಿರುವುದು, ತನಗೆ ತಾನೇ ಪ್ರಕಾಶಿಸುವುದು ಇವೆರಡೂ ಜೀವಾತ್ಮ ಪರಮಾತ್ಮ ಇಬ್ಬರಿಗೂ ಸಮಾನವಾದ ಲಕ್ಷಣ. ಸರ್ವೇಶ್ವರ ತತ್ತ್ವವು ಸತ್ಯ, ಜ್ಞಾನ, ಅನಂತ, ಆನಂದಮಯ, ದೋಷರಹಿತ ಆಗಿದೆ. ಸಮಸ್ತ ಲೋಕಗಳನ್ನೂ ತನಗೆ ಶರೀರವಾಗಿ ಹೊಂದಿದ್ದು, ಮೋಕ್ಷವನ್ನು ಕೊಡುವ ಲಕ್ಷ್ಮೀಪತಿಯಾದ ನಾರಾಯಣನೇ ಪರದೇವತೆ ಎಂಬುದು ಉಪನಿಷತ್ತು, ಸ್ಮೃತಿ, ಪುರಾಣ, ಆಗಮ, ಇತಿಹಾಸ, ದಿವ್ಯಪ್ರಬಂಧಗಳಿಂದ ಸ್ಥಾಪಿಸಲ್ಪಟ್ಟಿದೆ.

ಪರಮಾತ್ಮನಿಗೆ ಐದು ವಿಧವಾದ ಸ್ವರೂಪಗಳುಂಟು. ಶ್ರೀವೈಕುಂಠದಲ್ಲಿರುವ ರೂಪವು ಪರ ; ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಎಂಬ ನಾಲ್ಕು ರೂಪಗಳು ವ್ಯೂಹ ; ಕೇಶವ, ನಾರಾಯಣ ಆದಿ ಹನ್ನೆರಡು ಹೆಸರುಗಳು ವ್ಯೂಹಾಂತರಗಳು ; ದಶಾವತಾರ ಮುಂತಾದ ಮೂವತ್ತು ರೂಪಗಳು ವಿಭವ ; ಎಲ್ಲರ ಹೃದಯದಲ್ಲಿಯೂ ಸೂಕ್ಷ್ಮವಾದ ರೂಪವೊಂದನ್ನು ಗ್ರಹಿಸಿ ನಿಂತಿರುವುದು

ಅಂತರ್ಯಾಮಿ ; ಆಶ್ರಿತರ ಅಪೇಕ್ಷೆಯಂತೆ ಬಿಂಬ ರೂಪದಲ್ಲಿ ದೇವಾಲಯಗಳಲ್ಲಿ ನಿಂತಿರುವುದು ಅರ್ಚಾ.

ಆತ್ಮನ ಮೂಲಕ ಪರಮಾತ್ಮನ ಬಗ್ಗೆ ನಿಜವಾದ ಜ್ಞಾನ ದೊರೆತು, ಪರಮಾತ್ಮ ನಲ್ಲದ ಇತರ ವಿಷಯ–ವ್ಯಕ್ತಿಗಳಲ್ಲಿ ವಿರಕ್ತಿ–ವೈರಾಗ್ಯ ಬಂದು, ಮೋಕ್ಷದಲ್ಲಿ ಆಸೆ ಯುಳ್ಳವನಾಗಿರುವವನೇ ಮುಮುಕ್ಷು. ಆತ್ಮ—ಶರೀರಗಳಲ್ಲಿರುವ ಭೇದ ತಿಳಿದಾಗ, ಶರೀರ ಸುಖಕ್ಕಾಗಿ ಹಾತೊರೆಯದೆ, ಅಹಂಕಾರ—ಮಮಕಾರಗಳನ್ನು ಬಿಟ್ಟು, ಮೇಲಿನ ಲೋಕಗಳಲ್ಲಿ ಆತ್ಮವು ಸುಖವನ್ನು ಪಡೆಯಲು ಬೇಕಾದ ಧರ್ಮವನ್ನು ಆಚರಿಸುತ್ತಾನೆ. ಜೀವಾತ್ಮ—ಪರಮಾತ್ಮರಲ್ಲಿರುವ ಭೇದವನ್ನು ಅರಿತಾಗ, ಆತ್ಮ ಸ್ವರೂಪಕ್ಕೆ ಯೋಗ್ಯವಾದ ಭಗವಂತನನ್ನು ಹಾಗೂ ಅವನ ಸೇವೆ ಎಂಬ ಪರಮ ಪುರುಷಾರ್ಥವನ್ನು ಪಡೆಯಲು ಶ್ರಮಪಡುತ್ತಾನೆ.

ಮುಮುಕ್ಷುವಿನ ಜೀವನವು ವಿಷಯರಾಗದಿಂದ ಭಗವದ್ರಾಗಕ್ಕೆ ತಿರುಗಲು ಭಗವದನುಗ್ರಹ ಆಗಬೇಕು. ಮುಕ್ತಿಗೆ ದೈವಾನುಗ್ರಹ ಮುಖ್ಯವಾದರೂ ಅದನ್ನು ಪಡೆಯಲು ಮನುಷ್ಯಪ್ರಯತ್ನಕ್ಕೂ ಸ್ಥಾನ ಉಂಟು. ಏಕೆಂದರೆ ಸರ್ವಜ್ಞ, ಸರ್ವ ಶಕ್ತ ಆದ ಭಗವಂತನು, ಕರ್ತೃತ್ವ, ಸ್ವಾತಂತ್ರ್ಯಗಳಿರುವ ಮಾನವರ ಆಸೆ-ಆಕಾಂಕ್ಷೆ ಗಳಿಗೆ ಅನುಸಾರವಾಗಿ ಕಾರ್ಯ ಮಾಡುತ್ತಾನೆಯೇ ಹೊರತು, ತನಗೆ ಇಷ್ಟ ಬಂದಂತೆ ಬಂಧನ—ಬಿಡುಗಡೆಗಳನ್ನು ಕರುಣಿಸುವುದಿಲ್ಲ. ಆದ ಕಾರಣ ಸಿದ್ಧೋಪಾಯನಾದ ಭಗವಂತನ ಅನುಗ್ರಹವನ್ನು ಸಂಪಾದಿಸಲು ಮಾನವನು ಸಾಧ್ಯೋಪಾಯವನ್ನು ಅವಲಂಬಿಸಬೇಕು.

ಮುಮುಕ್ಷುಗಳಲ್ಲಿ ಭಕ್ತ, ಪ್ರಪನ್ನ ಎಂದು ಎರಡು ವಿಧ. ಭಕ್ತನು ಸದ್ವಾರಕ ಪ್ರಪತ್ತಿ ನಿಷ್ಠ ಅಂದರೆ ಭಕ್ತಿಯೋಗವನ್ನು ಮಾಡುತ್ತ, ಅದಕ್ಕೆ ಅಂಗವಾಗಿ ಪ್ರಪತ್ತಿ ಯನ್ನು ಅನುಷ್ಠಿಸಿ, ಪ್ರಪತ್ತಿಗೆ ಫಲವಾದ ಭಕ್ತಿಯನ್ನೇ ಸಾಧನವನ್ನಾಗಿಟ್ಟುಕೊಂಡು ಮೋಕ್ಷವನ್ನು ಪಡೆಯುವವನು. ಪ್ರಪನ್ನನು ಅದ್ವಾರಕ ಪ್ರಪತ್ತಿ ನಿಷ್ಠ ಅಂದರೆ ಪ್ರಪತ್ತಿಯನ್ನು ಅನುಷ್ಠಿಸಿ ಅದರಿಂದ ನೇರವಾಗಿ ಮೋಕ್ಷವನ್ನು ಹೊಂದು ವವನು. ಅನೇಕ ಜನ್ಮಗಳನ್ನು ಕಳೆದು ಪ್ರಾರಬ್ಧಕರ್ಮಗಳೆಲ್ಲ ನಶಿಸಿದ ನಂತರವೇ ಭಕ್ತನಿಗೆ ಮೋಕ್ಷ ಸಿಗುತ್ತದೆ. ಆದರೂ ಮೋಕ್ಷ ಸಿಗುವವರೆಗೆ ಭಗವಂತನ ಧ್ಯಾನ ವನ್ನು ಮಾಡುತ್ತಿರುವ ಭಕ್ತನಿಗೆ ಅತಿಶ್ರೇಷ್ಠವಾದ ಧ್ಯಾನದ ಸುಖಸಂತೋಷಗಳು ದೊರಕುತ್ತವೆ. ಪ್ರಪನ್ನನಿಗೆ ಮೋಕ್ಷವು ಶೀಘ್ರವಾಗಿ ಸಿಕ್ಕಿದರೂ ಅವನು ಈ ಲೋಕ ದಲ್ಲಿರುವವರೆಗೆ ಪ್ರಾರಬ್ಧಕರ್ಮಗಳಿಗೆ ಅನುಗುಣವಾಗಿ ಪರಿಮಿತ ಸುಖ ಸಿಗುತ್ತದೆ. ಒಟ್ಟಿನಲ್ಲಿ ಪ್ರಾರಬ್ಧಕರ್ಮಗಳ ಫಲವನ್ನು ಅನುಭವಿಸಿದ ನಂತರ ಮೋಕ್ಷವನ್ನು ಅಪೇಕ್ಷಿಸುವವನು ಭಕ್ತಿಗೂ, ಪ್ರಾರಬ್ಧಕರ್ಮವನ್ನು ಕೊನೆಗಾಣಿಸಿ ಶೀಘ್ರದಲ್ಲಿ ಮೋಕ್ಷ ವನ್ನು ಹೊಂದಲು ಇಚ್ಛೆಯುಳ್ಳವನು ಪ್ರಪತ್ತಿಗೂ ಅಧಿಕಾರಿಗಳು.

ಜೀವಾತ್ಮ–ಪರಮಾತ್ಮ ಜ್ಞಾನ ಉಂಟಾಗಿ, ಕರ್ಮಫಲದಲ್ಲಿ ಆಸೆ ಮತ್ತು ಕರ್ತೃತ್ವ ಬುದ್ಧಿ ಇಲ್ಲದೆ, ಮಾಡಲ್ಪಡುವ ನಿಷಿದ್ಧವಲ್ಲದ ನಿತ್ಯ ಹಾಗೂ ಕಾಮ್ಯಕರ್ಮ ಗಳನ್ನೆಲ್ಲ ಶಾಸ್ತ್ರಗಳಿಗೆ ಅನುಗುಣವಾಗಿ ಮಾಡುವುದು ಕರ್ಮಯೋಗ. ಯಶಸ್ವೀ ಆಧ್ಯಾತ್ಮ ಜೀವನಕ್ಕೆ ಬ್ರಹ್ಮೋಪಾಸಕನಾಗಲು, ರಜೋತಮೋಗುಣಗಳನ್ನು ನಿಗ್ರಹಿಸಿ ಸತ್ವಗುಣವನ್ನು ಬೆಳೆಸಿಕೊಳ್ಳಲು, ಕರ್ಮಯೋಗ ಅವಶ್ಯಕ. ಜೀವಾತ್ಮ–ಪರಮಾತ್ಮರ ಸ್ವರೂಪ ಸ್ವಭಾವಗಳ ಸರಿಯಾದ ಜ್ಞಾನ ಪಡೆಯಲು ಯೋಗ್ಯ ಆಚಾರ್ಯರ ಸಹಾಯ, ಮಾರ್ಗದರ್ಶನ, ಅನುಗ್ರಹಗಳು ಮುಖ್ಯವಾದುವು.

ಕರ್ಮಯೋಗದಿಂದ ಆತ್ಮಾವಲೋಕನವಾದಾಗ, ಎಲ್ಲರಲ್ಲಿಯೂ ಅಂತರ್ಯಾಮಿ ಯಾಗಿರುವ ಪರಮಾತ್ಮನಲ್ಲಿ ಪ್ರೇಮ ಹುಟ್ಟಿ, ಅವನನ್ನು ಸ್ಮರಿಸಿ ಧ್ಯಾನಿಸುತ್ತಾನೆ. ಕರ್ಮಯೋಗದಿಂದ ಅಂತಃಕರಣ ಜಯ ಉಂಟಾಗಿ ನಂತರ ಜ್ಞಾನಯೋಗ ಉಂಟಾ ಗುತ್ತದೆ. ಕರ್ಮಯೋಗವು ಜ್ಞಾನಯೋಗದ ಸಹಕಾರವಿಲ್ಲದೆ ಯೋಗಾಭ್ಯಾಸವನ್ನುಂಟು ಮಾಡಿ ಜೀವಾತ್ಮನ ದರ್ಶನ ಮಾಡಿಸುವುದೂ ಉಂಟು. ಶರೀರದಿಂದ ಭಿನ್ನವಾದ ಪರಮಾತ್ಮನ ವಿಷಯದಲ್ಲಿ ವಿಧೇಯ, ನಿಯಾಮ್ಯ, ಶೇಷ ಆಗಿರುವ ಜೀವಾತ್ಮನ ಸ್ವರೂಪವನ್ನು ನಿರಂತರವಾಗಿ ಧ್ಯಾನಿಸುವುದೇ ಜ್ಞಾನಯೋಗ. ಇದಾದ ನಂತರ ಯೋಗಾಭ್ಯಾಸ ಉಂಟಾಗಿ ಜೀವಾತ್ಮನ ದರ್ಶನ ಆಗುತ್ತದೆ.

ಸ್ವತಂತ್ರ, ಅನನ್ಯಶೇಷಭೂತ, ಸರ್ವಶೇಷಿ ಆದ ಭಗವಂತನನ್ನು ಅಂತ್ಯಕಾಲದ ವರೆಗೂ ಎಡಬಿಡದೆ ಅತ್ಯಂತ ಪ್ರೀತಿಯಿಂದ ಸ್ಮರಿಸುವುದು ಭಕ್ತಿಯೋಗ. ನಷ್ಟವಾದ ಐಶ್ವರ್ಯ, ಹೊಸದಾದ ಐಶ್ವರ್ಯ, ಕೈವಲ್ಯ, ಭಗವಂತ, ಈ ನಾಲ್ಕು ವಿಧವಾದ ಫಲಗಳನ್ನು ಹೊಂದಲು ಭಕ್ತಿಯೋಗವನ್ನು ಆಚರಿಸಬಹುದು. ಇದಕ್ಕೆ ವರ್ಣಾಶ್ರಮ ಧರ್ಮವು ಅಂಗವಾಗಿರುತ್ತದೆ.

ಭಗವತ್ಪ್ರಾಪ್ತಿ ಎಂಬ ಮೋಕ್ಷವನ್ನು ಪಡೆಯಲು ಆಚರಿಸುವ ಭಕ್ತಿಯೋಗವು ಪರಭಕ್ತಿ ಎನಿಸಿಕೊಳ್ಳುತ್ತದೆ. ಪರಭಕ್ತಿ ಉಂಟಾದಾಗ ಪರಮಾತ್ಮನು ತನ್ನ ಪೂರ್ಣ ಸಾಕ್ಷಾತ್ಕಾರವನ್ನು ಭಕ್ತನಿಗೆ ಕರುಣಿಸುತ್ತಾನೆ. ಭಗವಂತನ ದರ್ಶನ ಪಡೆದ ನಂತರ ಅವನಲ್ಲಿರುವ ಪ್ರೀತಿಯು ತುಂಬಾ ಹೆಚ್ಚಾಗಿ ಪರಮ ಭಕ್ತಿ ಎನಿಸಿ ಅವನನ್ನು ಹೊಂದಲೇಬೇಕೆಂಬ ಇಚ್ಛೆ ಹುಟ್ಟಿ ಅವನ ಸಾನ್ನಿಧ್ಯ ದೊರಕುವಂತೆ ಮಾಡುತ್ತದೆ. ಮುಖ್ಯವಾಗಿ ಪರಮಾತ್ಮನ ಬಗ್ಗೆ ಆಳವಾದ ಜ್ಞಾನ ಬಂದಾಗ ಅವನಲ್ಲಿ ಗಾಢ ಪ್ರೀತಿ ಹುಟ್ಟಿ ಅವನಿಲ್ಲದೆ ತಾನಿರಲಾರೆ ಎನಿಸುತ್ತದೆ. ಧ್ಯಾನವು ಗಾಢ, ಪರಿಪೂರ್ಣ ಆದಾಗ ಪರಮಾತ್ಮನ ಅನುಭವ ಆಗುತ್ತದೆ. ಇದಕ್ಕೆ ಯಾವ ಅಡ್ಡಿಯೂ ಬರದಿರಲೆಂದು ಜೀವಾತ್ಮನು ಪರಮಾತ್ಮನಲ್ಲಿ ಸಂಪೂರ್ಣ ಶರಣು ಹೋಗಬೇಕು.

ಕಾಲ ವಿಳಂಬವನ್ನು ಸಹಿಸದಿರುವ ಎಲ್ಲರಿಗೂ ಪ್ರಪತ್ತಿ ಅಥವಾ ಶರಣಾ ಗತಿಯೇ ಮೋಕ್ಷೋಪಾಯ. ಮೋಕ್ಷದಲ್ಲಿ ಆಸೆಯಿರುವವನು, ಫಲದಲ್ಲಿ ಅಪೇಕ್ಷೆ ಇಲ್ಲದಿರುವವನು, ಪರಮಾತ್ಮನನ್ನು ಬಿಟ್ಟು ಮತ್ತಾವುದರಲ್ಲೂ ಆಸೆಪಡದಿರುವವನು,

ಇತರ ದೇವತೆಗಳನ್ನು ಆಶ್ರಯಿಸದಿರುವವನು, ಭಕ್ತಿಯೋಗವನ್ನು ಅನುಷ್ಠಿಸಲು ಸಾಮರ್ಥ್ಯವಿಲ್ಲದವನು, ಪ್ರಪತ್ತಿಗೆ ಅಧಿಕಾರಿ.

ಭಗವಂತನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಯೋಗ್ಯವಾದ ಒಳ್ಳೆಯ ಗುಣಗಳನ್ನು ಸಂಪಾದಿಸಿ, ಭಗವದಭಿಪ್ರಾಯಕ್ಕೆ ಅನುಕೂಲನಾಗಿರುವುದು ; ಅದಕ್ಕೆ ಪ್ರತಿಕೂಲವಾದ ದುರ್ಗುಣಗಳನ್ನು ತ್ಯಜಿಸಿ ಭಗವದಿಚ್ಛೆಗೆ ವಿರೋಧವಾಗಿ ಹೋಗದಿರುವುದು ; ಶರಣು ಬಂದವರನ್ನು ರಕ್ಷಿಸಿಯೇ ತೀರುತ್ತಾನೆ ಎಂಬ ಪೂರ್ಣ ವಿಶ್ವಾಸವನ್ನು ಹೊಂದಿ, ತಾನು ಭಗವಂತನ ರಕ್ಷಣೆ ಪಡೆದಿದ್ದೇನೆ ಎಂದು ನಂಬಿರುವುದು ; ಸರ್ವಲೋಕ ಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಮನೋನಿಶ್ಚಯವನ್ನು ಹೊಂದಿ, ತನ್ನ ಒಳಭಾವವನ್ನು ಗೋಪಸ್ತ್ರೀಯರಂತೆ ಪರಮಾತ್ಮನ ಮುಂದೆ ವರ್ಣಿಸುವುದು ; ತನ್ನ ಅಲ್ಪತೆ, ಅಶಕ್ತತೆಗಳನ್ನು ಅರಿತು ಪ್ರಕಟಿಸಿ, ಅಹಂಕಾರವನ್ನು ತೊರೆದು, ತಾನು ಮಾಡಿದ ಅಪರಾಧಗಳೆಲ್ಲವನ್ನೂ ನಿಷ್ಕಾಪಟ್ಯದಿಂದ ನಿವೇದಿಸಿಕೊಳ್ಳುವುದು ; ಭಗವಂತನಲ್ಲಿ ಜೀವಾತ್ಮನನ್ನು ಸಂಪೂರ್ಣವಾಗಿ ಒಪ್ಪಿಸಿ ನಿಶ್ಚಿಂತನಾಗಿರುವುದು–ಇವು ಪ್ರಪತ್ತಿಯ ಮುಖ್ಯ ಅಂಗಗಳು.

ಮೋಕ್ಷಕ್ಕೋಸ್ಕರ ಅನುಷ್ಠಿಸುವ ಪ್ರಪತ್ತಿಗೆ ಫಲತ್ಯಾಗ ಎಂಬ ಮತ್ತೊಂದು ಅಂಗವೂ ಉಂಟು. ಜೀವಾತ್ಮನಿಗೆ ಇದು ನನ್ನದು ಎಂದು ಹೇಳಲು ಅಧಿಕಾರವಿಲ್ಲ ಹಾಗೂ ನನ್ನದು ಎಂದು ಹೇಳಲ್ಪಡುವ ವಸ್ತುಗಳನ್ನು ರಕ್ಷಿಸಲು ಯೋಗ್ಯತೆಯಿಲ್ಲ. ಜೀವಾತ್ಮ ಮತ್ತು ಅವನಿಗೆ ಸೇರಿದ ವಸ್ತುಗಳು ಪರಮಾತ್ಮನಿಗೇ ಸೇರಿದ್ದು, ಅವನ್ನು ರಕ್ಷಿಸುವ ಭಾರವೂ ಅವನಿಗೆ ಸೇರಿದ್ದು. ಆದಕಾರಣ ಈ ಆತ್ಮವು ನಿನ್ನದು, ಇದನ್ನು ರಕ್ಷಿಸುವ ಭಾರವೂ ನಿನ್ನದು, ಇದನ್ನು ರಕ್ಷಿಸುವುದರಿಂದ ಉಂಟಾಗುವ ಫಲವೂ ನಿನಗೆ ಸೇರಿದ್ದು–ಎಂದು ಎಲ್ಲವನ್ನೂ ಭಗವಂತನಿಗೆ ಸಮರ್ಪಿಸುವುದೇ ಶರಣಾಗತಿ.

ವ್ಯಕ್ತಿಯು ದೇವ, ಪಿತೃ, ಋಷಿ ಈ ಮೂವರಿಗೆ ಸಾಲಗಾರನಾಗಿಯೇ ಹುಟ್ಟುತ್ತಾನೆ. ಯಾಗ ಮಾಡುವುದರಿಂದ, ಪುತ್ರಸಂತಾನದಿಂದ, ವೇದಾಧ್ಯಯನದಿಂದ ಈ ಸಾಲ ಅಥವಾ ಋಣಗಳು ತೀರುತ್ತವೆ. ಪ್ರಪನ್ನನ ವಿಷಯದಲ್ಲಿ ಈ ಋಣಗಳು ತೊಂದರೆ ಮಾಡುವುದಿಲ್ಲ. ಆದುದರಿಂದ ಮೋಕ್ಷೋಪಾಯವಾದ ಶರಣಾಗತಿಯನ್ನು ಅನುಷ್ಠಿಸಿದ ವ್ಯಕ್ತಿಯು ನಿರ್ಭಯನಾಗಿ ಇರಬಹುದು.

ತಾತ್ತ್ವಿಕವಾಗಿ ಪಂಚ ಸಂಸ್ಕಾರ ಮತ್ತು ಪಂಚಕಾಲ ಕರ್ಮಗಳು ವೈಕುಂಠವನ್ನು ಸೇರಲು ಉತ್ತಮ ಸಾಧನಗಳಾದರೂ, ಪರಮಾತ್ಮನ ಕರುಣೆ, ಅನುಗ್ರಹಗಳಿಲ್ಲದೆ ತನ್ನ ಪ್ರಯತ್ನಗಳು ನಿಷ್ಪ್ರಯೋಜಕವೆಂನು ಅರಿತ ಮುಮುಕ್ಷುವು ತನ್ನ ರಕ್ಷಣೆಗಾಗಿ ಶರಣ್ಯನಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುತ್ತಾನೆ.

ಪ್ರಪನ್ನನಿಗೆ ಆತ್ಮ ಸ್ವರೂಪದಲ್ಲಿ, ಶರಣಾಗತಿ ರೂಪದಲ್ಲಿರುವ ಉಪಾಯದಲ್ಲಿ ಹಾಗೂ ಭಗವತ್ ಕೈಂಕರ್ಯವೆಂಬ ಪುರುಷಾರ್ಥದಲ್ಲಿ ನಿಷ್ಠೆ ಇರಬೇಕು. ನಿಂದಕರ

ಮಾತನ್ನು ಕೇಳಿದಾಗ ಅದು ಶರೀರಕ್ಕೆ ಸೇರುತ್ತದೆ, ಆತ್ಮನಿಗಲ್ಲ ಎಂದು ತಿಳಿದು ದುಃಖಿಸದೆ ಇರಬೇಕು. ಜೊತೆಗೆ ನಿಂದಿಸಿದವನಿಗೆ ನಾವು ಮಾಡಿದ ಪಾಪಗಳು ಸೇರುತ್ತದಲ್ಲ ಎಂದು ಅವನ ಬಗ್ಗೆ ಕರುಣೆ ತೋರಿಸಬೇಕು. ಭಗವಂತನೇ ನಿಂದಕ ಹೃದಯಲ್ಲಿ ಅಂತರ್ಯಾಮಿಯಾಗಿದ್ದು ನಮ್ಮನ್ನು ನಿಂದಿಸುವಂತೆ ಮಾಡುತ್ತಾನೆಂದು ತಿಳಿದು ಅವನ ವಿಷಯದಲ್ಲಿ ಕೋಪಿಸಬಾರದು. ನಮ್ಮ ಪಾಪಗಳನ್ನು ನಮಗೆ ಜ್ಞಾಪಿಸುವ ನಿಂದಕರ ವಿಷಯದಲ್ಲಿ ಕೃತಜ್ಞತೆ ತೋರಿಸಿ, ಪರಮಾತ್ಮನ ಬಳಿ ನಮ್ಮ ಪಾಪಗಳನ್ನು ನಿವೇದಿಸಿ, ಅವುಗಳನ್ನು ಕ್ಷಮಿಸುವಂತೆ ಪ್ರಾರ್ಥಿಸಬೇಕು. ಇದೇ ಸ್ವರೂಪ ನಿಷ್ಠೆ.

ಪರಮಾತ್ಮನೊಬ್ಬನೇ ರಕ್ಷಕ ಎಂಬ ಭಾವನೆ ಜೀವಾತ್ಮನಲ್ಲಿರಬೇಕು. ಭಯ, ಪೀಡೆ, ರೋಗ ಉಂಟಾದಾಗಲೂ, ಈ ಶರೀರವು ನಾಶವಾದ ನಂತರ ಸುಖ ಸಿಗುತ್ತದೆ, ಮಾಡಬೇಕಾದ ಕೆಲಸವನ್ನು ಮಾಡಿದ್ದಾಯಿತು, ಭಗವಂತನನ್ನು ಹೊಂದುತ್ತೇನೆ ಎಂದು ತಿಳಿದು ಸಂತೋಷದಿಂದಿರಬೇಕು. ರಕ್ಷಕನಾದ ಭಗವಂತ ನಮ್ಮನ್ನು ರಕ್ಷಿಸುವುದು ಸತ್ಯ ಎಂಬ ಧೈರ್ಯ ಇರಬೇಕು. ಇದೇ ಉಪಾಯನಿಷ್ಠೆ.

ನಮ್ಮನ್ನು ಸೃಷ್ಟಿಸಿದ ಭಗವಂತನು ನಮ್ಮನ್ನು ರಕ್ಷಿಸುತ್ತಾನೆ. ಸಮುದ್ರವನ್ನು ದಾಟಿದರೂ, ಆಕಾಶದಲ್ಲಿ ಹಾರಿದರೂ, ಪಾತಾಳವನ್ನು ಹೊಕ್ಕರೂ, ನಮಗೆ ಸಿಗಬೇಕಾದುದೆಷ್ಟೋ ಅಷ್ಟು ಮಾತ್ರ ಸಿಗುತ್ತದೆ. ನಾವು ನೆನೆಸಿದಂತೆ ಎಲ್ಲವೂ ನಡೆಯುವುದಿಲ್ಲ. ನಾವೊಂದು ಯೋಚಿಸಿದರೆ ಭಗವಂತ ಮತ್ತೊಂದು ಯೋಚಿಸುತ್ತಾನೆ. ಜೀವನದಲ್ಲಿ ಎಲ್ಲವೂ ನಮ್ಮ ಕರ್ಮಗಳಿಗನುಗುಣವಾಗಿ ನಡೆಯುತ್ತದೆ ಎಂದು ತಿಳಿದು ದೇಹಯಾತ್ರೆಯ ವಿಷಯವಾಗಿ ಚಿಂತಿಸದೆ ಇರಬೇಕು. ಸಂಪಾದನೆಗಾಗಿ ತುಂಬಾ ಪ್ರಯತ್ನ ಪಡಬಾರದು. ನಾವಿರುವ ಜಾಗದಲ್ಲೇ ಇದ್ದು, ನಮ್ಮ ಪಾಲಿಗೆ ಬಂದುದನ್ನು ಇಟ್ಟುಕೊಂಡು ಜೀವನ ನಡೆಸಬೇಕು, ಕೈಗೆ ಎಟಕದಿರುವುದಕ್ಕೆ ಆಸೆ ಪಡಬಾರದು. ಸುಖ ಬಂದಾಗ ಗರ್ವಪಡಬಾರದು, ದುಃಖ ಬಂದಾಗ ಶೋಕಿಸಬಾರದು ಇದೇ ಪುರುಷಾರ್ಥ ನಿಷ್ಠೆ.

ಶರಣಾಗತಿ ಮಾಡಿದ ನಂತರ ದೇಹವಿಸರ್ಜನೆ ಆಗುವವರೆಗೆ ಶಾಸ್ತ್ರಾರ್ಥಗಳಲ್ಲಿ ನಿಷ್ಠೆಯುಳ್ಳ ಹಿರಿಯರ ಸಂಗದಲ್ಲಿದ್ದು, ಅವರ ಅನುಷ್ಠಾನಗಳನ್ನು ನೋಡಿ, ನಮ್ಮ ವರ್ಣಾಶ್ರಮಗಳಿಗೆ ಅನುಗುಣವಾದ ಧರ್ಮವನ್ನು ತಿಳಿದು ಅನುಷ್ಠಿಸಬೇಕು. ಆತ್ಮ ಪ್ರಶಂಸೆ, ಪರನಿಂದನೆ ಮಾಡಬಾರದು. ನಿತ್ಯಕರ್ಮಗಳನ್ನು ಮಾಡುತ್ತಾ, ಆಚಾರ್ಯವತಾರದಲ್ಲಿ ಮಗ್ನನಾಗಿರಬೇಕು. ಭಕ್ತರ ಸೇವೆ ಮಾಡುವುದು ಭಗವಂತನಿಗೆ ಇಷ್ಟವಾದುದರಿಂದ ಭಾಗವತ ಕೈಂಕರ್ಯಗಳನ್ನು ಮಾಡುತ್ತಿರಬೇಕು. ಭಗವಂತನು ಆದರಿಸಿ ಅನುಗ್ರಹಿಸಿರುವ, ಭಾಗವತರು ಸಂತೋಷದಿಂದ ವಾಸಿಸುವ, ಶ್ರೀರಂಗ, ತಿರುಮಲೆ, ಕಂಚಿ, ತಿರುನಾರಾಯಣಪುರ, ಮುಂತಾದ ಸ್ಥಳಗಳು ನಮಗೆ ಪುಣ್ಯತೀರ್ಥ ಎಂದು ಭಾವಿಸಬೇಕು.

ಆತ್ಮ, ಶರೀರಗಳ ವಿಷಯದಲ್ಲಿ ಯೋಚನೆ ಮಾಡಬೇಕಾದುದಿಲ್ಲ. ಅವುಗಳ ರಕ್ಷಣೆಯನ್ನು ಭಗವಂತನಿಗೆ ಒಪ್ಪಿಸಿಬಿಡಬೇಕು. ಪ್ರಪನ್ನನು ಭೂಲೋಕದಲ್ಲಿರುವ

ವರೆಗೆ ಶಾಸ್ತ್ರವಿಹಿತ ರೀತಿಯಲ್ಲಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಶ್ರೀಭಾಷ್ಯವನ್ನು ಅಧ್ಯಯನ ಮಾಡಿ ಪ್ರಚಾರ ಮಾಡುವುದು, ಭಗವಂತನ ಅರ್ಚಾಮೂರ್ತಿಗಳಿಗೆ ಹೂಮಾಲೆ, ನೈವೇದ್ಯ, ಗಂಧಗಳನ್ನು ಸಮರ್ಪಿಸುವುದು, ದ್ವಯಮಂತ್ರದ ಅರ್ಥವನ್ನು ಅನುಸಂಧಾನ ಮಾಡುವುದು, ಶ್ರೀವೈಷ್ಣವರಲ್ಲಿ ಹೆಚ್ಚು ಅಭಿಮಾನದಿಂದ ಇರುವುದು, ದಿವ್ಯ ಕ್ಷೇತ್ರಗಳಲ್ಲಿ ನೆಲಸುವುದು—ಇವು ಮುಖ್ಯವಾದ ಸೇವೆಗಳು.

ಪ್ರಪತ್ತಿಯಿಂದ ಸಂಚಿತ ಹಾಗೂ ಪ್ರಾರಬ್ಧ ಪಾಪಗಳೆಲ್ಲ ನಾಶವಾಗಿ, ಅಪೇಕ್ಷಿಸಿದ ಮುಕ್ತಿಯು ಸಕಾಲದಲ್ಲಿ ದೊರೆಯುತ್ತದೆ. ಅನಾದಿ ಕಾಲದಿಂದ ಸಂಪಾದಿಸಲ್ಪಟ್ಟ ಸಂಚಿತ ಪಾಪಗಳನ್ನು ಭಗವಂತನು ಶರಣಾಗತಿಯ ಮೊದಲನೆಯ ಕ್ಷಣದಲ್ಲಿಯೇ ಬೇರ್ಪಡಿಸುತ್ತಾನೆ. ಫಲವನ್ನು ನೀಡಲು ಆರಂಭಿಸಿರುವ ಪ್ರಾರಬ್ಧ ಪಾಪಗಳಲ್ಲಿ, ಮೋಕ್ಷ ಉಂಟಾಗುವವರೆಗೂ ಬೇಕಾದಷ್ಟನ್ನು ಉಳಿಸಿ, ಉಳಿದುವನ್ನು ನಾಶ ಮಾಡಿಬಿಡುತ್ತಾನೆ. ದೇಶ, ಕಾಲ, ಸ್ವಭಾವಗಳಿಂದ ಉಂಟಾಗುವ ಅಸೌಕರ್ಯ–ಅಜ್ಞಾನಗಳಿಂದ ಮಾಡುವ ಪಾಪಗಳ ಸಂಪರ್ಕವು ನಮಗೆ ಆಗದಂತೆ ಮಾಡುತ್ತಾನೆ. ತಿಳಿದು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತ ರೂಪವಾಗಿ ಪ್ರಪತ್ತಿ ಮಾಡಿದಾಗ ಇವುಗಳನ್ನೂ ಹೋಗಲಾಡಿಸುತ್ತಾನೆ. ಪ್ರಾಯಶ್ಚಿತ ರೂಪದಲ್ಲಿ ಪ್ರಪತ್ತಿ ಮಾಡದಿದ್ದಾಗ ಲಘುವಾಗಿ ಶಿಕ್ಷೆ ಕೊಟ್ಟು ಪಾಪಗಳನ್ನು ಕೊನೆಗಾಣಿಸುತ್ತಾನೆ ಹಾಗೂ ನರಕಪ್ರಾಪ್ತಿ ಆಗದಂತೆ ಪರಿಶುದ್ಧನನ್ನಾಗಿ ಮಾಡಿ ಮೋಕ್ಷ ಕೊಡುತ್ತಾನೆ.

ಪ್ರಪನ್ನನಿಗೆ ಅವಸಾನ ಕಾಲವು ಪ್ರಾಪ್ತವಾದಾಗ ಅವನ ಪುಣ್ಯ ಕರ್ಮ ಫಲವು ಅವನ ಸ್ನೇಹಿತರಿಗೂ, ಪಾಪಕರ್ಮ ಫಲವು ಅವನ ದ್ವೇಷಿಗಳಿಗೂ, ಹಂಚಲ್ಪಡುತ್ತವೆ. ನಂತರ ಕಾಲ ನಿರ್ಬಂಧವಿಲ್ಲದೆ ಭಗವಂತನು ಸಂಕಲ್ಪಿಸಿದ ಸಮಯದಲ್ಲಿ ಐದು ಕರ್ಮ ಮತ್ತು ಐದು ಜ್ಞಾನ ಇಂದ್ರಿಯಗಳು ಮನಸ್ಸಿನಲ್ಲಿ, ಮನಸ್ಸು ಪ್ರಾಣ ವಾಯುವಿನಲ್ಲಿ, ಪ್ರಾಣವಾಯುವು ಜೀವಾತ್ಮನಲ್ಲಿ, ಜೀವಾತ್ಮನು ಹೃದಯದಲ್ಲಿರುವ ಅಂತರ್ಯಾಮಿ ಪರಮಾತ್ಮನಲ್ಲಿ ಸೇರಿ, ಸ್ಥೂಲ ಶರೀರದಿಂದ ಉತ್ಕ್ರಮಿಸುತ್ತಾನೆ. ಸ್ವರ್ಗ–ನರಕಗಳಿಗೆ ಕೊಂಡೊಯ್ಯುವ ನಾಡಿಗಳಲ್ಲಿ ಜೀವನು ಹೋಗದೆ, ಅವನು ನೂರೊಂದನೆಯ ಬ್ರಹ್ಮನಾಡಿಯಲ್ಲಿ ಪ್ರವೇಶಿಸಿ ಹೊರ ಹೊರಡುತ್ತಾನೆ. ಇದೆಲ್ಲ ಭಗವಂತನ ಅನುಗ್ರಹದಿಂದಲೇ ಆಗುವಂತಹುದು.

ಬ್ರಹ್ಮ ನಾಡಿಯ ಮೂಲಕ ಹೊರ ಹೊರಟ ಜೀವಾತ್ಮನು ದೇವಯಾನ ಮಾರ್ಗದಲ್ಲಿ ಹೋಗುವಂತೆ ಭಗವಂತನು ಮಾರ್ಗದರ್ಶನ ಮಾಡುತ್ತಾನೆ. ಆಮೇಲೆ ಸೂಕ್ಷ್ಮ ಶರೀರವನ್ನು ಬಿಡಿಸಿ, ವಿರಜಾ ನದಿಯನ್ನು ದಾಟಿಸಿ, ಅಪ್ರಾಕೃತ ಶರೀರವನ್ನು ಕೊಟ್ಟು, ಶ್ರೀವೈಕುಂಠಕ್ಕೆ ಕರೆಸಿಕೊಂಡು ತನ್ನ ದರ್ಶನ ನೀಡಿ, ಸ್ವೀಕರಿಸಿ, ಅವನು ಮತ್ತೆ ಅಲ್ಲಿಂದ ಹಿಂದಿರುಗದಂತೆ ಮಾಡುತ್ತಾನೆ.

ಸರ್ವದೇಶ, ಸರ್ವಕಾಲ, ಸರ್ವ ಅವಸ್ಥೆಗಳಲ್ಲಿಯೂ ಸರ್ವೇಶ್ವರನನ್ನು ಅವನ ವಿಗ್ರಹ, ಗುಣ, ವಿಭೂತಿಗಳಲ್ಲಿ ಪೂರ್ಣವಾಗಿ ಅನುಭವಿಸಿ ಅವನಿಗೆ ಕೈಂಕರ್ಯ

ಾಡುತ್ತಿರುವುದು ಮೋಕ್ಷ. ಈ ಅನುಭವವು ವೈಕುಂಠ ಅಥವಾ ಪರಮಪದಕ್ಕೆ ೇದಾಗ ಮಾತ್ರ ಉಂಟಾಗುತ್ತದೆ. ಅಲ್ಲಿ ಪರಮಾತ್ಮ, ನಿತ್ಯರಿಗೆ ಉಂಟಾಗುವ ಂದವೇ ಮುಕ್ತರಿಗೂ ಸಿಗುತ್ತದೆ.

ಲಕ್ಷ್ಮೀಸಹಿತನಾದ ನಾರಾಯಣನೇ ಸಿದ್ಧೋಪಾಯ, ಶಾಸ್ತ್ರವು ಹೇಳು ಕೆಯೇ ಪ್ರಪನ್ನನು ನಡೆದುಕೊಳ್ಳಬೇಕು. ಆದರೂ ಭಾಗವತ ಪ್ರಭಾವವನ್ನು ಯವಾಗಿ ಪರಿಗಣಿಸಬಾರದು.

೩

ಶ್ರಿಯಃಪತಿಯಾದ ನಾರಾಯಣನ ಪಾದಾರವಿಂದಗಳನ್ನು ಸೇರಬೇಕೆಂದು ೀಕ್ಷಿಸುವ ಮುಮುಕ್ಷುವಿಗೆ, ತತ್ತ್ವಹಿತ ಪುರುಷಾರ್ಥಗಳ ಸ್ವರೂಪವನ್ನು ಸಂಶಯ- ರ್ಯಾಸಗಳಿಗೆ ಅವಕಾಶವಿಲ್ಲದಂತೆ ಯಥಾವತ್ತಾಗಿ ತಿಳಿಸುವ ಈ ರಹಸ್ಯತ್ರಯ ತ್ರಗಳ ಜ್ಞಾನವು ಅತ್ಯವಶ್ಯಕವಾದುದು. ಇದು ಸದಾಚಾರ್ಯಾಭಿಮಾನ ಪುರಸ್ಸರ ರ ಉಪದೇಶ ಮೂಲಕ ಪ್ರಾಪ್ತವಾದಾಗ ಮಾತ್ರ ಶ್ರೇಷ್ಠವೆನಿಸಿ ಫಲಪ್ರದ ಗುತ್ತದೆ ಎಂಬುದು ಹಿರಿಯರ ಅಭಿಪ್ರಾಯ.

ವೇದದಲ್ಲಿ ಒಂದು ಭಾಗವಾದ ಮೂಲಮಂತ್ರವು ಸಮಸ್ತ ವೇದಪ್ರತಿಪಾದ್ಯ ಸಂಗ್ರಹರೂಪ ಆಗಿದೆ. ಪರಮ ಗುಹ್ಯ, ಪರಮಪವಿತ್ರ, ಶ್ರೇಷ್ಠ, ವ್ಯಾಪಕ ರುವ ಈ ಮೂಲ ಮಂತ್ರಕ್ಕೆ ಮಹರ್ಷಿಗಳು, ಆಳ್ವಾರುಗಳು, ಆಚಾರ್ಯರುಗಳು ನ ಪ್ರಾಮುಖ್ಯ ನೀಡಿದ್ದಾರೆ. ತತ್ತ್ವವನ್ನು ತಿಳಿಸುವ ಮೂಲಮಂತ್ರದ ಖ್ಯಾನರೂಪವಾದ ದ್ವಯಮಂತ್ರವು ಪುರುಷಾರ್ಥವನ್ನೂ, ದ್ವಯ ಮಂತ್ರದ ರಣವಾದ ಚರಮ ಶ್ಲೋಕ ಮಂತ್ರವು ಹಿತವನ್ನೂ, ತಿಳಿಸುತ್ತವೆ. ಮೂಲಮಂತ್ರ ಸರ್ವೇಶ್ವರನು ಬದರಿಕಾಶ್ರಮದಲ್ಲಿ ನಾರಾಯಣ ರೂಪದಿಂದ ತನ್ನ ಅಂಶಭೂತ ನರನಿಗೆ ಉಪದೇಶಿಸಿದನು, ದ್ವಯಮಂತ್ರವನ್ನು ವರಾಹನಾಗಿ ಭೂದೇವಿಗೆ, ರಮಶ್ಲೋಕ ಮಂತ್ರವನ್ನು ಶ್ರೀರಾಮನಾಗಿ ವಿಭೀಷಣನಿಗೂ, ಶ್ರೀಕೃಷ್ಣನಾಗಿ ್ಜನನಿಗೂ, ನಾರಾಯಣನೇ ಉಪದೇಶಿಸಿದ್ದಾನೆ.

ಮಂತ್ರ ಎಂಬ ಶಬ್ದಕ್ಕೆ, ಮಂತಾರಂ ತ್ರಾಯತೇ ಎಂಬಂತೆ, ಅದನ್ನು ಜಪಿಸು ನನ್ನು ಕಾಪಾಡುತ್ತದೆ ಎಂದು ಅರ್ಥ. ಮಂತ್ರಗಳ ಉಚ್ಚಾರ ಮಾತ್ರದಿಂದಲೇ ನರನ್ನು ಉದ್ಧರಿಸುವ ಶಕ್ತಿಯುಳ್ಳದ್ದಾಗಿದ್ದು, ಅವುಗಳ ಅರ್ಥಾನುಸಂಧಾನದಿಂದ ನ, ಆತ್ಮಗುಣಗಳನ್ನು ವೃದ್ಧಿಪಡಿಸಿ, ಒಂದೇ ಜನ್ಮದಲ್ಲಿ ಮೋಕ್ಷವನ್ನು ಸಾಧಿಸಿ ುತ್ತದೆ ಎಂದೂ ಅರ್ಥವಾಗುತ್ತದೆ. ಮೇಲೆ ಹೇಳಿದ ಮೂರು ಮಂತ್ರಗಳೂ ಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸುವ ಶ್ರೀವೈಷ್ಣವರಿಗೆ ನಿತ್ಯಾನುಷ್ಠಾನ ಳೆಂಬುದಾಗಿ, ಪೂರ್ವಾಚಾರ್ಯರುಗಳಿಂದ ನಿಷ್ಕರ್ಷಿಸಲ್ಪಟ್ಟಿವೆ.

## ಮೂಲ ಮಂತ್ರ

ಸವ್ಯಂ ಪಾದಂ ಪ್ರಸಾರ್ಯಶ್ರಿತದುರಿತಹರಂ ದಕ್ಷಿಣಂ ಕುಂಚಯಿತ್ವಾ
ಜಾನುನ್ಯಾಧಾಯ ಸವ್ಯೇತರಮಿತರಭುಜಂ ನಾಗಭೋಗೇನಿಧಾಯ ।
ಪಶ್ಚಾದ್ಬಾಹುದ್ವಯೇನ ಪ್ರತಿಭಟ ಶಮನೇ ಧಾರಯನ್ ಶಂಖ ಚಕ್ರೇ
ದೇವೀಭೂಷಾದಿ ಜುಷ್ಟೋಜನಯತು ಜಗತಾಂಶರ್ಮ ವೈಕುಂಠನಾಥಃ ॥

(ಆಶ್ರಿತರುಗಳ ಪಾಪನಾಶಕನಾದ, ಎಡಪಾದವನ್ನು ನೀಡಿ ಬಲ ಪಾದವನ್ನು ಬಗ್ಗಿಸಿಕೊಂಡು, ಬಲ ಮಂಡಿಯ ಮೇಲೆ ಬಲಹಸ್ತವನ್ನು ಇಟ್ಟು, ಎಡಗೈಯನ್ನು ಆದಿಶೇಷನ ಮೇಲೆ ಊರಿ, ಹಿಂಭಾಗದ ಹಸ್ತದ್ವಯಗಳಿಂದ ಶತ್ರುನಾಶಕಗಳಾದ ಶಂಖಚಕ್ರಗಳನ್ನು ಧರಿಸಿದವನಾಗಿ, ಶ್ರೀಭೂದೇವಿಯರಿಂದಲೂ, ಆಭರಣ ಗಳಿಂದಲೂ, ಸೇವಿತನಾದ ವೈಕುಂಠನಾಥನಾದ ನಾರಾಯಣನು ಜಗತ್ತಿಗೆ ಸುಖವ ನ್ನುಂಟು ಮಾಡಲಿ)

"ಓಂ ನಮೋ ನಾರಾಯಣಾಯ" ಎಂಬೀ ಅಷ್ಟಾಕ್ಷರಗಳಿಂದ ಕೂಡಿರುವುದು ಪ್ರಸಿದ್ಧವಾದ ಮೂಲಮಂತ್ರ. ಇದರಲ್ಲಿನ ಓಂ ಎಂಬ ಪದವು ಅ, ಉ, ಮ್ ಎಂಬ ಮೂರು ಅಕ್ಷರಗಳ ಸಂಯೋಗದಿಂದ ಆಗಿದೆ. ಓಂ ಎಂಬ ಪ್ರಣವವು ಸಕಲ ವೇದ ಗಳ ಸಾರ ಸಂಗ್ರಹವಾದುದು. ಸಕಲ ವೇದ ಶಾಸ್ತ್ರಗಳೂ ಅರ್ಥಪಂಚಕವನ್ನೇ ಪ್ರತಿ ಪಾದಿಸುವುದರಿಂದ, ಅದರ ಸಂಗ್ರಹ ರೂಪವಾದ ಮೂಲಮಂತ್ರದಲ್ಲಿಯೂ ಅರ್ಥ ಪಂಚಕವು ಪ್ರತಿಪಾದಿಸಲ್ಪಟ್ಟಿದೆ.

ಸಕಲ ವೇದಗಳೂ, ಸ್ವರಗಳೂ, ಸ್ಥಾವರ ಜಂಗಮಾತ್ಮಕ ಪ್ರಪಂಚವೂ ಓಂಕಾರದಿಂದಲೇ ಉತ್ಪನ್ನವಾಗಿವೆ.

ಜಗತ್ತಿನ ಉತ್ಪತ್ತಿ, ರಕ್ಷಣ, ನಾಶಗಳಿಗೆಲ್ಲ ಕಾರಣಭೂತನಾದ, ಲಕ್ಷ್ಮೀ ವಿಶಿಷ್ಟ ನಾದ, ವಿಷ್ಣುವು ಅಕಾರ ವಾಚ್ಯನು ; ನಿತ್ಯ, ಮುಕ್ತ, ಬದ್ಧ ಎಂಬ ತ್ರಿವಿಧ ಚೇತನ ವರ್ಗವು ಮಕಾರ ವಾಚ್ಯವು ; ಜ್ಞಾನ ರೂಪಿ, ಜ್ಞಾನಾಶ್ರಯ, ಮಕಾರ ಶಬ್ದ ಆದ ಜೀವನೂ, ಜೀವಾತ್ಮನಿಗೆ ಉಪಕರಣವಾದ ಶುದ್ಧ ಸತ್ವ, ಮಿಶ್ರ ಸತ್ವ, ಸತ್ವ ಶೂನ್ಯ ಎಂಬ ಭೇದದಿಂದ ಮೂರು ಪ್ರಕಾರವಾದ ಅಚೇತನವೂ, ವಿಷ್ಣುವಿಗೇ ಶೇಷಭೂತ ವಾದುದು ; ಅಕಾರ–ಮಕಾರ ವಾಚ್ಯರಾದ ಪರಮಾತ್ಮ–ಜೀವಾತ್ಮರುಗಳ ಸಂಬಂಧವು ಅನನ್ಯಾರ್ಹವೆಂದು ಉಕಾರ ಹೇಳುತ್ತದೆ,

ಸರ್ವಲೋಕ್ಷ ನಿಯಾಮಕನಾದ ವಿಷ್ಣುವೇ ಅಕಾರಾರ್ಥವು, ಲಕ್ಷ್ಮಿಯೇ ಉಕಾರಾರ್ಥವು, ಲಕ್ಷ್ಮೀಸಮೇತನಾದ ನಾರಾಯಣನಿಗೆ ದಾಸನಾದ ಜೀವಾತ್ಮನೇ ಮಕಾರ ಶಬ್ದಾರ್ಥವು.

ಅಕಾರವು ಪಿತಾಪುತ್ರ, ರಕ್ಷ್ಯರಕ್ಷಕ, ಶೇಷಶೇಷಿತ ಸಂಬಂಧವನ್ನೂ ಉಕಾರವು ಭರ್ತೃಭಾರ್ಯಾ ಸಂಬಂಧವನ್ನೂ, ಮಕಾರವು ಜ್ಞಾತೃಜ್ಞೇಯ ಸಂಬಂಧವನ್ನೂ, ಸೂಚಿಸುತ್ತವೆ.

ನ, ಮಃ ಎಂಬೆರಡು ಅಕ್ಷರಗಳಿಂದ ಆದ ನಮಃ ಎಂಬ ಪದವು ಆತ್ಮನ ಸಂಪೂರ್ಣವಾದ ಪಾರತಂತ್ರ್ಯವನ್ನು ಅಥವಾ ಭಗವಂತನಲ್ಲಿ ಆತ್ಮ ಸಮರ್ಪಣ ಪೂರ್ವಕವಾದ ಶರಣಾಗತಿಯನ್ನು ಸೂಚಿಸುತ್ತದೆ. ಇದರಲ್ಲಿ ಸ್ವ–ಸ್ವಾಮಿ ಸಂಬಂಧವು ಸೂಚಿತವಾಗಿದೆ.

ನಾರ, ಅಯನ, ಆಯ ಎಂಬ ಮೂರು ಪದಗಳಿಂದ ನಾರಾಯಣಾಯ ಎಂಬ ಪದವು ಆಗಿದೆ. ನಿತ್ಯವಿಭೂತಿ ಮತ್ತು ಲೀಲಾವಿಭೂತಿಗಳಲ್ಲಿ ಇರುವ ಸಮಸ್ತ ಶಾಶ್ವತ ವಸ್ತುಗಳ ಸಮೂಹವನ್ನು ನಾರ ಶಬ್ದವು ಸೂಚಿಸುತ್ತದೆ. ಅಯನ ಶಬ್ದವು ಮೇಲೆ ಹೇಳಿದ ವಸ್ತುಗಳಿಗೆ ಆಶ್ರಯನೆಂಬುದನ್ನು ಸೂಚಿಸುತ್ತದೆ. ಅಂದರೆ ಜಗದಾಶ್ರಯನು, ಸರ್ವಸ್ವಾಮಿಯು ಎಂಬ ಅರ್ಥವನ್ನು ನಾರಾಯಣ ಎಂಬ ಪದವು ಪ್ರತಿಪಾದಿಸುತ್ತದೆ. ಆಯ ಎಂಬ ಪದವು ಭಗವದ್ದಾಸ್ಯವನ್ನು ಪ್ರಾರ್ಥಿಸುವುದು ಎಂಬ ಅರ್ಥಸೂಚಕ ವಾಗಿದೆ. ಒಟ್ಟಿನಲ್ಲಿ ನಾರ ಎಂಬ ಶಬ್ದದಿಂದ ಶರೀರಿ–ಶರೀರ ಸಂಬಂಧವೂ, ಅಯನ ಶಬ್ದದಿಂದ ಆಧಾರ–ಆಧೇಯ ಸಂಬಂಧವೂ ಆಯ ಶಬ್ದದಿಂದ ಭೋಕ್ತೃ–ಭೋಗ್ಯ ಸಂಬಂಧವೂ ಸೂಚಿತವಾಗಿದೆ.

ಹೀಗೆ ಈ ತಿರುಮಂತ್ರದಲ್ಲಿ ಈಶ್ವರ–ಚೇತನರ ಮಧ್ಯೆ ಇರುವ ನವ ವಿಧ ಸಂಬಂಧಗಳೂ ವ್ಯಕ್ತಪಡಿಸಲ್ಪಟ್ಟಿವೆ. ಜೀವಾತ್ಮ ಸ್ವರೂಪ ಹಾಗೂ ಸ್ವರೂಪಾನು ರೂಪವಾದ ಪರಮಪುರುಷಾರ್ಥವೆನಿಸಿದ ಭಗವತ್ಕೈಂಕರ್ಯ ಇದರಲ್ಲಿ ಪ್ರತಿಪಾದಿತ ವಾಗಿದೆ. ಆದುದರಿಂದಲೇ ಇದು ಮುಮುಕ್ಷುವಿಗೆ ನಿತ್ಯಾನುಸಂಧೇಯವಾದುದು.

ಈ ಮೂಲ ಮಂತ್ರದ ಓಂ ಶಬ್ದದಲ್ಲಿ ಶೇಷತ್ವ, ನಮಃ ಶಬ್ದದಲ್ಲಿ ಪಾರತಂತ್ರ್ಯ, ನಾರಾಯಣಾಯ ಶಬ್ದದಲ್ಲಿ ಕೈಂಕರ್ಯ, ಎಂಬ ಮೂರು ಪ್ರಧಾನ ಅರ್ಥಗಳು ಸೂಚಿಸಲ್ಪಟ್ಟಿವೆ. ಜೀವಾತ್ಮನು ಸ್ವತಂತ್ರನಲ್ಲ, ನಾರಾಯಣನಿಗೆ ಶೇಷಭೂತನು. ಜೀವಾತ್ಮನಿಗೆ ಭಗವಂತನೇ ರಕ್ಷಕನು. ಸ್ವಾರ್ಥ–ಭೋಗಗಳಿಗಾಗಿ ಆಸೆ ಪಡದೆ, ಸರ್ವ ಶೇಷಿಯಾದ ನಾರಾಯಣನಿಗಾಗಿಯೇ ಸಕಲವಿಧ ಕೈಂಕರ್ಯಗಳೂ ಮಾಡಲ್ಪಡಬೇಕು. ಆದುದರಿಂದ ನಾನು ಸ್ವತಂತ್ರನಲ್ಲ, ವಿಷ್ಣುವಿಗೇ ಶೇಷಭೂತ, ನನ್ನನ್ನು ರಕ್ಷಿಸು ವವನು ನಾನಲ್ಲ, ಭಗವಂತ. ನನ್ನ ಸ್ವಾರ್ಥವನ್ನು ಬಿಟ್ಟು ಸರ್ವವಿಧ ಕೈಂಕರ್ಯ ಗಳನ್ನೂ ಸರ್ವಶೇಷಿಯಾದ ನಾರಾಯಣನಿಗೇ ಮಾಡುತ್ತೇನೆ ಎಂಬುದಾಗಿ ಜೀವಾತ್ಮರು ಯಾವಾಗಲೂ ಹೇಳುತ್ತಿರಬೇಕು.

ಸಕಲಕಾರಣ ಭೂತ, ಸರ್ವಶೇಷಿ, ಸರ್ವರಕ್ಷಕ, ಸರ್ವಮೋಕ್ಷದಾಯಕ, ಲಕ್ಷ್ಮೀ ಸಹಿತ ಆದ ಶ್ರೀಮನ್ನಾರಾಯಣನಿಗೆ ಮಾತ್ರ ಸೇವಕನಾದ ನಾನು, ನನ್ನದೆಂಬ ಸ್ವಾರ್ಥದಿಂದ ವಿಮುಕ್ತನಾಗಿ, ಸರ್ವ ಸ್ವಾಮಿಯಾದ ನಾರಾಯಣನಿಗೆ ಅನವರತವೂ ಸಕಲ ಕೈಂಕರ್ಯ–ಸೇವೆಗಳನ್ನು ಸಲ್ಲಿಸುವಂತಹ ಸೌಭಾಗ್ಯ ನನಗೆ ಒದಗಲಿ, ಎಂಬುದೇ ಈ ಮೂಲ ಮಂತ್ರದ ತಿರುಳು.

## ದ್ವಯಮಂತ್ರ

ಕ್ಷೀರಾಂಭೋನಿಧಿ ರತ್ನಮಂಟಪ ಮಹಾ ಸೌವರ್ಣ ಸಿಂಹಾಸನೇ
ವಾಮಾಂಕೇಸ್ಥಿತಯಾ ಪ್ರಸನ್ನವದನಂ ಶ್ರೀಕಾಂತಯಾಲಿಂಗಿತಂ ।
ದೋರ್ದಂಡಾಂಕಿತ ಶಂಖ ಪಂಕಜ ಗದಾ ಚಕ್ರೈರುದಾರ ಶ್ರಿಯಂ
ತ್ವಾಂ ನಿತ್ಯಂ ಕಲಯಾಮಿ ಜನ್ಮವಿಮುಖೋ ಲಕ್ಷ್ಮೀಶ ನಾರಾಯಣ ॥

(ಕ್ಷೀರ ಸಮುದ್ರ ಮಧ್ಯವರ್ತಿಯಾದ ರತ್ನಮಂಟಪದಲ್ಲಿ, ಸ್ವರ್ಣಸಿಂಹಾಸನಾರೂಢನಾಗಿ, ಎಡತೊಡೆಯ ಮೇಲೆ ಕುಳಿತಿರುವ ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿ, ಆ ಕಾರಣದಿಂದ ನಿರ್ಮಲವಾದ ಮುಖಮಂಡಲವುಳ್ಳವನಾಗಿಯೂ, ಬಾಹುದಂಡಗಳಲ್ಲಿ ಪ್ರಕಾಶಿಸುತ್ತಿರುವ ಶಂಖ, ಕಮಲ, ಗದೆ, ಚಕ್ರ ಮುಂತಾದುವುಗಳಿಂದ ಪ್ರಕಾಶಿಸುವನಾಗಿಯೂ ಇರುವ ನಿನ್ನನ್ನು, ಎಲೈ ಶ್ರಿಯಃಪತಿಯಾದ ನಾರಾಯಣನೇ, ಮತ್ತೆ ಜನ್ಮಜರಾಮರಣಗಳಿಲ್ಲದ ನಾನು ಧ್ಯಾನಿಸುತ್ತಿದ್ದೇನೆ.)

ಈಶಾನಾಂ ಜಗತಾಮಧೀಶದಯಿತಾಂ ನಿತ್ಯಾನಪಾಯಾಂ ಶ್ರಿಯಂ
ಸಂಶಿತ್ಯಾಶ್ರಯಣೋಚಿತಾಖಿಲ ಗುಣಸ್ಯಾಂಘ್ರೀ ಹರೇರಾಶ್ರಯೇ ।
ಇಷ್ಟೋಪಾಯ ತಯಾ ಶ್ರಿಯಾಚ ಸಹಿತಾಯಾತ್ಮೇಶ್ವರಾಯಾರ್ಥಯೇ
ಕರ್ತುಂದಾಸ್ಯ ಮಶೇಷಮಪ್ರತಿಹತಂ ನಿತ್ಯಂತ್ವಹಂ ನಿರ್ಮಮಃ ॥

(ಜಗತ್ತಿಗೆ ನಾಯಕಿಯಾಗಿಯೂ, ಸರ್ವೇಶ್ವರನಿಗೆ ಇಷ್ಟಳಾದ ವಲ್ಲಭೆಯಾಗಿಯೂ, ಸರ್ವೇಶ್ವರನೊಂದಿಗೆ ನಿತ್ಯ ಸಂಬಂಧವುಳ್ಳವಳಾಗಿಯೂ ಇರುವ ಲಕ್ಷ್ಮೀದೇವಿಯನ್ನು ಶರಣು ಹೊಂದಿ, ಸಕಲ ಕಲ್ಯಾಣ ಗುಣ ಪರಿಪೂರ್ಣನಾದ ನಾರಾಯಣನ ಪಾದಗಳನ್ನು ಇಷ್ಟಪೂರ್ತಿಗಾಗಿ ಆಶ್ರಯಿಸುತ್ತೇನೆ. ಲಕ್ಷ್ಮೀಸಹಿತ, ಸರ್ವಶೇಷಿ, ಆದ ನಾರಾಯಣನಿಗೆ ನಾನು ಅಹಂಕಾರ–ಮಮಕಾರಗಳು ಇಲ್ಲದವನಾಗಿ ಸಕಲ ಕೈಂಕರ್ಯಗಳನ್ನೂ ನಿರ್ವಿಘ್ನವಾಗಿ ಮಾಡಲು ಅಪೇಕ್ಷೆಯುಳ್ಳವನಾಗಿದ್ದೇನೆ.)

ಲಕ್ಷ್ಮೀವಿಶಿಷ್ಟನಾದ ನನ್ನೊಬ್ಬನನ್ನೇ ಭಕ್ತಿಯಿಂದ ಯಾವ ಮನುಷ್ಯನು, ಮಂತ್ರರತ್ನವೆಂದು ಪ್ರಸಿದ್ಧವಾದ, ನನಗೆ ಇಷ್ಟವಾದ, ದ್ವಯ ಮಂತ್ರದಿಂದ ಶರಣು ಹೋಗುವನೋ, ಅಂತಹವನು ಈ ಲೋಕದಲ್ಲಿ ಮತ್ತೆ ಹುಟ್ಟದೆ ನನ್ನ ಅನುಗ್ರಹದಿಂದ ವೈಕುಂಠವೆಂಬ ನನ್ನ ಲೋಕವನ್ನು ಹೊಂದುತ್ತಾನೆ. ಅಂದರೆ ದೇವಶ್ರೇಷ್ಠರಿಗೂ ನಾಯಕನಾದ, ಲಕ್ಷ್ಮೀಪತಿಯಾದ, ನನ್ನನ್ನು ದ್ವಯಮಂತ್ರದಿಂದ ಶರಣು ಹೊಂದಿದದನು ಯೋಗ್ಯ–ಅಯೋಗ್ಯ, ವಿದ್ವಾಂಸ–ಮೂರ್ಖ ಎಂಬ ತಾರತಮ್ಯವಿಲ್ಲದೆ, ಪರಮ ಪದದಲ್ಲಿ ಮೋಕ್ಷ ಸಾಮ್ರಾಜ್ಯವನ್ನು ಪಡೆಯುತ್ತಾನೆ ಎಂಬುದಾಗಿ ಭಗವಂತನು ಹೇಳಿದ್ದಾನೆ.

"ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ
ಶ್ರೀಮತೇನಾರಾಯಣಾಯ ನಮಃ ॥"

ಎಂಬೀ ಇಪ್ಪತ್ತೈದು ಅಕ್ಷರಗಳು, ಆರು ಪದಗಳು, ಎರಡು ವಾಕ್ಯಗಳಿಂದ ಕೂಡಿದೆ ದ್ವಯಮಂತ್ರ.

ನಾರಾಯಣನಿಗೆ ನಿತ್ಯಾನಪಾಯಿನಿಯಾಗಿ ಯಾವಾಗಲೂ ಅವನ ಹೃದಯದಲ್ಲಿ ವಾಸ ಮಾಡುತ್ತಿರುವ ಮಹಾಲಕ್ಷ್ಮಿಯ ಪುರುಷಕಾರತ್ವವು ಶ್ರೀ ಎಂಬ ಪದ ದಿಂದಲೂ, ಪರಮಾತ್ಮನ ವಾತ್ಸಲ್ಯ ಕಾರುಣ್ಯಾದಿ ಕಲ್ಯಾಣ ಗುಣಗಳು ಶ್ರೀಯುತ ವಾದಾಗ ಪ್ರಕಾಶವಾಗಿ, ಶರಣಾಗತರಾದ ಜನರು ಪಾಪಿಷ್ಠರಾದಾಗ್ಯೂ ಸುಲಭವಾಗಿ ಉದ್ಧರಿಸಲ್ಪಡುವರು ಎಂಬ ಅರ್ಥವು ನಾರಾಯಣ ಪದದಿಂದಲೂ, ಪರಮಾತ್ಮನ ದಿವ್ಯಮಂಗಳ ವಿಗ್ರಹ ಸ್ವರೂಪವನ್ನೂ ಆ ದಿವ್ಯ ಮಂಗಳ ವಿಗ್ರಹದಲ್ಲಿ ಅವನ ದಿವ್ಯ ಪಾದ ಯುಗಳವೇ ಜೀವಕೋಟಿಗೆ ಆಶ್ರಯಣೀಯವೆಂಬುದನ್ನು ಚರಣೌ ಪದವೂ, ಪರಮಾತ್ಮನ ದಿವ್ಯ ಮಂಗಳ ವಿಗ್ರಹವೇ ಉಪಾಯವು ಎಂಬುದನ್ನು ಶರಣಂ ಪದವೂ, ಉಪಾಯವನ್ನು ಸ್ವೀಕರಿಸಿದ ಅಧಿಕಾರಿಯ ದೃಢ ನಿಶ್ಚಯವನ್ನು ಪ್ರಪದ್ಯೇ ಪದವೂ, ಲಕ್ಷ್ಮೀನಾರಾಯಣ ಸ್ವರೂಪಿಯಾದ ದಿವ್ಯ ದಂಪತಿಗಳೇ ಪ್ರಾಪ್ಯವು ಎಂಬು ದನ್ನು ಶ್ರೀಮತ್ ಪದವೂ, ಪರಮಾತ್ಮನ ಸರ್ವಸ್ವಾಮಿತ್ವವನ್ನು ನಾರಾಯಣ ಪದವೂ, ಪರಮಾತ್ಮನ ಚರಣಾರವಿಂದಗಳಲ್ಲಿ ಕೈಂಕರ್ಯ ವೃತ್ತಿ ವಿಶೇಷವನ್ನು ಆಯ ಪದವೂ, ಕೈಂಕರ್ಯ ವೃತ್ತಿ ವಿರೋಧಿಯಾದ ಅಹಂಕಾರ–ಮಮಕಾರ ನಿವೃತ್ತಿ ಪ್ರಾರ್ಥನೆಯನ್ನು ನಮಃ ಪದವೂ ಸೂಚಿಸುತ್ತವೆ.

ತನ್ನದೆಂಬುದು ಏನೂ ಇಲ್ಲ ಎಂಬ ನಿರಹಂಕಾರ ಭಾವದಿಂದ ಕೂಡಿದ್ದು, ದೇವರನ್ನು ಬಿಟ್ಟರೆ ಬೇರೆ ಗತಿಯಿಲ್ಲ ಎಂಬುದಾಗಿ ಸ್ವಾಮಿಯಲ್ಲಿ ಅತ್ಯಂತ ವಿನಯ–ದೈನ್ಯತೆಗಳಿಂದ ಇರುವುದು, ದ್ವಯಮಂತ್ರದ ಉಪದೇಶವನ್ನು ಪಡೆದವನ ಲಕ್ಷಣ ವಾಗಿರುತ್ತದೆ. ಜಗನ್ಮಾತೆಯಾದ ಶ್ರೀ ಮಹಾಲಕ್ಷ್ಮಿಯ ಕಟಾಕ್ಷ ಅಥವಾ ಮಧ್ಯಸ್ತಿಕೆ ಯಿಂದ ಮಾತ್ರ ಗುರಿಯನ್ನು ಮುಟ್ಟುವುದು ಸಾಧ್ಯ ಎಂಬುದನ್ನು ಈ ಮಂತ್ರವು ತಿಳಿಸುತ್ತದೆ.

ಶ್ರೀ ಮಹಾಲಕ್ಷ್ಮಿಯನ್ನು ಪುರುಷಕಾರತ್ವದಿಂದ ಆಶ್ರಯಿಸಿ, ಅವಳಿಂದ ನಿತ್ಯ ಸಂಶ್ಲೇಷವುಳ್ಳ, ಸಕಲ ಕಲ್ಯಾಣಗುಣ ಪರಿಪೂರ್ಣನಾದ, ನಾರಾಯಣನ ಪಾದಗಳನ್ನು ಉಪಾಯವಾಗಿ ಹೊಂದುತ್ತೇನೆ. ನನಗೋಸ್ಕರ ಏನೂ ಮಾಡದೆ ಪ್ರಾಪ್ಯ ಭೂತೆ ಯಾದ ಲಕ್ಷ್ಮಿಯ ನಿತ್ಯ ಸಂಬಂಧವುಳ್ಳ, ಸರ್ವಶೇಷಿಯಾದ ನಾರಾಯಣನಿಗೆ ಸರ್ವವಿಧ ಕೈಂಕರ್ಯವನ್ನೂ ಮಾಡುತ್ತೇನೆ ಎಂಬುದನ್ನೂ ಈ ಮಂತ್ರವು ತಿಳಿ ಸುತ್ತದೆ.

ಪ್ರಗತಿ, ಐಶ್ವರ್ಯ, ಆತ್ಮ ಪ್ರಶಂಸೆ ಮೊದಲಾದ ಲೌಕಿಕ ಸ್ವಾರ್ಥಸುಖಗಳ ಸಾಂಸಾರಿಕ ಸಂಬಂಧಗಳನ್ನೆಲ್ಲ ಬದಿಗೊತ್ತಿ, ಸ್ವಾಮಿಯೇ ಸಾಧನ, ಅನನ್ಯ ರಕ್ಷಕ

ಎಂದು ನಂಬಿ, ಎಂದಿಗೂ ಗುರಿ ತಪ್ಪುವುದಿಲ್ಲ ಎಂಬ ದೃಢ ನಂಬಿಕೆಯಿಂದ ಅವಿಚ್ಛಿನ್ನ ವಾಗಿ ಭಗವಂತನೆಡೆಗೆ ಸಾಗುತ್ತ. ಸದಾ ಸೇವಾ ತತ್ಪರನಾಗಿ, ನಾರಾಯಣನಿಗೆ ಕೈಂಕರ್ಯ ಮಾಡುತ್ತ, ಮಂತ್ರವನ್ನು ಜಪಿಸುತ್ತ, ಭಗವಂತನ ಜ್ಞಾನವನ್ನು ಪಡೆದಿ ರುವ ಪರಮ ಭಾಗವತರ ಸತ್ಸಂಗದಲ್ಲಿದ್ದು, ಸಂತುಷ್ಟಿ—ವೈರಾಗ್ಯಗಳಿಂದ ಜೀವಿಸು ವುದು ಶ್ರೀ ವೈಷ್ಣವನ ಅನಿವಾರ್ಯ ಆವಶ್ಯಕತೆಗಳು.

## ಚರಮಶ್ಲೋಕ ಮಂತ್ರ

ನಿಶ್ಚಿತ್ಯತ್ವದಧೀನತಾಮಯಿ ಸದಾ ಕರ್ಮಾದ್ಯುಪಾಯಾನ್ ಹರೇ
ಕರ್ತುಂತ್ಯಕ್ತುಮಪಿ ಪ್ರಪತ್ತು ಮನಲಂ ಸೀದಾಮಿ ದುಃಖಾಕುಲಃ ।
ಏತತ್ ಜ್ಞಾನ ಮುಪೇಯುಷೋಮಮಪುನಸ್ಸರ್ವಾಪರಾಧಕ್ಷಯಂ
ಕರ್ತಾಸೀತಿ ದೃಢೋಽಸ್ಮಿತೇತು ಽಚರಮಂ ವಾಕ್ಯಂ ಸ್ಮರನ್ ಸಾರಥೇಃ ॥

(ಆಶ್ರಿತರ ಪಾಪ ನಾಶಕನಾದ ಹರಿಯೇ, ಸರ್ವಕಾಲದಲ್ಲೂ ನಿನಗೆ ಅಧೀನ ವಾದ ಸ್ವರೂಪಸ್ಥಿತಿ ಪ್ರವೃತ್ತಿಯನ್ನು ನಿಶ್ಚಯಿಸಿ, ಕರ್ಮ ಜ್ಞಾನ ಭಕ್ತಿಯೋಗಗಳೆಂಬ ಉಪಾಯಗಳನ್ನು ಮಾಡಲು ಸಮರ್ಥನಲ್ಲವಾಗಿ ಶೋಕದಿಂದ ನಾನು ಕೃಶನಾಗಿದ್ದೇನೆ. ವಾತ್ಸಲ್ಯದಿಂದ ಅರ್ಜುನನಿಗೆ ಸಾರಥಿಯಾದ, ಪರಮಾತ್ಮನಾದ ನಿನ್ನ ಚರಮ ಶ್ಲೋಕದ ಅರ್ಥವನ್ನು ತಿಳಿದುಕೊಂಡುದರ ಫಲವಾಗಿ, ಭಗವದೇಕೋಪಾಯತ್ವ ಜ್ಞಾನವನ್ನು ನಿನ್ನ ಅನುಗ್ರಹದಿಂದ ಹೊಂದಿರುವ ಆಜ್ಞ, ಅಶಕ್ತ ಆಗಿರುವ ನನ್ನ ಸಕಲ ಅಪರಾಧಗಳ ನಾಶವನ್ನೂ ಮಾಡುತ್ತೀಯೆ ಎಂದು ದೃಢವಾಗಿ ನಂಬಿ ಧೈರ್ಯ ದಿಂದ ಇದ್ದೇನೆ.)

ವೇದಗಳಲ್ಲಿ ಪುರುಷಸೂಕ್ತ, ಪುರಾಣಗಳಲ್ಲಿ ವಿಷ್ಣು ಪುರಾಣ, ಧರ್ಮ ಶಾಸ್ತ್ರ ಗಳಲ್ಲಿ ಮನುಸ್ಮೃತಿ ಶ್ರೇಷ್ಠವಾಗಿರುವಂತೆ ಮಹಾಭಾರತದಲ್ಲಿ ಭಗವದ್ಗೀತೆಯು ಶ್ರೇಷ್ಠವಾದುದು.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥"

ಭಗವದ್ಗೀತೆಯ ಅಂತ್ಯ ಸಂದೇಶವೆನಿಸಿದ ಈ ಎರಡು ಸಾಲುಗಳು ಚರಮ ಶ್ಲೋಕ ಅಥವಾ ಶರಣಾಗತಿ ಮಂತ್ರ ಎನಿಸುತ್ತದೆ.

ಕರ್ಮ, ಜ್ಞಾನ, ಭಕ್ತಿಯೋಗಗಳು ಮೋಕ್ಷ ಸಾಧನವಾಗುತ್ತವೆ ಎಂಬುದನ್ನು ಬಿಡು ಎಂಬುದನ್ನು ಸರ್ವಧರ್ಮಾನ್ ಪರಿತ್ಯಜ್ಯ ಎಂಬುದು ತಿಳಿಸುತ್ತದೆ. ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನೂ, ಜ್ಞಾನ ಭಕ್ತಿಯೋಗಾಭ್ಯಾಸಗಳನ್ನೂ, ಶಾಸ್ತ್ರವಿಧಿಗೆ ಅನುಸಾರವಾಗಿ ಮಾಡುವಾಗ, ಅವುಗಳಲ್ಲಿ ಕರ್ಮಸ್ವಾತಂತ್ರ್ಯ ಮತ್ತು ಫಲಾಭಿಸಂಧಿ ಗಳನ್ನು ತ್ಯಜಿಸಿ, ಪರಮಾತ್ಮನ ನಿರ್ಹೇತುಕ ಕೃಪಾ ವಿಶೇಷವೇ ತನಗೆ ಉಪಾಯ ಎಂಬ ಭಾವನೆಯನ್ನು ಹೊಂದಿರಬೇಕು. ಅಂದರೆ ಎಲ್ಲ ಶಾಸ್ತ್ರ ವಿಧಿಗಳನ್ನೂ ಭಗವಂತನ

ಆಜ್ಞೆಯೆಂದೇ ಭಾವಿಸಿ, ಅದರಂತೆ ಮಾಡುವ ಕಾರ್ಯಗಳನ್ನೆಲ್ಲ ಭಗವಂತನ ಕೈಂಕರ್ಯವೆಂದೇ ತಿಳಿದು, ಕಾರ್ಯಗಳಲ್ಲಿ ಕರ್ತೃತ್ವದ ಅಹಂಕಾರ, ಫಲದಲ್ಲಿ ಆಸೆಗಳನ್ನು ಬಿಟ್ಟು, ಸರ್ವಂಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಿ ನಿಸ್ಪೃಹನಾಗಿರಬೇಕು. ಅನನ್ಯಶರಣತ್ವ, ಅನನ್ಯ ಗತಿತ್ವಗಳನ್ನು ಸೂಚಿಸುವ ಮಾಮೇಕಂಶರಣಂವ್ರಜ ಎಂಬುದು ಭಗವಂತನೊಬ್ಬನನ್ನೇ ಉಪಾಯವಾಗಿ ಸ್ವೀಕರಿಸು ಎಂದು ತಿಳಿಸುತ್ತದೆ. ಭಗವಂತನು, ಜೀವಾತ್ಮನ ವಿರೋಧಿಯಾದ ಸಮಸ್ತ ಪಾಪಗಳನ್ನೂ ಹೋಗಲಾಡಿಸುತ್ತಾನೆ ಎಂಬುದನ್ನು ಅಹಂತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಎಂಬುದೂ, ವ್ಯಸನ ಪಡದೆ ನಿಶ್ಚಿಂತನಾಗಿರು ಎಂಬುದನ್ನು ಮಾಶುಚಃ ಎಂಬುದೂ ತಿಳಿಸುತ್ತವೆ.

ಮುಮುಕ್ಷುವು ಅನುಷ್ಠಿಸುವ ಶರಣಾಗತಿ ಧರ್ಮಕ್ಕೆ ಪರಮಾತ್ಮನಲ್ಲದ ಇತರ ವಿಷಯಗಳಲ್ಲಿ ವಿರಕ್ತಿಯೂ, ಕರ್ತೃತ್ವ ಮತ್ತು ಫಲಸಂಗ ಪರಿತ್ಯಾಗ ಪೂರ್ವಕವಾದ ನಿತ್ಯ ನೈಮಿತ್ತಿಕಾದಿ ಕರ್ಮಾನುಷ್ಠಾನಗಳೂ, ಅವಶ್ಯಕವಾಗುತ್ತವೆ. ಅನುಷ್ಠಿಸಲ್ಪಡತಕ್ಕ ಕರ್ಮ, ಜ್ಞಾನ ಭಕ್ತಿಯೋಗಗಳನ್ನು ಮೋಕ್ಷ ಸಾಧನ ಬುದ್ಧಿಯಿಂದ ಮಾಡದೆ, ಆಶ್ರಯಿಸಲು ಸೌಕರ್ಯವನ್ನುಂಟು ಮಾಡುವ ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಮುಂತಾದ ಗುಣಶಾಲಿಯಾದ ಭಗವಂತನನ್ನೇ ಶರಣು ಹೊಂದುವವನಾಗು. ಜ್ಞಾನ ಶಕ್ತ್ಯಾದಿ ಸಕಲ ಗುಣ ಪೂರ್ಣನಾದ ಭಗವಂತನು, ಅವನನ್ನೇ ಉಪಾಯವೆಂದು ಆಶ್ರಯಿಸಿದ ಜೀವನನ್ನು ಅವನ ಪ್ರಾಪ್ತಿ ಪ್ರತಿಬಂಧಕಗಳಾದ ಸಕಲ ಪಾಪಗಳಿಂದ ಬಿಡಿಸುತ್ತಾನೆ. ಇದಕ್ಕಾಗಿ ಶೋಕ ಪಡಬೇಕಾದ ಅಗತ್ಯವಿಲ್ಲ ಎಂಬುದಾಗಿ ಭಗವಂತನು ಮಾನವರಿಗೆ ಕೊಟ್ಟ ಭರವಸೆಯೇ ಈ ಮಂತ್ರದ ಸಾರ.

ಕರ್ಮ, ಜ್ಞಾನ, ಭಕ್ತಿ, ಮಾರ್ಗಗಳನ್ನು ಅನುಸರಿಸಲು ಸಾಧಕನಿಗೆ ಅರ್ಹತೆಯನ್ನು ನೀಡುವ ಶ್ರುತಿ ಸ್ಮೃತಿ ಪ್ರಣೀತವಾದ ಸಾಧನಗಳನ್ನೆಲ್ಲ ತ್ಯಜಿಸಿ, ಸಕಲ ಕಲ್ಯಾಣ ಗುಣಪೂರ್ಣನಾದ ಸ್ವಾಮಿಯೊಬ್ಬನೇ ಏಕೈಕ ಆಶ್ರಯವೆಂದು ತಿಳಿದು, ಅವನು ಸರ್ವರನ್ನೂ ರಕ್ಷಿಸುತ್ತಾನೆ ಎಂಬ ಮಹಾ ವಿಶ್ವಾಸದಿಂದ ಜೀವನು ಭರನ್ಯಾಸ ಮಾಡಿದರೆ ಅಥವಾ ಸಂಕುಚಿತವಲ್ಲದ ಸಂಪೂರ್ಣ ಮನೋಭಾವದಿಂದ ಸ್ವಾಮಿಗೆ ತನ್ನನ್ನು ತಾನು ಅರ್ಪಿಸಿಕೊಂಡರೆ, ಇಚ್ಛಿತ ಫಲವು ಸಿಗುವುದರಲ್ಲಿ ಲೇಶವೂ ಸಂದೇಹ ವಿಲ್ಲ ಎಂಬುದೇ ಈ ಮಂತ್ರದ ತಿರುಳು.

ಳ

ದಾರಿತಪ್ಪಿ ಅಡ್ಡಹಾದಿ ಹಿಡಿಯದಂತಾಗಲು ಪ್ರತಿಯೊಬ್ಬರಿಗೂ ಒಬ್ಬ ಯೋಗ್ಯ ಮಾರ್ಗದರ್ಶಕನ ಆವಶ್ಯಕತೆ ಇರುತ್ತದೆ. ಪರಮಾತ್ಮನ ಅರಿವು, ಆಧ್ಯಾತ್ಮಿಕ ಪರಿಪೂರ್ಣತೆ ಹಾಗೂ ಸಂಸಾರ ಬಂಧನದಿಂದ ಬಿಡುಗಡೆ ಇವನ್ನು ಪಡೆಯಬೇಕೆನ್ನುವ ಜೀವಿಯ ಪ್ರಯತ್ನದಲ್ಲಿ ಗುರು ಅಥವಾ ಆಚಾರ್ಯನ ಪಾತ್ರ ಬಹು ಹಿರಿದು.

ಸಿದ್ಧಾಂತ ಮತ್ತು ನಂಬಿಕೆಗಳ ಸಂಮಿಲನವಾದ ವಿಶಿಷ್ಟಾದ್ವೈತವು ಆಚಾರ್ಯಾಭಿಮಾನವನ್ನು ಹೊಂದಿರಲು ತನ್ನ ಅನುಯಾಯಿಗಳಿಗೆ ಪ್ರೋತ್ಸಾಹ ನೀಡುತ್ತದೆ.

ಭಕ್ತರಲ್ಲಿರುವ ಅಜ್ಞಾನವೆಂಬ ಅಂಧಕಾರವನ್ನು ತನ್ನ ಜ್ಞಾನ–ಅನುಷ್ಠಾನ ಮತ್ತು ದೈವ ಸಾಕ್ಷಾತ್ಕಾರಗಳೆಂಬ ಜ್ಯೋತಿಯಿಂದ ಹೋಗಲಾಡಿಸಿ, ಭಕ್ತರನ್ನು ದೇವರ ಬಳಿಗೆ ಕರೆದೊಯ್ಯಲು ಸಮರ್ಥನಾಗಿರುವ ಮಾನವನು ಗುರು ಎನಿಸುತ್ತಾನೆ. ಸದಾಚಾರಿ, ಯೋಗ್ಯ, ಅನುಭವಿ, ದೈವಕಾರುಣ್ಯವನ್ನು ಪಡೆದ ಪುನೀತ ಆಗಿರುವ ಗುರುವು ಮಾತ್ರ ಭಕ್ತ ಅಥವಾ ಶಿಷ್ಯನಿಗೆ ನಿಜವಾದ ದಾರಿಯನ್ನು ತೋರಿಸಬಲ್ಲ.

ಕರ್ಮನಿಷ್ಠ, ಮತ ಗ್ರಂಥಗಳನ್ನು ಅನುಸಂಧಾನ ಮಾಡುವವ, ಸತ್ಯವಚನವುಳ್ಳವ, ವಿಷಯಾಸಕ್ತರಹಿತ, ಸಾತ್ವಿಕಗುಣ ಪರಿಪೂರ್ಣ, ಸಾಧು ವೃತ್ತಿಯವ, ಸರ್ವ ಭೂತರಹಿತ, ಭಗವಂತ—ಭಾಗವತರುಗಳಲ್ಲಿ ಅಪಚಾರ ಮಾಡದಿರುವ, ಪರಮಾತ್ಮನಲ್ಲಿಯೇ ಪೂರ್ಣವಾಗಿ ನೆಟ್ಟಮನಸ್ಸುಳ್ಳವ, ಆಚಾರ್ಯನೆನಿಸುತ್ತಾನೆ. ಆಚಾರ್ಯರೆನಿಸಿಕೊಂಡರು ನಿರಹಂಕಾರಿ, ಖ್ಯಾತಿ ಲಾಭ ನಿರಪೇಕ್ಷಕ, ಪರಸಮೃದ್ಧಿ ಪ್ರಿಯ, ಆಗಿರಬೇಕು.

ಆಚಿನೋತಿಹಿ ಶಾಸ್ತ್ರಾರ್ಥಾನ್ ಆಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇಯಸ್ಮಾತ್ತಸ್ಮಾದಾಚಾರ್ಯ ಉಚ್ಯತೇ ॥

ಎಂಬಂತೆ ಯಾರು ಸಕಲ ಶಾಸ್ತ್ರಗಳ ಅರ್ಥವನ್ನು ಸರಿಯಾಗಿ ತಿಳಿದುಕೊಂಡು, ಸಾರ ಸಂಗ್ರಹ ಮಾಡಿ, ತಾವು ಕಲಿತ ವಿದ್ಯೆಯು ಮಾನವ ಸಮುದಾಯದ ಕಲ್ಯಾಣಕ್ಕಾಗಿ ಆಗಲಿ ಎಂಬ ಸದುದ್ದೇಶದಿಂದ ಶಿಷ್ಯರಿಗೆ ಸುಲಭವಾದ ತಂತ್ರದಿಂದ ಬೋಧಿಸುವರೋ, ಯಾರು ತನ್ನನ್ನು ಆಶ್ರಯಿಸಿದ ಶಿಷ್ಯರಿಗೆ ಬೋಧಿಸುವುದರಿಂದ ಮಾತ್ರ ತೃಪ್ತರಾಗದೆ, ಲೌಕಿಕರಿಗೂ ಉಪದೇಶಿಸಿ ಅವರನ್ನೂ ಸರಿಯಾದ ದಾರಿಗೆ ತಂದು ಸದಾಚಾರದಲ್ಲಿ ನೆಲೆಗೊಳಿಸುವರೋ, ಪರರಿಗೆ ಉಪದೇಶ ಮಾಡುವುದು ಸುಲಭವಾದರೂ ತಾವು ಸ್ವತಃ ಆಚರಿಸಿ ತೋರಿಸುವುದು ಕಷ್ಟವಾದುದರಿಂದ, ಯಾರು ತಮ್ಮ ನಡೆನುಡಿಗಳಲ್ಲಿ ತಾವು ಉಪದೇಶಿಸುವ ತತ್ತ್ವಗಳೆಲ್ಲವೂ ಮೂರ್ತಿಮತ್ತಾಗಿ ಬಂದಂತೆ ಆದರ್ಶ ಜೀವನದ ಮೇಲ್ಪಂಕ್ತಿಯನ್ನು ಹಾಕಿಕೊಡುವರೋ, ಯಾರು ಜ್ಞಾನ ಭಕ್ತಿ ವೈರಾಗ್ಯಗಳಿಂದ ಕೂಡಿರುವರೋ, ಅವರೇ ನಿಜವಾದ ಆಚಾರ್ಯರಾಗಿದ್ದು, ಆಚಾರ್ಯ ದೇವೋಭವ ಎನಿಸಿಕೊಳ್ಳಲು ಅರ್ಹರಾಗಿರುತ್ತಾರೆ.

ಪೂರ್ವಾಚಾರ್ಯರುಗಳಿಂದ ಹರಿದು ಬಂದಿರುವ ಜ್ಞಾನಾನುಭವಗಳ ಪ್ರವಾಹಕ್ಕೆ, ತನ್ನ ಜ್ಞಾನಾನುಭವಗಳ ತೊರೆಯನ್ನೂ ಸೇರಿಸಿ, ಅದನ್ನು ಹಿಗ್ಗಿಸಿ, ಶಾಖೋಪಶಾಖೆಗಳಾಗಿ ಕವಲೊಡೆಸಿ, ಜನಮನವನ್ನು ತಣಿಸುವುದು ಆಚಾರ್ಯನ ಮುಖ್ಯ ಕರ್ತವ್ಯ. ಅವನು ಶಿಷ್ಯನಾಗಿರುವ ಜೀವಿಯ ವಿಷಯದಲ್ಲಿ ಪೂರ್ಣವಾದ ಕರುಣೆ ಹೊಂದಿದ್ದು, ಅವನಿಗೆ ಭಗವಂತನ ಕೃಪೆ, ಅನುಗ್ರಹ ಸಿಗುವಂತೆ ಶಿಫಾರಸು

ಮಾಡಿ, ಬೇರ್ಪಟ್ಟ ಜೀವಾತ್ಮ–ಪರಮಾತ್ಮರಿಬ್ಬರ ನಡುವಣ ಸೇತುವೆ ತಾವು ಎಂದು ಭಾವಿಸಿ, ಅವರಿಬ್ಬರನ್ನೂ ಒಂದುಗೂಡಿಸುವ ಹೊಣೆಯನ್ನು ಹೊತ್ತು, ಜೀವಿಯನ್ನು ಗುರಿಯ ಕಡೆಗೆ ಮುನ್ನಡೆಸಬೇಕು.

ಆಚಾರ್ಯರಾದವರು ತಾವು ಮಾಡಿದ ಕಾರ್ಯಕ್ಕೆ ಪ್ರತಿಫಲರೂಪದಲ್ಲಿ ಶಿಷ್ಯನಿಂದ ಶುಶ್ರೂಷೆ, ಹಣ, ವಸ್ತು ಮುಂತಾದುವನ್ನು ಅಪೇಕ್ಷಿಸದೆ, ಶಿಷ್ಯನು ಒಳ್ಳೆಯ ದಾರಿಗೆ ಬರಲಿ ಎಂಬ ದಯಾ ಬುದ್ಧಿಯಿಂದ ಮಾತ್ರ ಉಪದೇಶಿಸಬೇಕು. ಶಿಷ್ಯನ ಉದ್ಧಾರದೊಂದಿಗೆ ತಮಗೆ ಸತ್ಸಹವಾಸ, ಭಗವಂತನ ಕೈಂಕರ್ಯ ಒದಗಿತು ಎಂದು ಸಂತೋಷ ಪಡಬೇಕು ಮತ್ತು ಹಿರಿಯರಾದ ಪೂರ್ವಾಚಾರ್ಯರುಗಳ ದಿವ್ಯಾಜ್ಞೆಯನ್ನು ಪ್ರಚಾರ ಮಾಡುವ ಕರಣಗಳು ತಾವು ಎಂದು ತಿಳಿಯಬೇಕು. ಅಂದರೆ ಶಿಷ್ಯನನ್ನು ಅನುಗ್ರಹಿಸುವಾಗ ತಮ್ಮ ಆಚಾರ್ಯರೇ ತಮ್ಮ ಮೂಲಕ ಈ ಶಿಷ್ಯನನ್ನು ಅನುಗ್ರಹಿಸುತ್ತಿದ್ದಾರೆ, ತಾವು ಕೇವಲ ನಿಮಿತ್ತ ಮಾತ್ರ, ಶಿಷ್ಯನನ್ನು ರಕ್ಷಿಸುವುದು ಎಂದರೆ ತಮ್ಮ ಸ್ವರೂಪವನ್ನು ರಕ್ಷಿಸಿದಂತೆ, ಎಂದು ಆಚಾರ್ಯರು ತಿಳಿದುಕೊಂಡಿರಬೇಕಾದುದು ಶ್ರೀವೈಷ್ಣವ ಮತದ ಪರಮ ಲಕ್ಷಣ.

ಆಚಾರ್ಯರುಗಳು ಭಗವಂತನಿಗೆ ಅತಿ ಸನ್ನಿಹಿತ ವ್ಯಕ್ತಿಗಳು ಮತ್ತು ಆತನ ಹೃದಯವನ್ನು ಅರಿತ ದಿವ್ಯಜ್ಞಾನಿಗಳು. ಭಗವಂತನ ದಯೆಯು ಆಚಾರ್ಯರುಗಳ ಮೂಲಕ ಪ್ರವಹಿಸಿ, ಅವರುಗಳ ಅನುಷ್ಠಾನ ಮತ್ತು ಕೃತಿಗಳ ಮೂಲಕ ಚೇತನರಿಗೆ ಭಗವತ್ತತ್ತ್ವಗಳನ್ನು ಬೋಧಿಸಿ ಅವರನ್ನು ಮೇಲಕ್ಕೆ ಎತ್ತುತ್ತದೆ. ಆಚಾರ್ಯರುಗಳ ಸೂಕ್ತಿಗಳಲ್ಲಿ ಚೇತನರ ಉದ್ಧಾರಕ್ಕೆ ಉಪಯುಕ್ತ ಆದಂತಹ ತತ್ತ್ವಹಿತ ಪುರುಷಾರ್ಥಗಳ ಬೋಧಕ ಗುಣಗಳಿರುತ್ತವೆ. ಆದುದರಿಂದ ಆಚಾರ್ಯರುಗಳಲ್ಲಿ ಭಕ್ತಿಪೂರ್ವಕವಾದ ಆಶ್ರಯವು ಜ್ಞಾನ, ಸದ್ಗುಣಗಳನ್ನು ಉತ್ಪಾದಿಸಿ ಮೋಕ್ಷವನ್ನು ಕೊಡಿಸಬಲ್ಲದು.

ಗುರುವಿನ ಮಹಿಮೆ ಎಷ್ಟೇ ಇದ್ದರೂ ಆಚಾರ್ಯರು ಶಿಷ್ಯನಿಗೆ ಬೇಕಾದುದೆಲ್ಲವನ್ನೂ ಪೂರ್ಣವಾಗಿ ಹೇಳಿಕೊಡಲಾರರು. ಏಕೆಂದರೆ ಕಲಿಯುವಿಕೆಯಲ್ಲಿ ಶಿಷ್ಯನ ಪಾತ್ರವೂ ಮಹತ್ತರವಾದುದು. ಶುದ್ಧ, ಅಪ್ರಮತ್ತ, ಅಸೂಯಾರಹಿತ, ನಿಸ್ವಾರ್ಥಿ, ಸಂಯಮ ಪಾಲಕ ಆದ ವ್ಯಕ್ತಿಯು ಮಾತ್ರ ಅಧ್ಯಯನಕ್ಕೆ, ಶಿಷ್ಯವೃತ್ತಿಗೆ ಅರ್ಹನಾಗಿರುತ್ತಾನೆ.

ಆಚಾರ್ಯಾತ್ಪಾದ ಮಾಧತ್ತೇ ಪಾದಂ ಶಿಷ್ಯಸ್ಸಮೇಧಯಾ ।
ಪಾದಂ ಸಬ್ರಹ್ಮಚಾರಿಭ್ಯಃ ಪಾದಂ ಕಾಲಕ್ರಮೇಣತು ॥

ಎಂಬಂತೆ ಶಿಷ್ಯನು ಗುರುವಿನಿಂದ ಹೇಳಿಸಿಕೊಳ್ಳುವುದರ ಜೊತೆಗೆ ತನ್ನ ಬುದ್ಧಿಯನ್ನು ಉಪಯೋಗಿಸಿ, ಸಹಪಾಠಿಗಳೊಂದಿಗೆ ಚರ್ಚಿಸಿ, ತರ್ಕ ಮಾಡಿ, ಸಮಾಜವನ್ನು ವೀಕ್ಷಿಸಿ, ಗ್ರಂಥಗಳ ವ್ಯಾಸಂಗ ಮಾಡಿ, ಸತ್ಸಂಗದಲ್ಲಿದ್ದು, ಕಲಿಯ

ಬೇಕಾದುದು ಬಹಳವಿದೆ. ಸರ್ವಥರ್ಮವಿರ್ಯಯರೂ ಒಪ್ಪುವ ಕಠೋರ ಸತ್ಯವನ್ನು ಹೇಳಬಲ್ಲವನು ಮಾತ್ರ ಬ್ರಹ್ಮೋಪಾಸನೆ ಮಾಡಲು ಅರ್ಹನಾದ ಶಿಷ್ಯ ಎಂಬುದು ಪ್ರಾಚೀನ ಕಾಲದ ಗುರುಗಳ ಅಭಿಪ್ರಾಯವಾಗಿದ್ದಿತು.

ಆಸ್ತಿಕೋಧರ್ಮಶೀಲಶ್ಚ ಶೀಲವಾನ್ ವೈಷ್ಣವಶ್ಶುಚಿಃ ।
ಗಂಭೀರಶ್ಚತುರೋಧೀರಃ ಶಿಷ್ಯ ಇತ್ಯಭಿಧೀಯತೇ ॥

ಎಂಬಂತೆ ಈ ಗುಣಗಳೆಲ್ಲಾ ಇರುವವನೇ ಗುರೂಪದೇಶ ಪಡೆಯಲು ತಕ್ಕ ಶಿಷ್ಯ ನೆನಿಸುತ್ತಾನೆ. ಗುರುವಿನ ಅನುಗ್ರಹವನ್ನು ಪಡೆಯುವಂತಹ ಯೋಗ್ಯತೆ–ಅರ್ಹತೆ ಗಳು ಶಿಷ್ಯನಲ್ಲಿ ಇರಬೇಕು. ಪರಿಶುದ್ಧ ಜೀವನ ನಡೆಸಿ, ಗುರು ಸೇವೆ ಮಾಡಿ ಕಠಿಣ ಪರೀಕ್ಷೆಗಳಿಗೆ ಒಳಗಾಗಿ, ಶ್ರದ್ಧೆ ಭಕ್ತಿ ಆಸಕ್ತಿಗಳಿಂದ ಕೂಡಿದ್ದು, ನಿರಂಹಕಾರಿ ಯಾದ ಶಿಷ್ಯನು ಪ್ರಶ್ನೆಗಳನ್ನು ಕೇಳಿದಾಗ ಮಾತ್ರ ಗುರುವಿನ ಮನಸ್ಸಿನಲ್ಲಿ ಹೊಸ ಅರ್ಥ ವಿಶೇಷಗಳು ಹಾಗೂ ಭಾವನೆಗಳು ಸ್ಫುರಿಸಬಲ್ಲವು ಎಂಬುದು ತಜ್ಞರ ಅಭಿ ಪ್ರಾಯ.

ಗುರು ಶಿಷ್ಯರು ತಂದೆ ಮಕ್ಕಳಂತಿದ್ದು ಕಲಿವು ನಡೆಯಬೇಕು. ಇಬ್ಬರೂ ತಮ್ಮ ತಮ್ಮ ಸ್ವರೂಪಗಳನ್ನು ಬಹು ಎಚ್ಚರಿಕೆಯಿಂದ ರಕ್ಷಿಸಿಕೊಂಡು ಪರಸ್ಪರ ಹಿತರಕ್ಷಣೆಯಲ್ಲೂ ನಿರಂತರರಾಗಿರಬೇಕು, ಎಂಬುದು ಉಪನಿಷತ್ತುಗಳಲ್ಲಿ ಕಾಣ ಬರುವ ಗುರು ಶಿಷ್ಯ ಸಂಬಂಧ.

ಗುರು ಶುಶ್ರೂಷಯಾವಿದ್ಯಾ ಎಂಬಂತೆ ಶಿಷ್ಯನು ತನ್ನ ಸೇವಾಕಾರ್ಯಗಳಿಂದ ಆಚಾರ್ಯನನ್ನು ಸಂತೋಷ ಪಡಿಸಿ ಜ್ಞಾನವನ್ನು ಗಳಿಸಬೇಕು, ಆಚಾರ್ಯರಲ್ಲಿ ಶ್ರದ್ಧಾ ಭಕ್ತಿಗಳಿದ್ದರೆ ಮಾತ್ರ ಅವರ ಉಪದೇಶದ ಅರ್ಥವು ಶಿಷ್ಯನಿಗೆ ಸ್ಪಷ್ಟ ವಾಗಿ ಗೋಚರಿಸುತ್ತದೆ. ಆದುದರಿಂದ ಆಚಾರ್ಯನಿಗೇ ಅಲ್ಲದೆ ಆಚಾರ್ಯರ ಸಂಬಂಧ ಹೊಂದಿದವರಲ್ಲಿಯೂ ಗೌರವ—ಆದರಗಳನ್ನು ತೋರಿಸಬೇಕು. ಆಚಾರ ಶೀಲನಾಗಿದ್ದು ಗುರುಗಳ ಉಪದೇಶದಂತೆ ನಡೆದುಕೊಳ್ಳಲು ಪ್ರಯತ್ನಿಸಬೇಕು. ಉಪದೇಶವನ್ನು ಜೀವಿಕೆಗಾಗಿ ಮಾರಿಕೊಳ್ಳಬಾರದು. ಭಗವಂತನ ಬಗ್ಗೆ ತಿಳಿಸಿ ಕೊಟ್ಟ ಆಚಾರ್ಯರಲ್ಲಿಯೂ, ಯೋಗ್ಯ ಆಚಾರ್ಯರನ್ನು ಒದಗಿಸಿಕೊಟ್ಟ ಭಗವಂತನಲ್ಲಿಯೂ, ಕೃತಜ್ಞತೆ ಹೊಂದಿರಬೇಕು.

ಶರೀರಂ ವಸು ವಿಜ್ಞಾನಂ ವಾಸಃ ಕರ್ಮಗುಣಾನಸೂನ್ ।
ಗುರ್ವರ್ಥಂ ಧಾರಯೇದ್ಯಸ್ತು ಸಶಿಷ್ಯೋನೇತರಃ ಸ್ಮೃತಃ ॥

ಎಂಬಂತೆ ತನ್ನದಾಗಿರುವುದೆಲ್ಲವನ್ನೂ ಗುರು ಸೇವೆಗಾಗಿಯೇ ಉಪಯೋಗಿಸುವುದು ನಿಜವಾದ ಶಿಷ್ಯನ ಲಕ್ಷಣ ಹಾಗೂ ಕರ್ತವ್ಯ.

ಓಂ ಸಹನಾವವತು । ಸಹನೌಭುನಕ್ತು । ಸಹವೀರ್ಯಂ ಕರವಾವಹೈ ।
ತೇಜಸ್ವಿನಾ ವಧೀತಮಸ್ತು । ಮಾವಿದ್ವಿಷಾವಹೈ ।
ಓಂ ಶಾಂತಿಃ ಶಾಂತಿಃ ಶಾಂತಿಃ ॥

ಎಂಬಂತೆ ಗುರುಶಿಷ್ಯರಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ, ಜೊತೆಯಲ್ಲಿ ಪೋಷಿಸಲಿ, ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡಲಿ. ಇಬ್ಬರ ಅಧ್ಯಯನವೂ ವಿಕಾಸಗೊಳ್ಳಲಿ, ದ್ವೇಷವಿಲ್ಲದಂತಾಗಲಿ, ಎಲ್ಲೆಲ್ಲೂ ಶಾಂತಿ ಇರಲಿ—ಇದೇ ಪ್ರಾಚೀನ ಗುರುಕುಲದ ಅಧ್ಯಯನ—ಅಧ್ಯಾಪನ ಕಾಲದಲ್ಲಿ ಗುರುಶಿಷ್ಯರ ಪ್ರಾರ್ಥನೆ ಆಗಿದ್ದಿತು.

# ವಡಗಲೆ-ತೆಂಕಲೆ ಸಂಪ್ರದಾಯಗಳು

ಆಚಾರ್ಯ ರಾಮಾನುಜರನ್ನು ಆಶ್ರಯಿಸಿದವರಲ್ಲಿ ಅನೇಕರು ಶಾಸ್ತ್ರಗಳಲ್ಲಿ ಪಂಡಿತರೂ, ನಿಪುಣರೂ, ಗ್ರಂಥ ನಿರ್ಮಾಣದಲ್ಲಿ ಚತುರರೂ ಆಗಿದ್ದರು. ಆದರೆ ಅವರಲ್ಲಿ ಕೆಲವರು ಸ್ವಾಭಿಮಾನಿ, ಸ್ವಾರ್ಥಿಗಳಾಗಿದ್ದು, ನಾಥ, ಯಾಮುನ, ರಾಮಾನುಜ ಎಂಬ ಮುನಿತ್ರಯರ ವಾಕ್ಯಗಳಿಗೆ ತಾವು ಹೇಳುವುದೇ ಸರಿಯಾದ ಅಭಿಪ್ರಾಯವೆಂದು ಸಮರ್ಥನೆ ಮಾಡತೊಡಗಿದರು. ಹೀಗೆ ಅಭಿಪ್ರಾಯ ಭೇದ ವಿರುವುದನ್ನು ಗಮನಿಸಿದ ರಾಮಾನುಜರು, ತಮ್ಮ ಕಾಲಾನಂತರ ಆಗಬಹುದಾದ ಪರಿಣಾಮವನ್ನು ಊಹಿಸಿ, ಹಿಂದಿನಿಂದಲೂ ಬಂದ ಕ್ರಮದಂತೆ ಶ್ರೀ ವೈಷ್ಣವ ಆಚಾರ್ಯ ಪದವಿಯನ್ನು ತಮ್ಮ ಮುಖ್ಯ ಶಿಷ್ಯರಲ್ಲಿ ಒಬ್ಬರಿಗೆ ವಹಿಸದೆ, ನಾಡಿ ನಾದ್ಯಂತ 74 ಮಠಪೀಠಗಳನ್ನು ಸ್ಥಾಪಿಸಿ, ಅವುಗಳನ್ನು ನಿರ್ವಹಿಸಲು 74 ಸಿಂಹಾಸನಾಧಿಪತಿಗಳನ್ನು ನೇಮಿಸಿ, ತಮ್ಮ ದರ್ಶನ–ಸಿದ್ಧಾಂತಗಳ ಪ್ರಚಾರ ಮಾಡು ವಂತೆ ಆಜ್ಞೆ ಮಾಡಿದರು. ಪರಂಪರಾಗತವಾದ ಸಂಪ್ರದಾಯ ನಿಷ್ಠರೂ, ಸದಾಚಾರ ಸಂಪನ್ನರೂ, ತತ್ತ್ವಜ್ಞಾನಿಗಳೂ, ವಿವೇಕಿಗಳೂ, ದೈವಭಕ್ತರೂ ಆದ ಈ ಸಿಂಹಾಸ ನಾಧಿಪತಿಗಳಿಗೆಲ್ಲ ಪಂಚಸಂಸ್ಕಾರ ಮತ್ತು ಗ್ರಂಥಗಳ ಕಾಲಕ್ಷೇಪಮಾಡುವ ಅಧಿಕಾರ ಕೊಡಲ್ಪಟ್ಟಿತು. ರಾಮಾನುಜರು ತಮ್ಮ ಸಿದ್ಧಾಂತವನ್ನು ಜನಪ್ರಿಯಗೊಳಿಸಲು ಅನುಸರಿಸಿದ ವಿಧಾನಗಳು ಅವರು ದಾರ್ಶನಿಕರಾಗಿದ್ದಷ್ಟೇ ದಕ್ಷ ವ್ಯವಸ್ಥಾಪನಾ ಕುಶಲ, ಕ್ರಿಯಾಶೀಲ ಆಗಿದ್ದರೆಂಬುದನ್ನು ದೃಢಪಡಿಸುತ್ತದೆ.

ರಾಮಾನುಜಾರ್ಯಾಚ್ಛ್ರುತಿಮೌಳಿ ಭಾಷ್ಯಂ
ಅರ್ಥಂ ರಹಸ್ಯಂ ದ್ರಮಿಡ ಶ್ರುತೀನಾಂ ।
ಸಂಪ್ರಾಪ್ಯತೇನೈವ ಗುರೂಕೃತಾಂಸ್ತಾನ್
ಭಜೇ ಚತುಸ್ಸಪ್ತತಿ ಪೀಠ ಸಂಸ್ಥಾನ್ ॥

ಎಂಬಂತೆ ಆಚಾರಶೀಲರಾಗಿ ಗೃಹಸ್ಥರಾಗಿದ್ದ ಈ ಪೀಠಾಧಿಪತಿಗಳಲ್ಲಿ ಕೆಲವರು ಭಾಷ್ಯ ಗಳಿಗೆ, ಕೆಲವರು ರಹಸ್ಯ ಮಂತ್ರಾರ್ಥಕ್ಕೆ, ಕೆಲವರು ಪ್ರಬಂಧ ಅಥವಾ ಭಗವದ್ವಿಷಯಕ್ಕೆ ಪ್ರಾಧಾನ್ಯ ನೀಡಿದರು.

ರಾಮಾನುಜ ಸ್ಸಪ್ತಶತೈರ್ಯತೀನಾಂ, ಪೀಠೇಶ್ಚತುಸ್ಸಪ್ತತಿಭಿಸ್ಸಮೇತಃ ।
ಏಕಾಂತಿಭಿರ್ದ್ವಾದಶಭಿಸ್ಸಹಸ್ರೈಃ, ಶ್ರೀರಂಗ ಆಸ್ತೇ ಯತಿಸಾರ್ವಭೌಮಃ ॥

ಎಂಬಂತೆ 74 ಪೀಠಾಧಿಪತಿಗಳಲ್ಲದೆ 700 ಜೀಯರ್‌ಗಳು, 12000 ಏಕಾಂತಿಗಳು, ಲಕ್ಷಾಂತರ ಅಮ್ಮೈಗಳು, ಶ್ರೀ ವೈಷ್ಣವ ಸಿದ್ಧಾಂತದ ಪ್ರಚಾರದಲ್ಲಿ ನಿರತರಾಗಿದ್ದರು.

ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್, ಕೂರತ್ತಾಳ್ವಾನ್, ನಡಾದೂರಾಳ್ವಾನ್, ಎಂಗಳಾಳ್ವಾನ್, ತೆರುಕ್ಕಾಳ್ವಾನ್, ಇಳೈಯಾಳ್ವಾನ್, ಗೋಮಠತ್ತಾಳ್ವಾನ್, ಶೇಟ್ಟಲೂರಾಳ್ವಾನ್, ವೇದಾಂತಿಯಾಳ್ವಾನ್, ಆನಂದಾಳ್ವಾನ್, ನಡುವಿಲಾಳ್ವಾನ್, ಮುಳಹಾಳ್ವಾನ್, ನೈಯುಂಡಾಳ್ವಾನ್, ಉಕ್ಕಲಾಳ್ವಾನ್,ತಿರುಕ್ಕೋವಲೂರಾಳ್ವಾನ್, ತಿರುಮೋಹೂರಾಳ್ವಾನ್, ಕೋಯಿಲಾಳ್ವಾನ್, ಅರುಣಪುರತ್ತಾಳ್ವಾನ್. ಕಣಿಯ ನೂರ್ ಶಿರಿಯಾಳ್ವಾನ್, ತಿರುಮಲೈನಲ್ಲಾನ್, ಕಿಡಾಂಬಿಯಾಚ್ಚಾನ್, ವಂಗಿಪುರ ತ್ತಾಚ್ಚಾನ್, ಈಚ್ಚಂಬಾಡಿಯಾಚ್ಚಾನ್, ಕೊಂಗಿಲಾಚ್ಚಾನ್, ತಿರುಕ್ಕಣ್ಣಪುರ ತ್ತಾಚ್ಚಾನ್, ಎಂಬಾರ್, ಶಿರಿಯಗೋವಿಂದಪ್ಪೆರುಮಾಳ್, ವೀರವಲ್ಲಿಪ್ಪೆರುಮಾಳ್, ಕಿಡಾಂಬಿಪ್ಪೆರುಮಾಳ್, ಅಮ್ಮಂಗಿಪ್ಪೆರುಮಾಳ್, ಆಸೂರಿಪ್ಪೆರುಮಾಳ್, ಪಿಳ್ಳೈ ಯಪ್ಪನ್, ಶೊಟ್ಟೈನಂಬಿ, ಪಿಳ್ಳೈತಿರುಮಲೆನಂಬಿ, ವಂಗಿಪ್ಪುರತ್ತುನಂಬಿ, ಮುಡುಂಬೈ ನಂಬಿ, ಪರಾಂಕುಶನಂಬಿ, ತಿರುಕ್ಕುರುಂಗುಡಿನಂಬಿ, ತೊಂಡನೂರ್‌ನಂಬಿ, ಅರುಣ ಪ್ಪುರತ್ತುನಂಬಿ, ಮರುದೂರ್‌ನಂಬಿ, ಮಳೈಯಾರ್‌ನಂಬಿ, ವಡುಹನಂಬಿ, ಕುರುವಿ ನಂಬಿ, ಪುಂಡರೀಕಾಕ್ಷರ್, ಮುದಲಿಯಾಂಡಾನ್, ಕಂದಾಡೈಯಾಂಡಾನ್, ಮಾರುದಿ ಯಾಂಡಾನ್, ಮದುರೈಯಾಂಡಾನ್, ಇಯ್ಯುಣ್ಣಿಯಾಂಡಾನ್, ಸೋಮಯಾಜಿ ಯಾಂಡಾನ್, ಜಿಯ್ಯರಾಂಡಾನ್, ಈಶಾಂಡಾನ್, ಪೆರಿಯಾಂಡಾನ್, ಶಿರಿ ಯಾಂಡಾನ್, ಅಮ್ಮಂಗಿಯಾಂಡಾನ್, ಆಳವಂದಾರಾಂಡಾನ್, ಶುಂದರತ್ತೋಳು ಡೈಯರ್, ಉಕ್ಕಲಮ್ಮಾಳ್, ವೈತ್ತಮಾನಿದಿಯಾರ್, ಪಿಳ್ಳೈಯುರುಂದ್ಯೆಯು ಡೈಯಾರ್, ಶೊಟ್ಟೈಯಮ್ಮಾಳ್, ಮುಡುಂಬೈಯಮ್ಮಾಳ್, ಪರುತ್ತಿಕೊಲ್ಲೈಯ ಮ್ಮಾಳ್, ಪರಾಶರಭಟ್ಟರ್, ಶ್ರೀರಾಮಪಿಳ್ಳೈಭಟ್ಟರ್, ಶಿರುಪ್ಪಳ್ಳಿದೇವರಾಜ ಭಟ್ಟರ್, ಪಿಳ್ಳೈತಿರುವಾಯ್ಮೊಳಿ ಅರೈಯರ್, ಪಿಳ್ಳೈರಾಜ ಮಹೇಂದ್ರಪ್ಪೆರುಮಾಳ್ ಅರೈಯರ್, ಅಧಿಕಾರಿಪ್ಪಿಳ್ಳೈ, ತಿರುನಗರಿಪ್ಪಿಳ್ಳೈ, ಕೊಮಾಂಡೂರುಪಿಳ್ಳೈ, ಅನಂತ ಸೋಮಯಾಜಿಯಾರ್, ಕಾಂಚೀ ಸೋಮಯಾಜಿಯಾರ್—ಇವರು ರಾಮಾನುಜರು ನೇಮಿಸಿದ 74 ಸಿಂಹಾಸನಾಧಿಪತಿಗಳು. ಇವರಲ್ಲಿ ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್, ನಡಾದೂರಾಳ್ವಾನ್, ಕಿಡಾಂಬಿಯಾಚ್ಚಾನ್, ಮುದಲಿಯಾಂಡಾನ್ ಈ ನಾಲ್ವರಿಗೆ ಶ್ರೀಭಾಷ್ಯ ಸಿಂಹಾಸನಾಧಿಪತಿಗಳೆಂದು ಹೆಸರು. ಪಿಳ್ಳಾನ್‌ರವರು ಭಾಷ್ಯ-ಪ್ರಬಂಧಗಳ ಉಭಯ ಸಿಂಹಾಸನಾಧಿಪತಿ ಎನಿಸಿದರು. ಗೃಹಸ್ಥರಾಗಿಯೇ ಇದ್ದು, ಜನಸಾಮಾನ್ಯರ ನಡುವೆ ಬದುಕಿ ಬಾಳಿ, ತಮ್ಮ ಸದಾಚಾರ, ಸದ್ವಿಚಾರ ಸಂಪನ್ನತೆಯಿಂದ ಜನರಿಗೆ ಸದ್ಧರ್ಮ, ಸನ್ಮಾರ್ಗಗಳನ್ನು ತೋರಿಸಿಕೊಟ್ಟು, ಭಕ್ತಿ ಮತ-ಆಸ್ತಿಕತೆಯನ್ನು ಜನತೆ ಯಲ್ಲಿ ಬಿತ್ತರಿಸಬೇಕೆಂಬ ಉದ್ದೇಶದಿಂದ ರಾಮಾನುಜರು ಸ್ವಯಮಾಚಾರ್ಯ ಪುರುಷ ಪದ್ಧತಿಯನ್ನು ಏರ್ಪಾಡುಮಾಡಿ, ಅದಕ್ಕೆ ತಕ್ಕವರನ್ನು ನೇಮಿಸಿದರು.

ರಾಮಾನುಜರ ಕಾಲದಲ್ಲಿ ಸಂಸ್ಕೃತ ವೇದ, ತಮಿಳು ಪ್ರಬಂಧ ಎರಡಕ್ಕೂ ಸಮಾನ ಗೌರವಾದರಗಳು ಇದ್ದುವು. ರಾಮಾನುಜರ ಶಿಷ್ಯರಲ್ಲಿ ಕೆಲವರು ಶ್ರೀ ಭಾಷ್ಯವನ್ನು ವೈದಿಕ ಸಂಪ್ರದಾಯದ ನೆಲೆಯಲ್ಲಿಯೇ ಬೋಧಿಸಿದರು. ಇನ್ನು ಕೆಲವರು ಭಗವದ್ವಿಷಯ ಅಥವಾ ಆಳ್ವಾರುಗಳ ದಿವ್ಯ ಪ್ರಬಂಧಗಳನ್ನು ಬೋಧಿಸಿದರು. ವೇದೋಪನಿಷತ್ತುಗಳ ಸಾರವನ್ನು ಶ್ರೀ ಭಾಷ್ಯವು ಸಂಸ್ಕೃತದಲ್ಲಿಯೂ, ದಿವ್ಯ ಪ್ರಬಂಧ ಗಳು ತಮಿಳಿನಲ್ಲಿಯೂ ತಿಳಿಸುವುದರಿಂದ ಎರಡರ ವಿಷಯವೂ ಒಂದೇ ಆಗಿದ್ದು, ಅವುಗಳ ಮೂಲಕ ವಿಶಿಷ್ಟಾದ್ವೈತ ಸಿದ್ಧಾಂತವು ಪಂಡಿತ-ಪಾಮರ, ಬ್ರಾಹ್ಮಣ-ಬ್ರಾಹ್ಮಣೇತರ ಎಲ್ಲರಲ್ಲಿಯೂ ಹರಡಿತು. ಈ ಪೀಠಾಧಿಪತಿಗಳ ಹಾಗೂ ಇವರ ಶಿಷ್ಯ ಪ್ರಶಿಷ್ಯರ ಖಂಡನ, ಮಂಡನ, ಪರೀಕ್ಷಣ, ವಿಮರ್ಶನ ಇವುಗಳೆಲ್ಲದರ ಫಲವಾಗಿ, ರಾಮಾನುಜ ಸಿದ್ಧಾಂತಕ್ಕೆ ನಿಷ್ಕೃಷ್ಟತೆ, ವೈಶಾಲ್ಯತೆಗಳು ಉಂಟಾಗಿ, ಇವರೆಲ್ಲರ ಪ್ರಾಮಾಣಿಕ ಪ್ರಯತ್ನಗಳಿಂದ ಶ್ರೀ ವೈಷ್ಣವ ಮತವು ಬಹುಬೇಗ ನಾಡಿನಾದ್ಯಂತ ಹರಡಿತು.

ಸಂಸ್ಕೃತ ಮತ್ತು ತಮಿಳು ಸೇರಿದ ಉಭಯ ವೇದಾಂತ ಪ್ರವರ್ತಕರೆನಿಸಿದ್ದ ರಾಮಾನುಜರ ಶಿಷ್ಯರಲ್ಲಿ, ರಾಮಾನುಜರ ನಂತರ ಎರಡು ಪ್ರಭೇದ ಅಥವಾ ಸಂಪ್ರ ದಾಯಗಳು ಬೆಳೆದು ಬರತೊಡಗಿದವು. ರಾಮಾನುಜರ ಅಭಿಪ್ರಾಯ, ಶಾಸ್ತ್ರ ವ್ಯಾಸಂಗ ಇವುಗಳ ಬಗ್ಗೆ ಹಿರಿಯ ಆಚಾರ್ಯರುಗಳಲ್ಲಿ ಭೇದ-ಭಿನ್ನತೆಗಳು ಹೆಚ್ಚಾದುದೇ ಈ ವ್ಯತ್ಯಾಸಕ್ಕೆ ಮೂಲಕಾರಣವೆನ್ನಬಹುದು. ರಾಮಾನುಜರ ಜ್ಞಾನ ಪುತ್ರರೆಂದು ಪ್ರಖ್ಯಾತರಾದ ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್, ಎಂಗಳಾಳ್ವಾನ್, ಕಿಡಾಂಬಿ ಆಚ್ಚಾನ್, ಕಿಡಾಂಬಿರಾಮಾನುಜ, ಕಿಡಾಂಬಿ ಶ್ರೀರಂಗರಾಜ, ನಡಾ ದೂರಾಳ್ವಾನ್, ನಡಾದೂರಮ್ಮಾಳ್, ಕಿಡಾಂಬಿ ಅಪ್ಪುಳ್ಳಾರ್, ವೇದಾಂತ ದೇಶಿಕ, ನಯನಾರಾಚಾರ್ಯ, ಬ್ರಹ್ಮತಂತ್ರಸ್ವಾಮಿ, ಆದಿವಣ್ ಶಠಗೋಪರ್ ಮುಂತಾದವ ರಿಂದ ಪ್ರವರ್ತಿತವಾದ ಪರಂಪರೆ ಒಂದು. ಉತ್ತರ ಭಾರತದ ಆರ್ಯರ ಭಾಷೆಯಾದ ಸಂಸ್ಕೃತದಲ್ಲಿರುವ ವೇದ, ಉಪನಿಷತ್ತು, ಭಗವದ್ಗೀತೆ, ಧರ್ಮ ಶಾಸ್ತ್ರಗಳು ಮುಖ್ಯ. ವೈದಿಕ ಕರ್ಮ, ಉಪಾಸನೆಗಳು ಉತ್ತಮ ಸಾಧನ ಎಂದು ಹೇಳಿದ ಈ ವೇದ ಪಂಥೀಯರು ಕಂಚಿಯ **ವಡಗಲೆ** ಸಂಪ್ರದಾಯದವರು ಎನಿಸಿದರು ; ರಾಮಾನುಜರ ಅತ್ಯಂತ ಪ್ರಿಯ ಶಿಷ್ಯರಾದ ಕೂರತ್ತಾಳ್ವಾನ್, ಮುದಲಿಯಾಂಡಾನ್, ಎಂಬಾರ್, ಪರಾಶರಭಟ್ಟರ್, ನಂಜೀಯರ್, ನಂಪಿಳ್ಳೈ, ಪೆರಿಯವಾಚ್ಚಾನ್ ಪಿಳ್ಳೈ, ವಡಕ್ಕುತ್ತಿರುವೀಧಿಪಿಳ್ಳೈ, ಪಿಳ್ಳೈಲೋಕಾಚಾರ್ಯ, ತಿರುಮಲೈಯಾಳ್ವಾರ್, ಮಣವಾಳ ಮಾಮುನಿ ಮುಂತಾದವರಿಂದ ಪ್ರವರ್ತಿತವಾದ ಪರಂಪರೆ ಇನ್ನೊಂದು. ದಕ್ಷಿಣ ಭಾರತದ ದ್ರಾವಿಡರ ಭಾಷೆಯಾದ ತಮಿಳಿನಲ್ಲಿರುವ ನಾಲಾಯಿರ ದಿವ್ಯ ಪ್ರಬಂಧಗಳು ಮುಖ್ಯ. ಆಗಮಗಳಿಗನುಸಾರವಾದ ದೇವತಾರ್ಚನೆಯೇ ವಿಹಿತ ವಾದುದು, ಪ್ರಪತ್ತಿಯೇ ಮುಖ್ಯ ಸಾಧನ ಎಂದು ಹೇಳಿದ ಪ್ರಬಂಧ ಪಂಥೀಯರು ಶ್ರೀರಂಗದ **ತೆಂಗಲೆ** ಸಂಪ್ರದಾಯದವರು ಎನಿಸಿದರು.

ಹೀಗೆ ಭಗವತ್ಕೃಪೆ, ಭಗವತ್ಪ್ರಾಪ್ತಿ, ಶ್ರೀಮಹಾಲಕ್ಷ್ಮಿಯ ಸ್ಥಾನ, ಪುಂಡ್ರ ಧಾರಣೆಯ ಆಕಾರ, ಮಂತ್ರೋಪದೇಶ, ಪ್ರಾಯಶ್ಚಿತ್ತ, ಪ್ರಪತ್ತಿ, ಮುಕ್ತಿಯ ನಂತರ ಜೀವಾತ್ಮರುಗಳ ಸ್ಥಾನ, ಮುಂತಾದ ಹದಿನೆಂಟು ವಿಷಯಗಳಲ್ಲಿ ಉಂಟಾದ ಮೂಲಭೂತ ವ್ಯತ್ಯಾಸವು ಶ್ರೀ ವೈಷ್ಣವ ಮತವು ಎರಡು ಕವಲಾಗಿ ಒಡೆಯಲು ಕಾರಣವಾಯಿತು. ವೇದಾಂತ ದೇಶಿಕರ ಮರಣದ ನಂತರ, ವರವರ ಮುನಿಗಳು ಮರಣ ಹೊಂದುವವರೆಗಿನ ಮಧ್ಯ ಕಾಲದಲ್ಲಿ ಈ ಪಂಥಗಳಲ್ಲಿ ಭೇದ ಹೆಚ್ಚಾಯಿತು. ವಡಗಲೆಯವರು ವೇದಾಂತ ದೇಶಿಕರಿಗೂ, ತೆಂಗಲೆಯವರು ನಮ್ಮಾಳ್ವಾರರಿಗೂ ಪ್ರಾಧಾನ್ಯ ಕೊಟ್ಟಿದ್ದೇ ಕಾರಣವಿರಬಹುದು. ತತ್ತ್ವ-ಆಚಾರ ಗಳಲ್ಲಿ ಮುಖ್ಯವೆನಿಸಿದ ಈ ಅಷ್ಟಾದಶ ಭೇದಗಳು ಪ್ರಮಾಣಭೂತವಾದ ಈ ಶ್ಲೋಕ ದಲ್ಲಿ ಸಂಗೃಹೀತವಾಗಿದೆ.

ಭೇದಃ ಸ್ವಾಮಿಕೃಪಾ ಫಲಾನ್ಯಗತಿಷು ಶೀವ್ಯಾಪ್ತ್ಯೌ ಪಾಯತ್ವಯೋ
ತದ್ವಾತ್ಸಲ್ಯ ದಯಾ ನಿರುಕ್ತಿ ವಚಸೋ ನ್ಯಾಸೇನ ತತ್ಕರ್ತರಿ ।
ಧರ್ಮತ್ಯಾಗ ವಿರೋಧಯೋಃ ಸ್ವವಿಹಿತೇ ನ್ಯಾಸಾಂಗ ಹೇತುದ್ವಯೋಃ
ಪ್ರಾಯಶ್ಚಿತ್ತ ವಿಧೌತದೀಯ ಭಜನೇಽಣು ವ್ಯಾಪ್ತಿ ಕೈವಲ್ಯಯೋಃ ॥
(ಸೂಚನೆ ; 1) ವಡಗಲೆ ಅಭಿಪ್ರಾಯ 2) ತೆಂಗಲೆ ಅಭಿಪ್ರಾಯ)

1. 1) ಲೋಕಸ್ವಾಮಿಯೂ, ಶ್ರಿಯಃಪತಿಯೂ ಆದ ವಿಷ್ಣುವಿನ ಕೃಪೆ ಸಹೇತುಕ ವಾದುದು. ಭಕ್ತನು ಒಳ್ಳೆಯ ಕರ್ಮ ಮಾಡಿದಾಗ ಮಾತ್ರ ಭಗವಂತನ ಕೃಪೆ ಒದಗುತ್ತದೆ. ಸತ್ಕರ್ಮದ ಅವಶ್ಯಕತೆ ಇಲ್ಲದಿದ್ದರೆ ಮಾನವರೆಲ್ಲರೂ ಒಟ್ಟಿಗೆ ಮೋಕ್ಷ ಹೊಂದುತ್ತಿದ್ದರು, ಆಗ ಭೂಮಿಯ ಮೇಲೆ ಪಾಪಿಗಳೇ ಇರುತ್ತಿರ ಲಿಲ್ಲ. ಭಗವಂತನ ಕೃಪೆ ಎಲ್ಲರಿಗೂ ದಾನವಾಗಿ ಸುಮ್ಮನೆ ಸಿಗುವಂತಹುದಲ್ಲ. ಆದಕ್ಕಾಗಿ ಭಕ್ತನು ಯತ್ನಿಸಬೇಕು. ಮುಖ್ಯವಾಗಿ ಭಗವಂತನು ಭಕ್ತಿ ಪ್ರಪತ್ತಿ ಆದಿ ಪ್ರಯತ್ನಗಳ ವ್ಯಾಜವನ್ನು ಅವಲಂಬಿಸಿಯೇ ದಯೆ ತೋರುತ್ತಾನೆ. ಬೇಡಿದವರಿಗೆ ಮಾತ್ರ ಕೊಡುತ್ತಾನೆ.

ಕೋತಿ ಮರಿಯು ತಾಯಿಯನ್ನು ಭದ್ರವಾಗಿ ಹಿಡಿದರೆ ಮಾತ್ರ ತಾಯಿ ಕೋತಿಯು ಮರಿಯನ್ನು ರಕ್ಷಿಸುತ್ತದೆ. ಈ ಮರ್ಕಟ ಕಿಶೋರ ನ್ಯಾಯ ದಂತೆ ಕರ್ಮಾನುಷ್ಠಾನ ಮತ್ತು ಕರ್ತವ್ಯಗಳ ನಿರ್ವಹಣೆಯಿಂದ ಪ್ರಪತ್ತಿ ಅಥವ ನ್ಯಾಸವನ್ನು ಮಾಡಬೇಕು. ಅಂದರೆ ಭಗವದನುಗ್ರಹಕ್ಕೆ ಭಕ್ತನ ಪ್ರಯತ್ನ ಅವಶ್ಯಕ.

2) ವಿಷ್ಣುವಿನ ಕೃಪೆ ನಿರ್ಹೇತುಕವಾಗಿ ಪುರುಷಾರ್ಥ ಕೊಡುತ್ತದೆ. ಭಗವಂತನ ಕೃಪೆಯು ತಾನಾಗಿ ಒದಗುವುದರಿಂದ ಅದಕ್ಕಾಗಿ ಭಕ್ತನಿಗೆ ಯಾವ ಅರ್ಹತೆ ಪ್ರಯತ್ನಗಳ ಅವಶ್ಯಕತೆಯಿಲ್ಲ.

ಬೆಕ್ಕಿನ ಮರಿಯು ಸುಮ್ಮನೆ ಕುಳಿತಿದ್ದರೂ, ತಾಯಿ ಬೆಕ್ಕು ಮರಿಯನ್ನು

ಬಾಯಿಯಲ್ಲಿ ಹಿಡಿದು ರಕ್ಷಿಸುತ್ತದೆ. ಈ ಮಾರ್ಜಾಲ ಕಿಶೋರ ನ್ಯಾಯದಂತೆ ಭಗವದನುಗ್ರಹಕ್ಕೆ ಭಕ್ತನು ಆಚಾರ್ಯರಲ್ಲಿ ಪ್ರಪತ್ತಿಮಾಡಿದರೆ ಸಾಕು.

**2.** 1) ಮೋಕ್ಷ ಪಡೆಯಲು ಕರ್ಮಾನುಷ್ಠಾನ ಮುಖ್ಯ. ಕರ್ಮಕಾಂಡದಲ್ಲಿರುವ ಧರ್ಮ ಕರ್ಮಗಳನ್ನು ಬಿಡಬಾರದು. ಗೀತೆಯಲ್ಲಿ ಹೇಳಿರುವಂತೆ ಕರ್ಮ ದಿಂದ ಬರುವ ಫಲದ ಆಸೆಯನ್ನು ಮಾತ್ರ ಬಿಡಬೇಕು. ಪ್ರಪತ್ತಿ ಮಾಡಿ ದವನೂ ಲೋಕ ಸಂಗ್ರಹ ದೃಷ್ಟಿಯಿಂದ ಕರ್ತವ್ಯ ಕರ್ಮಗಳನ್ನು ಮಾಡಬೇಕು.

2) ಮೋಕ್ಷ ಪಡೆಯಲು ದೇವರಸೇವೆ ಅಥವಾ ಕೈಂಕರ್ಯಾನುಷ್ಠಾನ ಮುಖ್ಯ. ಇದರಲ್ಲಿ ಸ್ವಾರ್ಥ, ಪರಾರ್ಥ ಎಂಬ ಎರಡು ಕೈಂಕರ್ಯನಿಷ್ಠೆ ಇರುತ್ತದೆ. ದೇವರೇ ಹೇಳಿರುವಂತೆ ಧರ್ಮ ಕರ್ಮಗಳನ್ನು ಬಿಡಬೇಕು.

**3.** 1) ಕರ್ಮಯೋಗ ಮತ್ತು ಜ್ಞಾನಯೋಗಗಳು ಸರ್ವದಾ ಭಕ್ತಿಯೋಗದ ಅಂಗಗಳು. ಕರ್ಮ, ಜ್ಞಾನ, ಭಕ್ತಿಗಳು ಪ್ರಪತ್ತಿಯೋಗಕ್ಕೆ ಪೂರಕವಾದವು ಗಳು, ಆಚಾರ್ಯಾಭಿಮಾನ ಯೋಗವು ಪ್ರಪತ್ತಿಯೋಗದ ಭೇದ. ಭಗ ವಂತನೇ ಮೋಕ್ಷ ಸಾಧನೆಗಾಗಿ ಕರ್ಮ, ಜ್ಞಾನ, ಭಕ್ತಿಗಳನ್ನು ಸೃಷ್ಟಿಸಿ ಕೊಟ್ಟಿ ದ್ದಾನೆ. ಇವೆಲ್ಲವೂ ಉಪಯುಕ್ತ ಹಾಗೂ ಅವಶ್ಯಕ. ಕರ್ಮದಿಂದ ಜ್ಞಾನ, ಜ್ಞಾನದಿಂದ ಭಕ್ತಿ, ಭಕ್ತಿಯಿಂದ ಪ್ರಪತ್ತಿ ಸಾಧ್ಯವಾಗುವುದರಿಂದ ಭಕ್ತಿಯೇ ಮೋಕ್ಷಕ್ಕೆ ಸಾಧನ.

2) ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ, ಆಚಾರ್ಯಾಭಿಮಾನ ಎಲ್ಲವೂ ಮೋಕ್ಷಸಾಧನೆಯ ಸ್ವತಂತ್ರ ಮಾರ್ಗಗಳು–ಪ್ರಪತ್ತಿಯೊಡನೆ ಹೋಲಿಸಿದರೆ ಕರ್ಮ ಜ್ಞಾನ ಭಕ್ತಿಗಳಿಗೆ ಬೆಲೆಯಿಲ್ಲವಾದುದರಿಂದ ಪ್ರಪತ್ತಿ ಮಾಡಿದವನು ಇವನ್ನು ತ್ಯಜಿಸಬೇಕು.

**4.** 1) ಶ್ರೀ ಅಥವಾ ಲಕ್ಷ್ಮಿಯು ವಿಭುವೇ ವಿನಾ ಅಣುವಲ್ಲ. ಶ್ರೀ ವಿಶಿಷ್ಟವಾದ ತತ್ತ್ವ ಒಂದೇ. ಅವಳೂ ಈಶ್ವರ ಕೋಟಿಯಲ್ಲಿಯೇ ಸೇರುತ್ತಾಳೆ. ಸೃಷ್ಟಿ ಸ್ಥಿತಿಲಯ ಕಾರ್ಯದಲ್ಲಿ, ಪಾಪಗಳನ್ನು ನಾಶಮಾಡುವುದರಲ್ಲಿ ವಿಷ್ಣುವಿಗೆ ಸಮಾನಳು.

2) ಲಕ್ಷ್ಮಿಯು ಅಣುವೇ ಹೊರತು ವಿಭುವಲ್ಲ. ಅವಳು ವಿಷ್ಣುವಿನ ಸೇವಕಿ. ಜೀವಕೋಟಿಯಲ್ಲಿಯೇ ಅವಳು ಹುಟ್ಟುತ್ತಾಳೆ. ಜೀವಿಗಳಿಗೋಸ್ಕರ ವಿಷ್ಣುವಿ ನೊಂದಿಗೆ ವಾದಿಸುವ ಪುರುಷಕಾರಳು.

**5.** 1) ಭಗವಂತನಂತೆಯೇ ಶ್ರೀಯೂ ಮೋಕ್ಷೋಪಾಯಳು, ಮೋಕ್ಷ ನೀಡು ವುದರಲ್ಲಿ ವಿಷ್ಣುವಿಗೆ ಸಮಾನಳು.

2) ಶ್ರೀಯು ನೇರವಾಗಿ ಮೋಕ್ಷಕೊಡಲಾರಳು. ಸೂರ್ಯನಿಗೆ ಪ್ರತಿಭೆಯಂತೆ ನಾರಾಯಣನಿಗೆ ಲಕ್ಷ್ಮಿ ಇದ್ದಾಳೆ. ಅವಳಲ್ಲಿರುವ ಜ್ಞಾನ, ಶಕ್ತಿಗಳಿಂದ ದೇವ ರಂತೆ ಪೂಜೆಗೆ ಅರ್ಹಳು.

**6.** 1) ಭಗವಂತನ ವಾತ್ಸಲ್ಯವೆಂದರೆ ಆಶ್ರಿತರ ದೋಷಗಳನ್ನು ನೋಡದಿರುವುದು ಆದುದರಿಂದ ಅವನ್ನು ಭಗವಂತನು ಜೀವಿಗಳ ಪಾಪ, ತಪ್ಪುಗಳನ್ನು ಕಾಣುವುದಿಲ್ಲ. ಅವರನ್ನು ಕ್ಷಮಿಸುತ್ತಾನೆ.

2) ಭಗವಂತನ ವಾತ್ಸಲ್ಯವೆಂದರೆ ಆಶ್ರಿತರ ದೋಷವನ್ನು ಗುಣವೆಂದು ಎಣಿಸುವುದು. ಅವನು ಪ್ರಪನ್ನರ ತಪ್ಪು, ಪಾಪಗಳನ್ನು ಚಂದನ, ಮಾಲೆಗಳಂತೆ ಸ್ವೀಕರಿಸುತ್ತಾನೆ.

**7.** 1) ಭಗವಂತನ ದಯೆ ಅಥವಾ ಕರುಣೆ ಎನ್ನುವುದು ಭಕ್ತರ ದುಃಖಗಳನ್ನು ನೀಗುವ ಇಚ್ಛೆ. ಪರಿಪೂರ್ಣ, ಸಕಲ ಕಲ್ಯಾಣ ಗುಣಭರಿತ, ದಯಾಮಯ ಆದ ಪರಮಾತ್ಮನು ಭಕ್ತರ ದುಃಖವನ್ನು ಸಹಿಸಲಾರದವನಾದುದರಿಂದ ಆ ದುಃಖದ ಕಾರಣವನ್ನು ನಿವಾರಿಸಲು ಇಚ್ಛಿಸುತ್ತಾನೆ.

2) ಭಗವಂತನ ಕರುಣೆ ಎನ್ನುವುದು ಭಕ್ತರ ದುಃಖಗಳನ್ನು ನೋಡಿ ತಾನೂ ದುಃಖ ಪಡುವುದು. ಭಕ್ತರ ದುಃಖದಲ್ಲಿ ತಾನೂ ದುಃಖಿಸಿ ದಯೆತೋರಿಸುವುದು ಅವನ ಕಲ್ಯಾಣ ಗುಣಗಳನ್ನು ವ್ಯಕ್ತಪಡಿಸುವ ಸಾಧನ.

**8.** 1) ತಪ್ಪುಗಳನ್ನೆಲ್ಲ ಒಪ್ಪಿಕೊಂಡು ದೇವರಲ್ಲಿ ಆಶ್ರಯಕೋರುವುದು ಶರಣಾಗತಿ. ಗುರುವಿನ ಮೂಲಕ ದೇವರಿಗೆ ಜೀವಾತ್ಮನನ್ನು ಒಪ್ಪಿಸುವುದು ಭಾರನ್ಯಾಸ. ಆತ್ಮ ವಸ್ತುವನ್ನು ಭಗವಂತನಿಗೆ ಒಪ್ಪಿಸುವ ಅನುಷ್ಠಾನವೇ ಪ್ರಪತ್ತಿ. ಜೀವರು ರಕ್ಷಾಪೇಕ್ಷೆಯನ್ನು ವ್ಯಕ್ತಪಡಿಸಿ ಶರಣು ಹೊಂದಬೇಕು.

2) ಜೀವಿಗಳನ್ನು ರಕ್ಷಿಸಲು ಹೊರಟಿರುವ ಭಗವಂತನನ್ನು ತಡೆಯದಿರುವುದು, ಅವನಿಗೆ ನಾವು ಪರತಂತ್ರರೆಂಬ ಜ್ಞಾನ ಹೊಂದಿರುವುದು ಪ್ರಪತ್ತಿ. ಅದಕ್ಕಾಗಿ ನಾವು ಅನುಷ್ಠಾನ ಮಾಡಬೇಕಾಗಿಲ್ಲ.

**9.** 1) ಜ್ಞಾನ, ವಿರಕ್ತಿ ಉಳ್ಳವರು, ವಿಳಂಬ ಸಹಿಸುವವರು ಭಕ್ತಿಗೆ ಅಧಿಕಾರಿಗಳು, ಆದರೆ ಅಜ್ಞಾನಿ, ಅಶಕ್ತ, ದುರ್ಬಲ, ಅನನ್ಯಗತಿಯುವ, ಅಕಿಂಚನ, ವಿಳಂಬ ಸಹಿಸದವ ಇವರೆಲ್ಲ ಪ್ರಪತ್ತಿಗೆ ಅಧಿಕಾರಿಗಳು. ಪ್ರಪತ್ತಿಯು ಯಾವಾಗಲೂ ಭಗವಂತನ ಅನುಗ್ರಹವನ್ನು ಉಂಟುಮಾಡುವುದರಿಂದ ದೇವರಲ್ಲಿ ಮಾತ್ರ ಪ್ರಪತ್ತಿ ಮಾಡಬೇಕು.

2) ಸ್ವರೂಪ ಜ್ಞಾನಿಗಳು, ಭಕ್ತಿಯಲ್ಲಿ ವಿಶ್ವಾಸಮಾಂದ್ಯ ಉಳ್ಳವರು, ಪ್ರಪತ್ತಿಗೆ ಅಧಿಕಾರಿಗಳು. ಪ್ರಪತ್ತಿಯು ಭಗವಂತನ ಅನುಗ್ರಹವನ್ನು ಉಂಟುಮಾಡಿಯೇ ಮಾಡುತ್ತದೆ ಎಂದು ಹೇಳಲಾಗದು. ಆದಕಾರಣ ಆಚಾರ್ಯರ ಮತ್ತು ಭಾಗವತರ ಮೂಲಕ ಅವರ ಜೊತೆಯಲ್ಲಿ ದೇವರಲ್ಲಿ ಪ್ರಪತ್ತಿ ಮಾಡಬೇಕು.

**10.** 1) ಪ್ರಪತ್ತಿಗೆ ಎಲ್ಲ ಜಾತಿಯವರೂ ಅರ್ಹರಾದರೂ, ನಿತ್ಯ ನೈಮಿತ್ತಿಕ ಕರ್ಮಗಳನ್ನು ಕರ್ಮದ ಫಲತ್ಯಾಗದೊಂದಿಗೆ ಮಾಡಬೇಕು.

2) ನಿತ್ಯ ನೈಮಿತ್ತಿಕ ಕರ್ಮಗಳು ಅವಶ್ಯ ಕರ್ತವ್ಯಗಳಲ್ಲವಾದುದರಿಂದ ಪ್ರಪನ್ನನು ಅವುಗಳನ್ನು ತ್ಯಜಿಸಿದಾಗ ಮಾತ್ರ ಅವನಿಗೆ ಪ್ರಪತ್ತಿ ಫಲಿಸುತ್ತದೆ.

**11.** 1) ಭಗವಂತನಿಗೆ ಪ್ರೀತಿಯಿಂದ ಕೂಡಿದ ಉಪಾಸನೆಯು, ಅಂದರೆ ಭಕ್ತಿಯು ವಿಹಿತವಾದುದು.

2) ಭಗವಂತನಿಗೆ ಶೇಷ ಭೂತರಾದ ಜೀವಿಗಳಿಗೆ ಉಪಾಸನೆಯು ವಿರುದ್ಧ ವಾದುದು.

**12.** 1) ಶ್ರೀವೈಷ್ಣವರಿಗೆ ಧರ್ಮಶಾಸ್ತ್ರ ಮತ್ತು ಆಗಮ ಎರಡೂ ಪ್ರಮಾಣಗಳೇ ಆದರೂ ಅವುಗಳಲ್ಲಿ ಪರಸ್ಪರ ವಿರೋಧ ಬಂದಾಗ ಧರ್ಮ ಶಾಸ್ತ್ರಕ್ಕೇ ಪ್ರಾಧಾನ್ಯ ನೀಡಬೇಕು. ವರ್ಣಾಶ್ರಮ ಧರ್ಮವನ್ನು ಪರಿತ್ಯಜಿಸದೆ ಅನುಷ್ಠಿಸ ಬೇಕು, ವೈದಿಕಾಚಾರವನ್ನು ಮೀರಬಾರದು.

2) ಋಷಿಗಳು ರಚಿಸಿರುವ ಧರ್ಮ ಶಾಸ್ತ್ರಗಳಿಗಿಂತ ಭಗವಂತನೇ ಹೇಳಿ ಬರೆ ಸಿರುವ ಪಾಂಚರಾತ್ರ ಆಗಮವೇ ಹೆಚ್ಚು ಮುಖ್ಯ ಹಾಗೂ ಅಧಿಕಾರಿಯುತ ವಾದುದು. ಪ್ರಪತ್ತಿ ಶಾಸ್ತ್ರ ಮುಖ್ಯವಾದ ಶ್ರೀವೈಷ್ಣವ ಮತದಲ್ಲಿ ಕರ್ಮ ಶಾಸ್ತ್ರಕ್ಕೆ ಪ್ರಾಮುಖ್ಯ ನೀಡಿದರೆ ತಪ್ಪಾಗುತ್ತದೆ. ಆದಕಾರಣ ವರ್ಣಾಶ್ರಮ ಧರ್ಮವನ್ನು ಪ್ರಪನ್ನನು ತ್ಯಾಗ ಮಾಡಬೇಕು.

**13.** 1) ಪ್ರಪತ್ತಿಯಲ್ಲಿ ಆರು ಅಂಗಗಳೂ ಮುಖ್ಯವಾದ ಮೋಕ್ಷ ಸಾಧನಗಳು. ಇವೆಲ್ಲವನ್ನೂ ನಿಯಮದಂತೆ ಮಾಡಿದಾಗ ಮಾತ್ರ ಪಾಪಗಳು ನಾಶವಾಗಿ ಭಗವದನುಭವ ಮತ್ತು ಕೈಂಕರ್ಯ ಮುಂತಾದ ಪ್ರಪತ್ತಿಯ ಫಲ ಸಿಗುತ್ತದೆ.

2) ಪ್ರಪತಿಯ ಆರು ಅಂಗಗಳು ಉಪಯುಕ್ತ, ಒಳ್ಳೆಯವು ಆದರೂ ಪ್ರಪನ್ನನು ಅವುಗಳನ್ನು ಅನುಷ್ಠಿಸಬೇಕಾಗಿಲ್ಲ.

**14.** 1) ಸಿದ್ಧೋಪಾಯಕ್ಕೆ ಪ್ರಾಧಾನ್ಯವಿದ್ದರೂ, ಸಾಧನೋಪಾಯ ನಿಷಿದ್ಧವಲ್ಲ.

2) ಸಿದ್ಧೋಪಾಯನಾದ ಭಗವಂತನೇ ಸಾಧನವಾದ ಕಾರಣ ಇತರ ಉಪಾಯ ಗಳು ಅವಶ್ಯಕವಲ್ಲ.

**15.** 1) ಪ್ರಪತ್ತಿಯನ್ನು ಆಗಾಗ ಮಾಡಬೇಕಾಗುತ್ತದೆ, ಬುದ್ಧಿಪೂರ್ವಕವಾಗಿ ಪಾಪ ಮಾಡಿದಾಗ ತನ್ನ ಶಕ್ತಿಗನುಸಾರವಾಗಿ ಧರ್ಮ ಶಾಸ್ತ್ರದಲ್ಲಿ ಹೇಳಿರುವಂತಹ ಪ್ರಾಯಶ್ಚಿತ್ತ ಪುಣ್ಯ ಕರ್ಮಗಳನ್ನು ಮಾಡಬೇಕು. ಏಕೆಂದರೆ ಮುಂದೆ ಉಂಟಾಗುವ ಪಾಪಗಳನ್ನು ಕಳೆಯಲು ಮೊದಲೇ ಪ್ರಪತ್ತಿ ಮಾಡಿಕೊಳ್ಳಲು ಸಾಧ್ಯವಿಲ್ಲ.

2) ಪ್ರಪತ್ತಿಯನ್ನು ಒಂದು ಸಲ ಮಾಡಿದರೆ ಸಾಕು. ಪ್ರಪನ್ನನು ಬುದ್ಧಿ ಪೂರ್ವಕವಾಗಿ ಪಾಪ ಮಾಡಿದರೂ, ಆಚಾರ್ಯ—ಭಾಗವತ ಶರಣಾಗತಿಯ ಮೂಲಕ ಭಗವಂತನ ದಯೆಗೆ ಪಾತ್ರನಾಗಿರುವ ಕಾರಣ, ಧರ್ಮ ಶಾಸ್ತ್ರದಲ್ಲಿ ಹೇಳಿರುವ ಪ್ರಾಯಶ್ಚಿತ್ತ ಕರ್ಮಗಳನ್ನು ಮಾಡಬೇಕಾದ ಅವಶ್ಯಕತೆ ಇಲ್ಲ.

ಪಾಂಚರಾತ್ರ ಆಗಮದಲ್ಲಿ ಹೇಳಿರುವಂತೆ ಕರ್ಮಕ್ಕಿಂತ ಭಕ್ತಿ, ಪ್ರಪತ್ತಿ, ನಾಮ-ಮಂತ್ರಜಪ, ಇವೇ ಹೆಚ್ಚು ಪರಿಣಾಮಕಾರಿಯಾದುವು.

**16.** 1) ಪ್ರಪನ್ನನಾದರೂ ಜಾತಿಯು ಹೋಗದು. ಕೆಳಗಿನ ಜಾತಿಗೆ ಸೇರಿದ ಪ್ರಪನ್ನನನ್ನು ದ್ವಿಜನಾದವನು ಬಾಯಿ ಮಾತಿನಿಂದ ಮಾತ್ರ ಪೂಜಿಸಬೇಕು. ಧರ್ಮಶಾಸ್ತ್ರದಲ್ಲಿ ಹೇಳಿರುವ ಜಾತಿಯ ಸ್ಥಾನವು ಮೂಲಭೂತವಾದುದು. ಬೇರಾವ ಅರ್ಹತೆಯೂ ಜಾತಿಯ ಸ್ಥಾನವನ್ನು ಬದಲಾಯಿಸಲಾರದು. ಬ್ರಾಹ್ಮಣರು ಮಾತ್ರ ಬ್ರಹ್ಮವಿದ್ಯೆ ಕಲಿಸಲು, ಆಚಾರ್ಯರಾಗಲು ಅರ್ಹರು.

ಭಕ್ತ, ಭಾಗವತರುಗಳಲ್ಲಿ ಶ್ರೀ ವೈಷ್ಣವತ್ವ ಇರುವುದು ನಿಜ. ಅವರಲ್ಲಿ ಶ್ರೇಷ್ಠರಾದ ಆಳ್ವಾರುಗಳನ್ನು ಎಲ್ಲ ಶ್ರೀ ವೈಷ್ಣವರೂ ಗೌರವಿಸಬೇಕು. ಆದರೂ ಮೇಲು ಜಾತಿಯ ಶ್ರಿ ವೈಷ್ಣವರು, ಕೆಳ ಜಾತಿಯ ಭಕ್ತಭಾಗವತರಿಗೆ, ಮೇಲು ಜಾತಿಯ ಭಕ್ತಭಾಗವತರಿಗೆ ಕೊಡುವಷ್ಟು ಗೌರವ ತೋರಿಸಬೇಕಾದು ದಿಲ್ಲ. ಏಕೆಂದರೆ ಧರ್ಮ ಶಾಸ್ತ್ರವು ವಿಧಿಸಿರುವ ಜಾತಿ ನಿಯಮವನ್ನು ಮೀರು ವಂತಿಲ್ಲ.

ಋಷಿಗಳು ಆಳ್ವಾರುಗಳಿಗಿಂತ ಶ್ರೇಷ್ಠರು. ಅನೇಕ ಆಳ್ವಾರುಗಳು ಕೆಳ ಜಾತಿಯಲ್ಲಿ ಜನಿಸಿ, ವರ್ಣಾಶ್ರಮ ಧರ್ಮವನ್ನು ಪಾಲಿಸಿಲ್ಲ. ಋಷಿಗಳು ಶ್ರೇಷ್ಠರೆಂದು ಹಿಂದೂಗಳೆಲ್ಲ ಒಪ್ಪಿದ್ದಾರೆ. ಆದರೆ ಆಳ್ವಾರುಗಳ ಶ್ರೇಷ್ಠತೆ ಯನ್ನು ಶ್ರೀವೈಷ್ಣವರು ಮಾತ್ರ ಒಪ್ಪಿದ್ದಾರೆ. ಋಷಿಗಳ ಕೃತಿಗಳು ಸರ್ವ ವ್ಯಾಪಿಯಾದ ಸಂಸ್ಕೃತದಲ್ಲಿವೆ. ಆಳ್ವಾರುಗಳ ಕೃತಿಗಳು ಪ್ರಾದೇಶಿಕ ಭಾಷೆ ಯಾದ ತಮಿಳಿನಲ್ಲಿವೆ. ಕೇವಲ ದಿವ್ಯ ಪ್ರಬಂಧಗಳ ಅಧ್ಯಯನದಿಂದ ಯಾರೂ ಪ್ರಪತ್ತಿಗೆ ಅರ್ಹರಾಗಲಾರರು.

ಯೋಗ್ಯತೆ, ಅರ್ಹತೆಗಳನ್ನು ನೋಡಿ, ಗಂಡಸರು ಹಾಗೂ ಮೇಲು ಜಾತಿ ಯವರಿಗೆ ಪ್ರಣವದೊಂದಿಗೆ, ಸ್ತ್ರೀ-ಶೂದ್ರಾದಿಗಳಿಗೆ ಪ್ರಣವವಿಲ್ಲದೆ, ತಿರು ಮಂತ್ರವನ್ನು ಬೋಧಿಸಬೇಕು.

2) ಪ್ರಪನ್ನನಿಗೆ, ಅವನು ಮೊದಲು ಯಾವ ಜಾತಿಯವನಾಗಿದ್ದರೂ, ದೇವ ರಂತೆ ಭಾವಿಸಿ ಗೌರವಿಸಬೇಕು. ಪ್ರಪನ್ನನು ದ್ವಿಜರಿಂದಲೂ ಕುಲದೇವತೆ ಯಂತೆ ಪೂಜಿಸಲ್ಪಡಲು ಅರ್ಹನಾಗಿರುತ್ತಾನೆ. ಆಗಮ ಶಾಸ್ತ್ರದಂತೆ ದೇವರ ದೃಷ್ಟಿಯಲ್ಲಿ ಶ್ರೀ ವೈಷ್ಣವರಾದವರು ಯಾವುದೇ ಜಾತಿಯವರಾಗಿರಲಿ ಸಮಾ ನರು ಹಾಗೂ ಎಲ್ಲ ಸಾಧನ ಸಿದ್ಧಿಗೆ ಅರ್ಹರು. ಆಚಾರ್ಯನಾಗಲು ಜಾತಿ ಮುಖ್ಯವಲ್ಲ. ಆಚಾರ್ಯನಾಗಿರುವವನಲ್ಲಿ ಜಾತಿಯನ್ನು ಹುಡುಕಬಾರದು. ಯೋಗ್ಯತೆ-ಅರ್ಹತೆಗಳಿರುವ ಚಂಡಾಲನೂ ಗುರುವಾಗಬಲ್ಲ.

ಎಲ್ಲ ಜಾತಿ, ವರ್ಗದ ಜನರಿಗಿಂತಲೂ ಭಕ್ತಭಾಗವತರು ಶ್ರೇಷ್ಠರು. ವೈಕುಂಠದಲ್ಲಿರುವ ನಿತ್ಯರಾಗಿದ್ದು, ದೇವರ ಪ್ರತಿನಿಧಿಯಾಗಿ ಅವನ ಸಂದೇಶ

ವನ್ನು ಹರಡುವ ಸಲುವಾಗಿ ಭೂಮಿಯ ಮೇಲೆ ಅವತರಿಸಿದ ಆಳ್ವಾರುಗಳು, ಮುಕ್ತರೂ ಅಲ್ಲದ ಋಷಿಗಳಿಗಿಂತ ಶ್ರೇಷ್ಠರು. ವಸಿಷ್ಠ–ವ್ಯಾಸ ಮುಂತಾದವರು ಶ್ರೇಷ್ಠ ಕುಲದಿಂದ ಜನಿಸಿದವರಲ್ಲವಾದ ಕಾರಣ ಜಾತಿ ಶ್ರೇಷ್ಠತೆಯೇ ಮುಖ್ಯವಲ್ಲ.

ಆಳ್ವಾರುಗಳು ಋಷಿಗಳಿಗಿಂತ ಕರ್ಮ ಜ್ಞಾನದಲ್ಲಿ ಕಮ್ಮಿಯಾಗಿದ್ದರೂ, ಭಕ್ತಿ–ಪ್ರಪತ್ತಿಗಳಲ್ಲಿ ಹೆಚ್ಚಿನವರಾಗಿದ್ದಾರೆ. ಉಭಯ ವೇದಾಂತಿಗಳೆಂದು ಕರೆದುಕೊಳ್ಳುವ ಶ್ರೀವೈಷ್ಣವರು ದ್ರಾವಿಡ ವೇದಾಂತವು ಸಂಸ್ಕೃತ ವೇದಾಂತಕ್ಕೆ ಸಮನಲ್ಲ ಎಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ನಾಥ, ಯಾಮುನ, ರಾಮಾನುಜ ಎಂಬೀ ಮುನಿತ್ರಯರು ಆಳ್ವಾರುಗಳಿಗೆ ಪ್ರಾಧಾನ್ಯ ಕೊಟ್ಟಿದ್ದಾರೆ. ದಿವ್ಯ ಪ್ರಬಂಧಗಳನ್ನು ಅಧ್ಯಯನ ಮಾಡುವವನು ಪ್ರಪನ್ನ ಎನ್ನಲು ಅಡ್ಡಿಯಿಲ್ಲ.

ಆಗಮ ಶಾಸ್ತ್ರದಂತೆ ಲಿಂಗ ಜಾತಿಭೇದವಿಲ್ಲದೆ, ಎಲ್ಲರಿಗೂ ಪ್ರಣವದೊಂದಿಗೆ ತಿರುಮಂತ್ರವನ್ನು ಉಪದೇಶಿಸಬೇಕು. ಏಕೆಂದರೆ ವೇದ ಮಂತ್ರವು ಅಕ್ಷರವೊಂದನ್ನು ತೆಗೆದಾಗ ಮಂತ್ರವೆನಿಸಲಾರದು.

17. 1) ವಿಭುವಾದ ಭಗವಂತನು ಅಣುವಾದ ಜೀವಾತ್ಮನಲ್ಲಿ ವ್ಯಾಪಿಸಿರುವುದು ಎಂದರೆ ಹೊರಗೆ ಇದ್ದು ನಿಯಮಿಸುವುದೇ ಹೊರತು ಒಳಗೆ ಇರುವುದಲ್ಲ. ಅಂದರೆ ಬೇರೆ ಬೇರೆಯಾಗಿ ಅಸ್ತಿತ್ವದಲ್ಲಿರುವುದು ಎಂದರ್ಥ.

2) ಸರ್ವಶಕ್ತ, ಸರ್ವವ್ಯಾಪಿ ಆಗಿರುವ ಭಗವಂತನು ಜೀವರಲ್ಲೆಲ್ಲ ಪೂರ್ಣವಾಗಿ ಅಂತರ್ವ್ಯಾಪಿಯಾಗಿರಲು ಶಕ್ತನಾಗಿದ್ದಾನೆ. ಅವನು ವಿಶ್ವಾತೀತನಾಗಿಯೂ ಜಗದಂತರ್ಯಾಮಿಯಾಗಿ ಇರಬಲ್ಲ.

18. 1) ಮೋಕ್ಷ ಹೊಂದುವುದು ಜೀವಾತ್ಮನಿಗೆ ಲಾಭ. ಪ್ರಪತ್ತಿಯಿಂದ ಸಿಗುವ ಮೋಕ್ಷದಿಂದ ಪರಮಾತ್ಮನನ್ನು ಪಡೆಯುವುದೇ ಜೀವಾತ್ಮನಿಗೆ ಫಲ. ಸಂಸಾರದಿಂದ ಬಿಡುಗಡೆ ಸಿಗುವ ಮೋಕ್ಷದಿಂದ ಜೀವಾತ್ಮನಿಗೆ ಪರಮಪದ ದೊರಕಿದರೆ, ದೇವರ ಸೇವೆ ಮಾಡುವ ಸೇವಕನೆಂಬ ಸಂತೋಷ ಪ್ರಪನ್ನನಿಗೆ ಉಂಟಾಗುತ್ತದೆ. ಭಗವಂತನ ಸೇವೆ, ಕೈಂಕರ್ಯ ಮಾಡಲು ಆಶಿಸುವ ಮುಕ್ತಾತ್ಮನಿಗೆ ಸಿಕ್ಕ ಅನುಕೂಲವಿದು.

ಜೀವನ ಪೂರ್ತಿ ದ್ವಯಮಂತ್ರೋಚ್ಚಾರಣೆ, ಭಗವನ್ನಾಮಸ್ಮರಣೆ ಮಾಡಿದರೂ ಅವು ಮೋಕ್ಷ ಪಡೆಯಲು ಸಾಲದು. ಆದುದರಿಂದ ಅಂತಿಮವಾದ ಮರಣ ಕಾಲದಲ್ಲಿ ಮಾಡಿದ ಮಂತ್ರ ಜಪ, ನಾಮಸ್ಮರಣೆಗಳು ಮಾತ್ರ ಮೋಕ್ಷವನ್ನು ಕೊಡಬಲ್ಲವು.

ಮುಕ್ತಿಯಲ್ಲಿ ತಾರತಮ್ಯವಿಲ್ಲ, ಧ್ಯಾನ ಮಾಡಿ ಆತ್ಮ ಸಾಕ್ಷಾತ್ಕಾರ ಪಡೆದವರು ಇರುವ ಸ್ವರ್ಗದಲ್ಲಿ ಇರುವ ಒಂದು ಸ್ಥಳವಾದ ಕೈವಲ್ಯವು ಮೋಕ್ಷ ಸ್ಥಿತಿ

ಯಲ್ಲ. ವಿವಿಧ ಸಾಧನೆಗಳಿಂದ ಮುಕ್ತನಾದ ಆತ್ಮನು ಕೈವಲ್ಯವೆಂಬ ವಿಶೇಷ ಆವಾಸಸ್ಥಾನದಲ್ಲಿ ದೇವರು ಮತ್ತಿತರ ಜೀವಾತ್ಮರ ಜೊತೆಯಿಲ್ಲದೆ ಇರುತ್ತಾನೆ. ಈ ಕೈವಲ್ಯವು ವಿರಜಾ ನದಿಯ ಈ ಕಡೆ ಇರುವುದರಿಂದ ಕೈವಲ್ಯ ಪಡೆದವನು ಮತ್ತೆ ಸಂಸಾರ ಬಂಧನದಲ್ಲಿ ಸಿಕ್ಕಿಕೊಳ್ಳಬೇಕಾಗುತ್ತದೆ. ಆದರೂ ಇಲ್ಲಿರುವಾಗ ಭಗವಂತನ ಧ್ಯಾನಮಾಡಿ ಮೋಕ್ಷ ಪಡೆಯಬಹುದು.

ಪರಮಾತ್ಮನ ಅಧೀನದಲ್ಲಿರುವ ಜೀವಾತ್ಮನೂ ಸಹ ಸರ್ವಜ್ಞ, ಸರ್ವಶಕ್ತ, ಆನಂದಮಯ ಆಗಿದ್ದರೂ, ಒಮ್ಮೆ ತಪ್ಪು ಕರ್ಮಮಾಡಿ ಪ್ರಕೃತಿಯ ಬಲೆಗೆ ಸಿಕ್ಕಿಹಾಕಿಕೊಂಡಿದ್ದು, ಈ ಪ್ರಕೃತಿಯಿಂದ ಬಿಡುಗಡೆ ಹೊಂದುವುದೇ ಮೋಕ್ಷವೆನಿಸುತ್ತದೆ. ಬದ್ಧ ಜೀವಾತ್ಮನು ಮುಕ್ತ ಜೀವಾತ್ಮನಾಗಲು ಯತ್ನಿಸಿ ನಿತ್ಯ ಜೀವಾತ್ಮನಾಗಲು ಆಶಿಸಬೇಕು. ಮುಕ್ತರು ಹಾಗೂ ನಿತ್ಯರಿಗೆ ಪರಮಾತ್ಮನ ಸೃಷ್ಟಿ ಸ್ಥಿತಿಲಯ ಕಾರ್ಯಗಳಲ್ಲಿ ಭಾಗವಹಿಸಲು ಅಧಿಕಾರವಿಲ್ಲ.

ಲೀಲಾವಿಭೂತಿ ಎನಿಸಿದ ಪ್ರಪಂಚ ಹಾಗೂ ನಿತ್ಯವಿಭೂತಿ ಎನಿಸಿದ ಪರಮಪದ ಇವೆರಡರ ಮಧ್ಯೆ ವಿರಜಾ ನದಿ ಇದೆ. ಮುಕ್ತಾತ್ಮನು ಈ ನದಿಯಲ್ಲಿ ಸ್ನಾನಮಾಡಿದಾಗ ಎಲ್ಲ ಕೊಳೆ–ಪಾಪಗಳೂ ನಶಿಸುವುದರಿಂದ, ಪರಮಪದವನ್ನು ಸೇರಿದ ಜೀವಾತ್ಮನು ಮಾತ್ರ ಇಹ ಸಂಸಾರದ ಬಂಧನಕ್ಕೆ ಒಳಗಾಗುವುದಿಲ್ಲ.

2) ಜೀವಾತ್ಮನು ಮೋಕ್ಷ ಹೊಂದುವುದು ಭಗವಂತನಿಗೇ ಲಾಭ. ಜೀವಾತ್ಮನನ್ನು ಪಡೆಯುವುದು ಭಗವಂತನಿಗೆ ಮುಖ್ಯ ಫಲ. ಕರ್ಮ, ಕರ್ಮಫಲಗಳನ್ನು ದೇವರಿಗೆ ಒಪ್ಪಿಸಿದ ಪ್ರಪನ್ನನು ಆಸೆ–ಸಂತೋಷಗಳಿಗೆ ಹಾತೊರೆಯುವುದು ಸರಿಯಲ್ಲ. ಆದುದರಿಂದ ಮುಕ್ತಿ ಪಡೆದವನಿಗೆ ಏನೂ ಅನುಕೂಲವಿಲ್ಲ. ಮುಕ್ತ ಜೀವಾತ್ಮನಾದ ಸೇವಕನ ಕೈಂಕರ್ಯದಿಂದ ಯಜಮಾನನಾದ ಭಗವಂತನಿಗೇ ಅನುಕೂಲವಿದೆ.

ಅಂತಿಮ ಸ್ಮರಣೆಯೇ ಮೋಕ್ಷಕ್ಕೆ ಸಾಧನ ಎಂಬುದಕ್ಕೆ ಪ್ರಮಾಣವಿಲ್ಲ. ರೋಗ, ಶಾರೀರಿಕ ದೌರ್ಬಲ್ಯವಿರುವ, ಪ್ರಜ್ಞೆ ಇಲ್ಲದಿರುವ, ಅಂತಿಮ ಮರಣ ಸಮಯದಲ್ಲಿ ಅನೇಕರಿಗೆ ಭಗವಂತನ ಧ್ಯಾನಮಾಡಲು ಸಾಧ್ಯವಾಗದಿರಬಹುದು. ಆದುದರಿಂದ ಆರೋಗ್ಯ, ಪ್ರಜ್ಞೆಗಳಿರುವಾಗ ದ್ವಯಮಂತ್ರವನ್ನು ಜಪಿಸುತ್ತ ಭಗವಂತನ ನಾಮಸ್ಮರಣೆ ಮಾಡುತ್ತಿರಬೇಕು.

ಮೋಕ್ಷಾನುಭವದಲ್ಲಿ ತಾರತಮ್ಯ ಉಂಟು. ಕೈವಲ್ಯವು ವಿರಜಾ ನದಿಯ ಆಕಡೆ ಪರಮಪದಕ್ಕೆ ಸೇರಿದಂತೆ ಇರುತ್ತದೆ. ಆದುದರಿಂದ ಕೈವಲ್ಯದಲ್ಲಿರುವ ಜೀವಾತ್ಮನೂ ಪ್ರಕೃತಿ ಬಂಧನದಲ್ಲಿ ಸಿಲುಕುವುದಿಲ್ಲ. ಭಗವಂತನು ಇಚ್ಛಿಸಿದಲ್ಲಿ ಮುಕ್ತರು ಹಾಗೂ ನಿತ್ಯರು ಪರಮಾತ್ಮನ ಸೃಷ್ಟಿ ಸ್ಥಿತಿಲಯ ಕಾರ್ಯಗಳಲ್ಲಿ ಭಾಗವಹಿಸಬಹುದು.

**ಇತರ ಆಚಾರಗಳು**

**1.** 1) ಭಗವದಾರಾಧನೆಯಲ್ಲಿ ಸಂಸ್ಕೃತ ಹೆಚ್ಚಾಗಿದ್ದು ಘಂಟಾನಾದವಿರಬೇಕು.

2) ಆರಾಧನೆಯಲ್ಲಿ ತಮಿಳು ಹೆಚ್ಚಾಗಿದ್ದು, ಘಂಟಾನಾದದ ಅವಶ್ಯಕತೆಯಿಲ್ಲ.

**2.** 1) ಶ್ರೀ ವೈಷ್ಣವನಿಗೆ ಅವಶ್ಯಕವಾದ ಪಂಚಸಂಸ್ಕಾರದಲ್ಲಿನ ಚಕ್ರಾಂಕನ ಕಾಲದಲ್ಲಿ ಸಂನ್ಯಾಸಿಯು ಶಂಖ ಚಕ್ರಗಳಲ್ಲಿರುವ ಲೋಹದ ಕಡ್ಡಿಗಳನ್ನು ಮುಟ್ಟದೆ ಅದನ್ನು ಬಾಳೆಯದೆಲೆ ಅಥವಾ ವೀಳೆಯದೆಲೆಯಿಂದ ಹಿಡಿದು ಮುದ್ರಾಧಾರಣ ಮಾಡಬೇಕು.

2) ಪಂಚ ಸಂಸ್ಕಾರವು ಬಲಾತ್ಕಾರವಿಲ್ಲ. ಸಂನ್ಯಾಸಿಯಾದರೂ ಲೋಹದ ಕಡ್ಡಿಗಳನ್ನು ಮುಟ್ಟಿ ಉಪಯೋಗಿಸಬಹುದು.

**3.** 1) ಸಂನ್ಯಾಸಿಯು ತನ್ನ ಗುರುವನ್ನು ಬಿಟ್ಟು ಉಳಿದ ಗೃಹಸ್ಥರನ್ನು ಗೌರವಿಸಬಾರದು ಹಾಗೂ ಅವರಿಗೆ ನಮಸ್ಕರಿಸಬಾರದು.

2) ಎಲ್ಲ ಶ್ರೀವೈಷ್ಣವರೂ ಸಮಾನರಾದುದರಿಂದ ಸಂನ್ಯಾಸಿಯೂ ಸಹ ಯೋಗ್ಯತೆ ಅರ್ಹತೆಗಳುಳ್ಳ ಗೃಹಸ್ಥನಿಗೆ ಗೌರವ ತೋರಿಸಬೇಕು.

**4.** 1) ದೇವರಿಗೆ ಅಥವಾ ಹಿರಿಯರಿಗೆ ಎರಡು ಅಥವಾ ಹೆಚ್ಚು ಬಾರಿ ನಮಸ್ಕರಿಸಬೇಕು. ದೊಡ್ಡವರು ಚಿಕ್ಕವರಿಗೆ ನಮಸ್ಕಾರ ಮಾಡಬಾರದು.

2) ನಮಸ್ಕಾರವು ಒಂದೇಬಾರಿ ಸಾಕು. ದೊಡ್ಡವರು ಚಿಕ್ಕವರು ಪರಸ್ಪರ ನಮಸ್ಕರಿಸಬೇಕು.

**5.** 1) ಸರ್ಪದ ಹೆಡೆಯಲ್ಲಿರುವ ಆಕಾರದಲ್ಲಿ ಹಣೆಯ ಮೇಲೆ ಭಗವತ್ಪ್ರಸಾದ ರೂಪವಾದ ಪುಂಡ್ರ ಅಥವಾ ನಾಮ ಇಡುವುದು ಶಾಸ್ತ್ರಸಮ್ಮತ. ಅದು ಇಂಗ್ಲೀಷಿನ U ಅಕ್ಷರದಂತೆ ಇರಬೇಕು. ಮೂಗಿನ ಮೇಲೆ ಇರಬಾರದು.

ನಾಮದ ಮಧ್ಯೆ ಇರುವ, ಲಕ್ಷ್ಮಿಗೆ ಸಂಬಂಧಿಸಿದ ಶ್ರೀ ಚೂರ್ಣವು ಕೆಂಪು ಅಥವಾ ಹಳದಿ ಆಗಿರಬಹುದು.

2) ಭಗವಂತನ ಪಾದರೂಪದಲ್ಲಿ ಇಡದ ನಾಮವು ಶಾಸ್ತ್ರ ಸಮ್ಮತವಲ್ಲ. ಅದು ಇಂಗ್ಲೀಷ್‌ನ Y ಅಕ್ಷರದಂತಿರಬೇಕು. ಮೂಗಿನ ಮೇಲೆ ಇರಬೇಕು.

ಶ್ರೀ ಚೂರ್ಣವು ಕೆಂಪೇ ಆಗಿರಬೇಕು.

**6.** 1) ವೇದಾಂತ ದೇಶಿಕರ ವಿಗ್ರಹಪೂಜೆ ಮುಖ್ಯ. ರಾಮಾನುಜ ದಯಾಪಾತ್ರಂ ಎಂಬ ತನಿಯನ್‌ನೊಡನೆ ಭಗವದಾರಾಧನೆಯ ಶಾತ್ತುಮೊರೆ ಕೊನೆಗೊಳ್ಳಬೇಕು.

2) ಮಣವಾಳ ಮಾಮುನಿಗಳ ವಿಗ್ರಹಪೂಜೆ ಮುಖ್ಯ. ಶ್ರೀ ಶೈಲೇಶ ದಯಾಪಾತ್ರಂ ಎಂಬ ತನಿಯನ್‌ನೊಡನೆ ಭಗವದಾರಾಧನೆಯ ಶಾತ್ತುಮೊರೆ ಮುಗಿಯಬೇಕು.

**7.** 1) ಊಟಕ್ಕೆ ಬಡಿಸುವುದು ಸಿಹಿ ವಸ್ತುವಿನಿಂದ ಆರಂಭವಾಗಬೇಕು.
2) ಅದು ಉಪ್ಪು ಹಾಕಿದ ವಸ್ತುವಿನಿಂದ ಆರಂಭಗೊಳ್ಳಬೇಕು.

ಒಟ್ಟಿನಲ್ಲಿ ಈ ವಡಗಲೆ-ತೆಂಗಲೆ ಭೇದವು ಸಿದ್ಧಾಂತ ಗ್ರಂಥಗಳ ಅಧ್ಯಯನದಿಂದ ಆದುದಲ್ಲ. ಈ ಭೇದಗಳಿದ್ದರೂ ಎರಡೂ ಪಂಗಡದವರು ರಾಮಾನುಜರ ಶ್ರೀಭಾಷ್ಯ, ನಮ್ಮಾಳ್ವಾರರ ಪ್ರಬಂಧ ಎರಡಕ್ಕೂ ಗೌರವ ಕೊಡುತ್ತೇವೆಂದು ಹೇಳಿ ತಮ್ಮನ್ನು ಉಭಯ ವೇದಾಂತಿಗಳೆಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಾರೆ. ಶರೀರಾತ್ಮಭಾವ ಎಂಬ ಪ್ರಧಾನ ಪ್ರತಿತಂತ್ರ ಸಿದ್ಧಾಂತದಲ್ಲಿ ಇಬ್ಬರಲ್ಲಿಯೂ ಪೂರ್ಣವಾದ ಒಮ್ಮತವಿದೆ. ಆಚಾರ್ಯ ರಾಮಾನುಜರ ದಿವ್ಯಾಜ್ಞೆಯನ್ನು ಶಿರಸಾವಹಿಸಿ ಎರಡೂ ಪರಂಪರೆಗಳಲ್ಲಿನ ಆಚಾರ್ಯರುಗಳು ಶ್ರೀಭಾಷ್ಯ ಮತ್ತು ಭಗವದ್ವಿಷಯಗಳೆರಡನ್ನೂ ಉಪದೇಶ ಮೂಲಕವಾಗಿ ಮತ್ತು ವ್ಯಾಖ್ಯಾನ ಗ್ರಂಥಗಳನ್ನು ರಚಿಸುವುದರ ಮೂಲಕ ಲೋಕದಲ್ಲಿ ಹರಡಲು ಶ್ರಮಿಸಿದ್ದಾರೆ. ಶ್ರೀಭಾಷ್ಯದ ವ್ಯಾಖ್ಯಾನವು ಸುದರ್ಶನಾಚಾರ್ಯರ ಶ್ರುತಪ್ರಕಾಶಿಕೆಯಲ್ಲೂ, ತಿರುವಾಯ್ಮೊಳಿಯ ವ್ಯಾಖ್ಯಾನವು ವಡಕ್ಕುತ್ತಿರು ವೀಧಿ ಪಿಳ್ಳೈರವರ ಈಡುಮುಪ್ಪತ್ತಾರಾಯಿರಪ್ಪಡಿಯಲ್ಲೂ ಚೆನ್ನಾಗಿ ಮೂಡಿ ಬಂದಿದೆ. ಈ ಎರಡು ವ್ಯಾಖ್ಯಾನ ಗ್ರಂಥಗಳ ಯೋಜನೆಯಲ್ಲಿ ಭೇದವಿದ್ದರೂ, ತಾತ್ಪರ್ಯ-ಸಾರಾರ್ಥಗಳಲ್ಲಿ ಭೇದವಿಲ್ಲ ಎಂಬುದು ಇವನ್ನು ಮತ್ಸರವಿಲ್ಲದೆ ಅಧ್ಯಯನ ಮಾಡಿದರೆ ತಿಳಿದು ಬರುತ್ತದೆ.

ವೇದ, ಪ್ರಬಂಧಗಳು ಶ್ರೀ ವೈಷ್ಣವರ ಎರಡು ಕಣ್ಣುಗಳಿದ್ದಂತೆ. ನಾಥಮುನಿಗಳ ವಂಶದ, ವಡಗಲೆ ಪಂಗಡಕ್ಕೆ ಸೇರಿದ, ಪಿಳ್ಳಾನ್‌ರವರೇ ರಾಮಾನುಜರ ಅಪೇಕ್ಷೆಯಂತೆ ಅವರ ನೇತೃತ್ವದಲ್ಲಿ ತಿರುವಾಯ್ಮೊಳಿಗೆ ಆರಾಯಿರಪ್ಪಡಿ ಎಂಬ ವ್ಯಾಖ್ಯಾನವನ್ನು ಬರೆದ ಮೊದಲಿಗರು. ವಡಗಲೆ ಪಂಗಡದ ಮೂಲ ಪುರುಷರೆನಿಸಿಕೊಳ್ಳುವ ವೇದಾಂತ ದೇಶಿಕರು ಸಂಸ್ಕೃತ ಗ್ರಂಥಗಳ ಜೊತೆಗೆ ದಿವ್ಯ ಪ್ರಬಂಧಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ತೆಂಗಲೆ ಪಂಗಡದ ಆಚಾರ್ಯರುಗಳಿಗೆಲ್ಲ ತಮಿಳಿನ ಜೊತೆಗೆ ಸಂಸ್ಕೃತವೂ ಚೆನ್ನಾಗಿ ತಿಳಿದಿದ್ದು ಸ್ತೋತ್ರ-ಗ್ರಂಥಗಳನ್ನು ಸಂಸ್ಕೃತದಲ್ಲಿ ಹಾಗೂ ಸಂಸ್ಕೃತ ತಮಿಳು ಸೇರಿರುವ ಮಣಿ ಪ್ರವಾಳದಲ್ಲಿ ರಚಿಸಿದ್ದಾರೆ. ತಮಿಳು ಪ್ರಬಂಧಗಳಿಗೂ ಪ್ರಾಮುಖ್ಯ ನೀಡಿದ ನಾಥ, ಯಾಮುನ, ರಾಮಾನುಜ ಮುನಿಗಳು ತಮ್ಮ ಗ್ರಂಥಗಳನ್ನು ರಚಿಸಿರುವುದು ಸಂಸ್ಕೃತದಲ್ಲಿ ಮಾತ್ರ. ಪೂರ್ವಾಚಾರ್ಯರೆಲ್ಲರೂ ತಮ್ಮ ಕೃತಿಗಳಲ್ಲಿ ಹಾಗೂ ಪ್ರವಚನಗಳಲ್ಲಿ ಎರಡೂ ಪಂಗಡಗಳ ಆಚಾರ್ಯರುಗಳ ಜೀವನ, ಕೃತಿ, ಬೋಧನೆಗಳಿಂದ ಉದಾಹರಿಸಿದ್ದಾರೆ. ಇವೆಲ್ಲವನ್ನೂ ವಿಚಾರಿಸಿ ನೋಡುವುದರಿಂದ ಈ ಭೇದವು ಕಮ್ಮಿಯಾಗುತ್ತದೆ.

ರಹಸ್ಯ ಮಂತ್ರಾರ್ಥ, ಶ್ರೀಭಾಷ್ಯ, ಭಗವದ್ವಿಷಯ, ನಲ್ಲಾನ್ ಚಕ್ರವರ್ತಿ, ತಾತಾಚಾರ್ಯ, ಶೋಮಾಶಿಯಾಂಡಾನ್, ಯತಿರಾಜ ಮಠ, ಪರಕಾಲ ಮಠ, ಅಹೋಬಿಲ ಮಠ, ಆಂಡವನ್ ಆಶ್ರಮ ಎಂಬೀ ಆಚಾರ್ಯ ಪರಂಪರೆಗಳಲ್ಲಿನ ಮುಖ್ಯ

ಆಚಾರ್ಯರುಗಳ ಜೀವನ, ಬೋಧನೆ, ಕೃತಿಗಳ ಪರಿಚಯಮಾಡಿಕೊಂಡು, ಸಾರವನ್ನು ಆರಿಸಿ ಜಳ್ಳನ್ನು ತೆಗೆದುಹಾಕಿ, ಭೇದವನ್ನು ಸಮನ್ವಯಮಾಡಿ ಸರಿಪಡಿಸಿ ಶ್ರೀವೈಷ್ಣವ ಮತವು ಒಂದುಗೂಡಿ ಅಭಿವೃದ್ಧಿ ಹೊಂದುವಂತೆ ಶ್ರಮಿಸಬೇಕಾದುದು ಎಲ್ಲ ಶ್ರೀ ವೈಷ್ಣವರ ಆದ್ಯಕರ್ತವ್ಯ. ಈ ದಿಸೆಯಲ್ಲಿ ಮಠಾಧೀಶರು, ವಿದ್ಯಾವಂತ ಯುವ ಜನರು ಪ್ರಾಮಾಣಿಕವಾಗಿ ಪ್ರಯತ್ನ ಮಾಡಬೇಕು.

ವಡಗಲೆಯ ದೇಶಿಕ, ತೆಂಕಲೆಯ ಜೀಯರ್ ಎಂಬ ಎರಡು ಮುಖ್ಯ ಆಚಾರ್ಯ ಪೀಠಗಳು ರಾಮಾನುಜ ದರ್ಶನದ ಎರಡು ಕಣ್ಣುಗಳಂತೆ ಬೆಳೆದು ಬಂದಿವೆ. ವಡಗಲೆ ಯವರ ಗ್ರಂಥನಿರ್ಮಾಣ, ತೆಂಗಲೆಯವರ ದೇವಾಲಯ ನಿರ್ಮಾಣ ಶ್ರೀ ವೈಷ್ಣವ ಮತವನ್ನು ಬೆಳೆಸಿವೆ. ಈ ಎರಡೂ ಪೀಠಗಳ ಸಂನ್ಯಾಸಿ ಆಚಾರ್ಯರುಗಳು ರಾಮಾ ನುಜ ಮತವನ್ನು ರಕ್ಷಿಸಿ, ಬೆಳೆಸಿ, ಪ್ರಚಾರ ಮಾಡುತ್ತಿದ್ದಾರೆ. ಈ ಪೀಠಗಳಿಗೆ ಸೇರಿದ ಆಚಾರ್ಯ ವಂಶದ ಅನೇಕ ನಿಷ್ಠಾವಂತ ಗೃಹಸ್ಥರೂ ಸ್ವಯಮಾಚಾರ್ಯ ಪುರುಷರಾಗಿ ಪ್ರಾಚೀನ ಕಾಲದಿಂದ ಬಂದ ತತ್ತ್ವಗಳ ಉಪದೇಶ, ಗ್ರಂಥಗಳ ನಿರ್ಮಾಣ, ಸಮಾಶ್ರಯಣ, ಪ್ರಪತ್ತಿಗಳನ್ನು ಮಾಡುತ್ತ ರಾಮಾನುಜ ಸಿದ್ಧಾಂತದ ಸಂವರ್ಧನೆಗೆ ಹಾಗೂ ಶ್ರೀವೈಷ್ಣವ ಸಮಾಜದ ಉದ್ಧಾರಕ್ಕೆ ಶ್ರಮಿಸುತ್ತಿದ್ದಾರೆ.

# ಅನುಬಂಧ

## 1. ಧರ್ಮದ ಅರ್ಥ ಮತ್ತು ಗುರಿ

ಪ್ರಪಂಚದಲ್ಲಿರುವ ಮಾನವರಲ್ಲಿ 1/3 ಭಾಗ ನಾಸ್ತಿಕರು. ಅವರಿಗೆ ಧರ್ಮ-ದೇವರುಗಳ ಬಗ್ಗೆ ಆಸಕ್ತಿ ಇಲ್ಲ. ಮತ್ತೆ 1/3 ಭಾಗ ನಾಸ್ತಿಕರೂ ಅಲ್ಲ, ಆಸ್ತಿಕರೂ ಅಲ್ಲ. ಅವರಿಗೆ ಧರ್ಮ ಇದ್ದರೂ ಸರಿ, ಇಲ್ಲದಿದ್ದರೂ ಸರಿ. ಆದರೆ ಉಳಿದ 1/3 ಭಾಗ ಆಸ್ತಿಕರಿಗೆ ಧರ್ಮದ ಆವಶ್ಯಕತೆ ಇದೆ.

ಧರ್ಮ ಎಂದರೇನು ? ಅದರ ಲಕ್ಷಣಗಳೇನು ? ಅದರಿಂದ ಆಗುವ ಪ್ರಯೋಜನಗಳೇನು ? ಎಂಬುದರ ಬಗ್ಗೆ ಇರುವ ವ್ಯಾಖ್ಯೆಗಳಲ್ಲಿ ಮುಖ್ಯವಾದುವು ಇವು :—

೧. ಧಾರಣಾದ್ಧರ್ಮ ಮಿತ್ಯಾಹುಃ ಧರ್ಮೋಧಾರಯತೇ ಪ್ರಜಾಃ ।
ತಸ್ಮಾದ್ಧರ್ಮಂ ಪ್ರಶಂಸಂತಿ ಧರ್ಮೋ ರಕ್ಷತಿ ರಕ್ಷಿತಃ ॥

೨. ಧೃತಿಃಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಂ ॥

೩. ಯಾವ ಕಟ್ಟು ಪಾಡು ಎಲ್ಲವನ್ನೂ ಸರಿಯಾಗಿ ಕಾಪಾಡಬಲ್ಲುದೋ, ಯಾವುದನ್ನು ನಾವು ಪಾಲಿಸಿದರೆ ಅದು ನಮ್ಮನ್ನು ಪಾಲಿಸುವುದೋ ಆ ವಿಧದ ನೀತಿ ನಿಯಮಗಳು ಧರ್ಮ.

೪. ಏನನ್ನು ಮೊದಲು ಏನನ್ನು ಅನಂತರ ಮಾಡಬೇಕೆಂದು ತಿಳಿಸುವುದು ಧರ್ಮ.

೫. ಯಾವ ವ್ಯವಸ್ಥೆ-ಚರ್ಯೆಗಳು ಲೋಕದ ಒಳ್ಳೆಯ ಸ್ಥಿತಿಗೆ ಸಾಧಕವಾಗಿ, ಜೀವಿಗಳಿಗೆ ಇಹದಲ್ಲಿ ಯೋಗಕ್ಷೇಮ, ಪರದಲ್ಲಿ ಸದ್ಗತಿ ಸಂಪಾದಿಸಿ ಕೊಡಬಲ್ಲುದೋ ಅದು ಧರ್ಮ.

೬. ಜೀವಿಯ ನೈಜ ಗುಣಗಳು ಮತ್ತು ಸಹಜ ಶಕ್ತಿಗಳು ಜಗತ್ತಿನ ಸಂಪರ್ಕ ದಿಂದ ಕೆಡದೆ ಉತ್ತಮಗೊಳ್ಳುತ್ತ ಜಗತ್ತಿಗೆ ಉಪಕಾರವಾಗುವಂತೆ, ಹಾಗೂ ಜಗತ್ತು ಜೀವಿಗಳ ಸಂಪರ್ಕದಿಂದ ಕೆಡದೆ ಉತ್ತಮಗೊಳ್ಳುತ್ತ ಜೀವಿಗಳಿಗೆ ಉಪಕಾರವಾಗು ವಂತೆ, ಯಾವ ಯಾವ ಚರ್ಯೆ, ಕಾರ್ಯ, ನೀತಿ, ನಿಯಮಗಳು ಮಾನವನಿಗೆ ಯುಕ್ತವಾಗುತ್ತವೋ ಅವುಗಳ ಮೊತ್ತವೇ ಧರ್ಮ.

೭. ಮನುಷ್ಯನ ಸ್ವಸುಖವನ್ನು ಸಾಧಿಸಿಕೊಳ್ಳುವ ಪ್ರಯತ್ನದಲ್ಲಿ ಜೀವಿಯು

ತನ್ನ ಸದ್ಗತಿ ಅಥವಾ ಆತ್ಮ ಸ್ವರೂಪವನ್ನು ಮರೆಯದೆ, ಇತರ ಜನರ ಸುಖ ಸಾಧನೆಗಳಿಗೆ ಅಡ್ಡಿಯಾಗನೆ, ಇತರ ಜನರಿಗೆ ತನ್ನ ನೈಜ ಗುಣ ಹಾಗೂ ಸಹಜ ಶಕ್ತಿಗಳಿಂದ ನ್ಯಾಯ ಪ್ರವೃತ್ತಿಗಳು ಸಿಗಲು ಸಹಾಯವಾಗುವಂತೆ ನಡೆದುಕೊಳ್ಳಬೇಕೆಂಬ ನಿಬಂಧನೆಯೇ ಧರ್ಮ.

೮. ಮಾನವ-ದೇವ ಇಬ್ಬರ ನಡುವಣ ಕೊಂಡಿ, ವ್ಯವಹಾರ ಆಗಿರುವುದು ಧರ್ಮ.

೯. ಸುತ್ತಲಿನ ಸೃಷ್ಟಿ ಅಥವಾ ಪ್ರಕೃತಿ, ಜೀವನ ಅಥವಾ ಮಾನವ, ಇವೆರಡರ ಮೂಲ ಸ್ವರೂಪವನ್ನು, ಸೃಷ್ಟಿಕರ್ತನೊಂದಿಗೆ ಇವೆರಡರ ಸಂಬಂಧ-ಸಂಘಟನೆಗಳ ರಹಸ್ಯವನ್ನು ತಿಳಿಸುವುದು ಧರ್ಮ.

೧೦. ತಾನು ಯಾವುದರ ಅಂಗ ಎಂದುಕೊಳ್ಳುತ್ತಾನೆಯೋ, ಯಾವುದರಿಂದ ತನ್ನ ಕೆಲಸ ಕಾರ್ಯಗಳಿಗೆಲ್ಲ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತೇನೆಂದು ಭಾವಿಸುತ್ತಾನೋ, ಆ ಪೂರ್ಣವಸ್ತುವಿನೊಂದಿಗೆ ಸಂಬಂಧವನ್ನು ಸಿದ್ಧಪಡಿಸಿಕೊಳ್ಳುವುದು ಹಾಗೂ ತನ್ನ ಮೇಲೆ ಪ್ರಭಾವ ಬೀರುವ ಅನಂತ ತತ್ತ್ವದೊಂದಿಗೆ ನೆಂಟನ್ನು ಪಡೆದುಕೊಳ್ಳುವುದು ಧರ್ಮ,

೧೧. ವರ್ಣನಾತೀತ, ಅನಂತ, ಅಜೈವಿಕ ಆದ, ವಿಜ್ಞಾನಕ್ಕೆ ನಿಲುಕದ ಹಾಗೂ ವಿಜ್ಞಾನದಿಂದ ತಿಳಿಯಲು ಸಾಧ್ಯವಲ್ಲದ, ಒಂದು ದಿವ್ಯ ಶಕ್ತಿಯ ವಿಚಾರವಾಗಿ ಹಾಗೂ ಜೀವ-ಜಗತ್ತುಗಳ ಬಗ್ಗೆ ತನ್ನ ಅನುಯಾಯಿಗಳಿಗೆ ತಿಳಿಸುವುದು ಧರ್ಮ.

೧೨. ಮಾನವನನ್ನು ದೇವನೊಂದಿಗೆ ಹಾಗೂ ಇತರ ಮಾನವರೊಂದಿಗೆ ಒಂದುಗೂಡಿಸುವುದು ಧರ್ಮ.

೧೩. ಜಗತ್ತಿನ ಜನರು ತಮ್ಮ ಸ್ಥಾನವನ್ನು ಸರಿಯಾಗಿ ತಿಳಿದುಕೊಳ್ಳುವ ತರಬೇತನ್ನು ಹೊಂದಿ, ತಾವೆಲ್ಲ ಒಂದುಗೂಡುವ ಸಲುವಾಗಿ ಕಟ್ಟಿಕೊಂಡ ಸಂಸ್ಥೆಯೇ ಧರ್ಮ.

ಮುಖ್ಯವಾಗಿ ಧರ್ಮ ಇರದಿದ್ದ ಪ್ರದೇಶ ಹಾಗೂ ಯುಗ ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರಲಾರದು. ತನ್ನನ್ನು ತಾನು ತಿಳಿದುಕೊಳ್ಳಲು, ವಿಶ್ವದೊಂದಿಗೆ ತನ್ನ ಸಂಬಂಧ ಎಂಥದು ಎಂಬುದನ್ನು ಅರಿತುಕೊಳ್ಳಲು, ದೇವರ ಸಂಕಲ್ಪ ಏನಿರಬಹುದೆಂದು ತಿಳಿದು ಬದುಕುವ ದಾರಿಯನ್ನು ಕಂಡು ಹಿಡಿಯಲು, ದೇವರು ಮಾನವರಿಗೆ ಕೊಟ್ಟಿರುವ ಒಂದೇ ಸಾಧನ ಬುದ್ಧಿ. ಬುದ್ಧಿಯಿರುವ ಹಾಗೂ ವಿಚಾರಶೀಲರಾದ ಮಾನವರು ಧರ್ಮವಿಲ್ಲದೆ ಬದುಕಲಾರರು. ಬಾಳಲಾರರು.

ಧರ್ಮದ ಗುರಿಯಾದ ಸತ್ಯ, ಶಿವ, ಸುಂದರಗಳ ಸರಿಯಾದ ಅರಿವು ಆಗಬೇಕಾದರೆ ಕೇವಲ ಶಾಸ್ತ್ರ, ಗ್ರಂಥ ವಚನ ಪ್ರಾಮಾಣ್ಯಗಳನ್ನೇ ಅವಲಂಬಿಸದೆ, ಬುದ್ಧಿ

ಹಾಗೂ ಅನುಭವ ಪ್ರಾಮಾಣ್ಯಗಳನ್ನು ಅವಲಂಬಿಸಬೇಕು. ಇದಕ್ಕಾಗಿ ಕೆಲವು ಸಂದರ್ಭಗಳಲ್ಲಿ ಪರಂಪರೆ ಹಾಗೂ ಜನಜಂಗುಳಿಯನ್ನು ವಿರೋಧಿಸಲು ಅಂಜ ಬಾರದು.

ಒಂದೊಂದು ಜೀವದ ದೇಶ, ಕಾಲ, ರಚನೆ, ಸ್ವಭಾವ, ಸಂದರ್ಭ, ಸನ್ನಿವೇಶ ಇವೆಲ್ಲವೂ ಬೇರೆಬೇರೆಯಾಗಿರುವುದರಿಂದ, ಒಂದೇ ಆಗಿರುವ ಧರ್ಮತತ್ತ್ವವು, ಜೀವಿಗಳ ಶಕ್ತಿಯೋಗ್ಯತೆಗಳಿಗೆ ಒಪ್ಪುವಂತೆ ಹಾಗೂ ಅವರ ವಿವಿಧ ಸಂದರ್ಭಗಳಿಗೆ ಹೊಂದುವಂತೆ ವಿವಿಧ ರೂಪಗಳನ್ನು ಧರಿಸಿ ಕೆಲಸ ಮಾಡುವುದರಿಂದ, ಪ್ರತಿಯೊಂದು ವ್ಯಕ್ತಿಯ ಧರ್ಮವೂ ಬೇರೆಬೇರೆಯಾಗಿರುವುದು ಅಸಹಜ, ತಪ್ಪು ಅಲ್ಲ. ಧರ್ಮವು ಜನ್ಮ ಜಾತ ಪ್ರವೃತ್ತಿಯಲ್ಲ. ವಿವೇಚನೆಗೆ ಒಳಪಡಿಸಿ, ಸರಿ ತಪ್ಪುಗಳನ್ನು ತಿಳಿದು, ಬುದ್ಧಿ ಪೂರ್ವಕವಾಗಿ ಧಾರಣೆ ಮಾಡಿಕೊಂಡ ನಿಯಮವದು.

ಜೀವನದ ಅಗತ್ಯ ಹಾಗೂ ಬುದ್ಧಿಶಕ್ತಿಯ ಫಲ ಇವೆರಡರ ಸಂಗಮವೇ ಧರ್ಮದ ಹುಟ್ಟಿಗೆ ಕಾರಣ. ಜೀವ–ಜಗತ್ತು ಹಾಗೂ ಇವೆರಡರ ಒಡೆಯನಾದ ಜಗನ್ನಿಯಾಮಕ ಈ ಮೂರರ ನಡುವೆ ಇರುವ ಸಂಬಂಧದ ಆಧಾರದ ಮೇಲಣ ವಿಚಾರ-ಜ್ಞಾನಗಳಿಗೆ ಸರಿಯಾದ ಜೀವನವನ್ನು ಧರ್ಮವು ರೂಪಿಸಿಕೊಡುತ್ತದೆ.

ಭಕ್ತಿ, ಉಪಾಸನೆ, ಸಂಗೀತ, ನೃತ್ಯ, ನಾಟಕ, ಚಿತ್ರಕಲೆ, ಶಿಲ್ಪಕಲೆ, ಸಾಹಿತ್ಯ ಇವುಗಳೆಲ್ಲಕ್ಕೂ ಉಗಮಸ್ಥಾನವಾಗಿರುವ ಧರ್ಮವು, ಸಂಸ್ಕೃತಿ ವಾಹಕವೂ ಆಗಿದ್ದು, ಇವುಗಳ ಮೂಲಕ ಜನಜೀವನಕ್ಕೆ ಒಂದು ಸುಸಂಬದ್ಧ, ಆಶಾದಾಯಕ ಸಾಮಾಜಿಕ ಪರಿಸರವನ್ನು ಒದಗಿಸಿಕೊಟ್ಟು, ಮಾನವರು ತಮ್ಮಲ್ಲಿರುವ ಶ್ರೇಷ್ಠವಾದುದನ್ನು ವ್ಯಕ್ತಪಡಿಸಲು ಸ್ಫೂರ್ತಿ, ನೆರವು ನೀಡುತ್ತದೆ.

ಮಾನವರಿಗೆ ಸುಖ ಶಾಂತಿ ಆನಂದ ತೃಪ್ತಿಗಳು ಲಭಿಸುವ ಬಗೆ, ಸಾವಿನ ನಂತರದ ಜೀವನ, ಜೀವಾತ್ಮ-ಪರಮಾತ್ಮರ ಸಂಬಂಧ, ಅನಂತತೆಯೊಡನೆ ಸಂಶ್ಲೇಷ, ಇವುಗಳ ಬಗ್ಗೆಯೂ ಚಿಂತಿಸಿ, ಚರ್ಚಿಸೇವ ಧರ್ಮವು ದೈವದ ವ್ಯಾಖ್ಯೆಯೂ ಆಗಿದೆ.

ಧರ್ಮವು ವ್ಯಕ್ತಿಯ ಚೇತನವನ್ನು ಹಿಗ್ಗಿಸಿ, ಅದು ವಿಶಾಲ ಜಗತ್ತಿನ ಚೇತನ ಗಳೊಂದಿಗೆ ಸಂಪರ್ಕ ಹೊಂದುವಂತೆ ಮಾಡಿ, ಜೀವನದ ಶ್ರೇಷ್ಠತೆಯನ್ನು ಎತ್ತಿ ಹಿಡಿ ಯುತ್ತದೆ. ಸಮಾಜದ ಸದಸ್ಯರೆನಿಸಿದ ಎಲ್ಲ ವ್ಯಕ್ತಿಗಳ ರೀತಿ ನೀತಿ ನಡತೆಗಳನ್ನು ರೂಪಿಸಿ, ಅವರ ಮನಸ್ಸನ್ನು ಸಂಸ್ಕರಿಸಿ, ಅವರಿಗೆ ನೆಮ್ಮದಿಯನ್ನು ನೀಡಿ, ಸಾಮಾಜಿಕ ಐಕ್ಯತೆಯನ್ನು ಸಾಧಿಸಿ, ಅವರಿಗೆ ಇಹದಲ್ಲಿ ಉನ್ನತಿ, ಪರದಲ್ಲಿ ಮೋಕ್ಷಗಳನ್ನು ಪಡೆ ಯಲು ಸಹಾಯ ಮಾಡುತ್ತದೆ.

ಜೀವಿಯು ಇತರ ಮಾನವ–ಪ್ರಾಣಿಗಳೊಂದಿಗೆ ಇರಿಸಿಕೊಳ್ಳಬೇಕಾದ ವ್ಯವ ಹಾರದಲ್ಲಿ, ದುಷ್ಟ ಶಕ್ತಿಯ ದಮನ ಹಾಗೂ ಶಿಷ್ಟ ಶಕ್ತಿಯ ಊರ್ಜಿತ ಮಾಡುವುದ

ರಲ್ಲಿ, ದುಃಖದಾರಿದ್ರ್ಯ ಬಂಧನಗಳನ್ನು ಹೋಗಲಾಡಿಸುವಲ್ಲಿ,ಧರ್ಮವು ಯಾವಾಗಲೂ ಮಾರ್ಗದರ್ಶನ ಮಾಡಿ ಸಹಾಯ ಮಾಡುತ್ತದೆ.

ನಾನು, ನನ್ನದು ಎಂಬ ಅಹಂಕಾರ, ಮಮಕಾರಗಳನ್ನು ತ್ಯಜಿಸುವಂತೆ ಮಾಡಿ, ಸತ್ಯ, ಪ್ರೇಮ, ಕರುಣೆಗಳೆಂಬ ಅಂತರ್ಗಾಮಿ ತ್ರಿವೇಣೀ ಸಂಗಮದಲ್ಲಿ ಸ್ನಾನ ಮಾಡಿಸಿ, ಲೋಕ ಕಲ್ಯಾಣಕ್ಕಾಗಿ ದುಡಿಯುವಂತೆ ವ್ಯಕ್ತಿಗಳನ್ನು ಹುರಿದುಂಬಿಸಿ, ಸಮಾಜದ ಉಳಿವು—ಉನ್ನತಿಗಳಿಗೆ ಧರ್ಮವು ಕಾರಣವಾಗುತ್ತದೆ.

ಹೀಗೆ ಧರ್ಮವು ಜೀವನದ ಪ್ರತಿಯೊಂದು ಅಂಶದ ಮೇಲೂ ಬೆಳಕು ಬೀರಲು ಯತ್ನಿಸುತ್ತ, ಮಾನವರ ಮನಸ್ಸಿನ ಮೇಲೆ ಸಾಕಷ್ಟು ಹತೋಟಿಯನ್ನಿಟ್ಟುಕೊಂಡು, ಅವರಿಗೆ ನಿಜವಾದ ಸುಖ ಆನಂದವನ್ನು ಒದಗಿಸಲು ಯತ್ನಿಸುತ್ತದೆ.

ಧರ್ಮಕ್ಕೆ ಒಂದು ವೈಚಾರಿಕ ತಳಹದಿ, ಆ ವಿಚಾರಗಳನ್ನು ಅವಲಂಬಿಸಿರುವ ವಿಧಿಗಳು ಇರುತ್ತವೆ. ಹಾಗೆಯೇ ಧರ್ಮವು ಸ್ಥಾಪಕ—ಸುಧಾರಕರ ಬಗ್ಗೆ ಗ್ರಂಥ—ನಿಯಮಗಳ ರೂಪದಲ್ಲೂ, ಆಚರಣೆಗೆ ಅಳವಡಿಸಲ್ಪಟ್ಟಿರುವ ಕ್ರಿಯಾ ರೂಪದಲ್ಲೂ, ಇರುತ್ತದೆ.

ಧರ್ಮಕ್ಕೆ ವಿಧಾಯಕ, ನಿಷೇಧಕ ಎಂಬ ಎರಡು ಲಕ್ಷಣಗಳುಂಟು. ಅಜೀವ ಪರ್ಯಂತ ಆಚರಿಸುವಂತಹ ಕೆಲವು ವಿಶಿಷ್ಟ ವಿಧಿ, ಸದಾಚಾರ ಸಂಹಿತೆ ಹಾಗೂ ನೈತಿಕ ಸಂಪ್ರದಾಯಗಳನ್ನು ಧರ್ಮವು ಬೋಧಿಸುತ್ತದೆ. ಜಗತ್ತಿನ ವಿಚಾರ, ವಸ್ತುಗಳನ್ನು ಪವಿತ್ರ—ಅಪವಿತ್ರ ಎಂದು ಎರಡು ಭಾಗಗಳಾಗಿ ವಿಂಗಡಿಸಿ, ಒಳಿತು—ಕೆಡುಕು, ಸರಿ—ತಪ್ಪು, ಪಾಪ—ಪುಣ್ಯ, ಸ್ವರ್ಗ-ನರಕ, ಇವುಗಳ ಅರಿವನ್ನು ಉಂಟುಮಾಡಿ, ಪವಿತ್ರತೆಗೆ ಮಹತ್ವ ನೀಡಿ, ಅಪವಿತ್ರತೆಯಿಂದ ವ್ಯಕ್ತಿಗಳನ್ನು ದೂರವಿರಿಸಲು ಧರ್ಮವು ಯತ್ನಿಸುತ್ತದೆ. ಈ ಆರೋಗ್ಯಕರ, ಹಿತಕರ ಆಗಿರುವ ವಿಧಿ—ನಿಷೇಧಗಳ ಮೂಲಕ ಮಾನವರನ್ನು ಕೆಡುಕಿನಿಂದ ದೂರವಿಟ್ಟು, ಅವರನ್ನು ಒಳ್ಳೆಯವರನ್ನಾಗಿ ಮಾಡುವುದೇ ಧರ್ಮದ ಮುಖ್ಯ ಗುರಿ.

ಎಲ್ಲ ಧರ್ಮಗಳಲ್ಲಿಯೂ ನಾಲ್ಕು ಅಂಶಗಳು ಮುಖ್ಯವಾಗಿರುತ್ತವೆ. ಧರ್ಮದ ಬಾಹ್ಯ ಸ್ವರೂಪವನ್ನು ಪ್ರತಿಬಿಂಬಿಸುವ ಆಚಾರಾಂಗವು ಅಜಾಗ್ರತ ಮನಸ್ಸಿನ ಮೇಲೂ, ಧರ್ಮಶಾಸ್ತ್ರ ಮುಂತಾದವು ಜಾಗ್ರತ ಮನಸ್ಸಿನ ಮೇಲೂ, ಪೂಜಾ ಪ್ರಕ್ರಿಯೆಗಳು ರಸಭಾವಗಳ ಮೇಲೂ, ದರ್ಶನವು ಬುದ್ಧಿಯ ಮೇಲೂ ಪ್ರಭಾವ ಬೀರಿ ಜನರನ್ನು ಉನ್ನತ ಸ್ಥಿತಿಗೆ ಕೊಂಡೊಯ್ಯುತ್ತದೆ.

ಸಮಾಜದಲ್ಲಿ ನಾಲ್ಕು ಬಗೆಯ ಧರ್ಮವನ್ನು ಗುರುತಿಸಬಹುದು. ದೃಢತೆ, ಧೈರ್ಯ, ಅಹಿಂಸೆ, ಕ್ಷಮೆ, ದಾನ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ, ಬುದ್ಧಿ, ವಿದ್ಯೆ, ಸತ್ಯ, ಶಾಂತಿ, ದಯೆ, ಆರ್ಜವ, ಸಂಯಮ ಎಂಬೀ ಸದ್ಗುಣಗಳು ಎಲ್ಲರಲ್ಲಿಯೂ ಯಾವಾಗಲೂ ಇರಬೇಕಾದುದು ಸಾಧಾರಣ ಧರ್ಮ ; ವರ್ಣಾಶ್ರಮಗಳಿಗೆ ಸಂಬಂಧಿಸಿದ ದೀಕ್ಷೆ, ವ್ರತ, ಸಂಸ್ಕಾರಗಳು ವಿಶೇಷ ಧರ್ಮ ; ತಾತ್ಕಾಲಿಕ

ಉದ್ದೇಶಗಳಿಗಾಗಿ ತಮ್ಮ ಬೇಡಿಕೆಗಳು ನೆರವೇರಬೇಕೆಂದು ಮಾಡುವ ಯಜ್ಞ, ಪೂಜೆ, ವ್ರತಗಳೆಂಬ ಕಾಮ್ಯ ಕರ್ಮಗಳೂ, ಆಶೌಚನಿವೃತ್ತಿ, ದೋಷ ಪ್ರಾಯಶ್ಚಿತ್ತಗಳಿಗಾಗಿ ಮಾಡುವ ಶುದ್ಧಿ ಕ್ರಿಯೆಗಳೂ ನೈಮಿತ್ತಿಕ ಧರ್ಮ ; ರೋಗ, ಯುದ್ಧ, ಕ್ರಾಂತಿ, ಬರ, ಪ್ರವಾಹ ಮುಂತಾದುವು ಉಂಟಾದಾಗ ಧರ್ಮವನ್ನು ಸಾಂಗವಾಗಿ ನಡೆಸಲು ಆಗದಿದ್ದಾಗ ಧರ್ಮದ ಒಂದು ಸೂಕ್ಷ್ಮ ಲಾಂಛನವನ್ನಾದರೂ ಉಳಿಸಿಕೊಳ್ಳಲು ಮಾಡುವ ಆಚರಣೆಗಳು ಆಪದ್ಧರ್ಮ.

ಪ್ರಕೃತಿ, ಪುರುಷ, ಪರಮಾತ್ಮ, ಈ ಮೂರು ತತ್ತ್ವದ ಸಂಬಂಧವನ್ನು ತಿಳಿಸುವ ಸಿದ್ಧಾಂತ ; ಸಿದ್ಧಾಂತವನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧನ ಮಾರ್ಗವಾದ ಯೋಗ ; ಸಾಕ್ಷಾತ್ಕರಿಸಿಕೊಂಡುದನ್ನು ಇತರರಿಗೆ ತಿಳಿಸಿ ಹೇಳುವ ದರ್ಶನ ; ಪ್ರಸ್ತುತ ತತ್ತ್ವ ಸಮುಚ್ಚಯಕ್ಕೆ ಪ್ರವೇಶ ಮಾಡಲು ಇಚ್ಛಿಸುವವರಿಗಾಗಿ ಸಂಸ್ಕಾರ ; ದೀಕ್ಷೆಯನ್ನು ಪಡೆದವರು ತಮ್ಮ ತಮ್ಮಲ್ಲಿ ಹೊಂದಿಕೊಂಡು ಬಾಳಬೇಕೆಂದು ಹೇಳುವ ಸಾಮಾಜಿಕ ವ್ಯವಸ್ಥೆ ; ಇತರ ಧರ್ಮದವರೊಡನೆಯೂ ಉತ್ತಮವಾಗಿ ಬಾಳಬೇಕೆಂದು ಕಲಿಸುವ ನೀತಿಶಾಸ್ತ್ರ ; ಸತ್ಯ ಶುದ್ಧವಾಗಿ ದುಡಿದು, ಸಮಾಜ—ರಾಷ್ಟ್ರಗಳನ್ನು ಕಟ್ಟಿ, ಅಭಿವೃದ್ಧಿ ಪಡಿಸಬಲ್ಲ ಆರ್ಥಿಕ ವ್ಯವಸ್ಥೆ ; ಉಳಿದ ಸಮಾಜದಿಂದ ಭಿನ್ನವೆಂದು ತೋರಿಸುವ ತನ್ನದೇ ಆದ ವಿಶಿಷ್ಟ ಸಂಸ್ಕೃತಿ ; ಎಲ್ಲ ತತ್ತ್ವಗಳನ್ನೂ ಅಳವಡಿಸಿಕೊಂಡು ಬಂದಿರುವ ಸಂಪ್ರದಾಯದ ಪರಂಪರೆ ; ತತ್ತ್ವಗಳೆಲ್ಲವನ್ನೂ ವಿವರವಾಗಿ ವಿವೇಚಿಸಿ ತಿಳಿಸುವ ಸಾಹಿತ್ಯ—ಇವು ಧರ್ಮದ ದಶ ಲಕ್ಷಣಗಳು.

ವಿಧಿ, ಪೂಜೆಗಳನ್ನು ಆಚರಿಸುವುದರ ಜೊತೆಗೆ, ಶ್ರದ್ಧೆ ನಂಬಿಕೆಗಳನ್ನು ಹೊಂದಿ, ನಿರಾಶೆಯತ್ತ ವಾಲುವ ಜೀವಿಗಳಿಗೆ ಆಶಾಕಿರಣಗಳನ್ನು ಬೀರಿ, ಆತ್ಮಘಾತುಕ ವಿಚಾರಗಳಿಂದ ಜನರನ್ನು ಮುಕ್ತ ಆಗಿಸುವ ವಿಶೇಷ ಕಾರ್ಯವನ್ನು ಧರ್ಮವು ಮಾಡುತ್ತದೆ. ಜೊತೆಗೆ ಮಾನವತೆ, ನೀತಿ, ನ್ಯಾಯವಾದ ಕ್ರಿಯೆ, ಜ್ಞಾನದಾಹ, ಪ್ರಕೃತಿ ಪ್ರೇಮ, ದೇಹ ಮನಸ್ಸುಗಳ ಶುದ್ಧಿ, ಸ್ವಶಿಸ್ತು, ಧ್ಯಾನ, ಪ್ರಾರ್ಥನೆ, ವ್ಯಕ್ತಿ ಪ್ರಾಧಾನ್ಯ, ಎಂಬೀ ಧಾರ್ಮಿಕ ಜೀವನದ ಆದರ್ಶಗಳು ಎಲ್ಲ ಮಾನವರಲ್ಲಿಯೂ ಉಂಟಾಗುವಂತೆ ಮಾಡುವ ಧರ್ಮದ ಬಗ್ಗೆ ಉದಾಸೀನತೆ ಸಲ್ಲದು.

ಮುಖ್ಯವಾಗಿ ಧರ್ಮವು ಧೃ ಎಂಬ ಧಾತು ಅಥವಾ ಮೂಲ ರೂಪದಿಂದ ಆಗಿ ಎತ್ತಿ ಹಿಡಿಯುವುದು ಎಂದೂ, ಕರ್ಮವು ಕೃ ಎಂಬ ಧಾತು ಅಥವಾ ಮೂಲ ರೂಪದಿಂದ ಆಗಿ ಕೆಲಸ ಎಂದೂ ಅರ್ಥ ಕೊಡುತ್ತದೆ. ಅಂದರೆ ಧರ್ಮ ಕರ್ಮ ಸೇರಿದ ಮಾನವ ಧರ್ಮವು ಧರ್ಮದ ತಳಹದಿಯ ಮೇಲೆ ನಿಂತು, ಅರ್ಥ ಕಾಮಗಳ ಮೂಲಕ ಮೋಕ್ಷದ ಗುರಿಯನ್ನು ಹೊಂದಿರಬೇಕು. ಧರ್ಮ ಕರ್ಮಗಳು ಮಾನವನ ಎರಡು ಕಣ್ಣುಗಳಿದ್ದಂತೆ. ಧರ್ಮದ ಆಚರಣೆಯಲ್ಲಿ ಬರುವ ಹೊಣೆಗಾರಿಕೆಯನ್ನು ಅರಿತು, ತಮ್ಮ ಪಾಲಿಗೆ ಬಂದ ಕರ್ತವ್ಯಗಳನ್ನು ಚಾಚೂ ತಪ್ಪದೆ ಮನಮುಟ್ಟಿ

ಮಾಡಿ, ತಮ್ಮ ಕುಟುಂಬದ ಜೊತೆಗೆ ಸಮೂಹ, ಸಮಾಜ, ಸಂಸ್ಕೃತಿಗಳ ಏಳಿಗೆಗಾಗಿಯೂ ನಿಸ್ವಾರ್ಥದಿಂದ, ಯಾವ ಫಲಾಪೇಕ್ಷೆಯೂ ಇಲ್ಲದೆ, ದುಡಿದು ಸಚ್ಚಿದಾನಂದ ಸ್ವರೂಪನಾದ ಭಗವಂತನಲ್ಲಿ ಆತ್ಮ ಸಮರ್ಪಣೆ ಮಾಡುವುದು ಮಾನವ ಧರ್ಮ ಎನಿಸುತ್ತದೆ.

ಪರಲೋಕದ ಕಾಲ್ಪನಿಕ ಸುಖಕ್ಕಿಂತ ಇಹಲೋಕದ ಕರ್ತವ್ಯ ಪಾಲನೆ ಹಾಗೂ ಅದರಿಂದ ದೊರೆಯುವ ಆನಂದವು ಹೆಚ್ಚು ಮಹತ್ವವಾದುದು. ಆದುದರಿಂದ ಮಾನವನ ಅಂತಿಮ ಗುರಿ ಹಾಗೂ ಪರಮ ಪುರುಷಾರ್ಥ ಆದ ವ್ಯಕ್ತಿಗತ ಮೋಕ್ಷ ಸಾಧನೆಗೆ ಈ ಸಾಮುದಾಯಿಕ ಮಾನವ ಧರ್ಮ ಅಗತ್ಯವಾದುದು. ಈ ಮಾನವ ಧರ್ಮದ ಅರಿವು, ಪಾಲನೆ, ರಕ್ಷಣೆಗಳು ಎಲ್ಲ ಜನರಿಂದಲೂ ಸರಿಯಾಗಿ ಆದಾಗ ಮಾತ್ರ ಸಮಾಜವು ಸುವ್ಯವಸ್ಥಿತವಾಗಿ ರೂಪುಗೊಂಡು, ಸಂಸ್ಕೃತಿ ಬೆಳೆದು, ಪ್ರಪಂಚದಲ್ಲಿ ಸುಖಶಾಂತಿ ಸಮಾಧಾನಗಳು ಸ್ಥಿರವಾಗಿ ನೆಲೆಗೊಳ್ಳುವುದರಲ್ಲಿ ಸಂದೇಹವಿಲ್ಲ.

ಇದು ಆಗಬೇಕಾದರೆ ಕಾರ್ಯಕಾರಣ ಸಂಬಂಧವನ್ನು ತಿಳಿಸುವ ವೈಜ್ಞಾನಿಕ ದೃಷ್ಟಿ, ಮೂಲಾಧಾರವನ್ನು ಕಂಡುಹಿಡಿಯಲೆಳಸುವ ಐತಿಹಾಸಿಕ ದೃಷ್ಟಿ, ಗುರು-ಲಘುಗಳನ್ನು ತಿಳಿಸುವ ತಾರತಮ್ಯ ದೃಷ್ಟಿ, ಹಿನ್ನೆಲೆ-ಮುನ್ನೆಲೆಗಳನ್ನು ಅರುಹುವ ಪರಿಕ್ರಮ-ಸಮನ್ವಯ ದೃಷ್ಟಿ, ತನ್ನಂತೆ ಪರರ ಬಗೆವುದನ್ನು ತಿಳಿಸುವ ಆತ್ಮೋಪಮ್ಯ-ಪರೋಪಮ್ಯ ದೃಷ್ಟಿ, ಸಹಿಷ್ಣುತೆಯನ್ನು ಕಲಿಸುವ ಔದಾರ್ಯ ದೃಷ್ಟಿ— ಎಂಬೀ ನೂತನ ಷಡ್ದರ್ಶನವು ಎಲ್ಲರಿಗೂ ಚೆನ್ನಾಗಿ ಪರಿಚಯವಾಗಿ ಕಾರ್ಯಗತವಾಗುವಂತಹ ಧಾರ್ಮಿಕ ಶಿಕ್ಷಣ ವ್ಯವಸ್ಥೆಯು ಶಾಲಾಕಾಲೇಜುಗಳಲ್ಲಿ ಏರ್ಪಡಬೇಕು. ಇದರಲ್ಲಿ ಧರ್ಮಪೀಠ, ಸರ್ಕಾರ, ವಿದ್ಯಾಸಂಸ್ಥೆಗಳು ಹೆಚ್ಚು ಜವಾಬ್ದಾರಿ ವಹಿಸಿ ಸಹಕರಿಸಿ ಕೆಲಸ ಮಾಡಿದರೆ ಶ್ರೇಯಸ್ಸು ಉಂಟಾಗಿ ಉತ್ತಮ ಫಲ ಸಿಗುತ್ತದೆ.

# 2. ಧರ್ಮ ಮತ್ತು ವಿಜ್ಞಾನ

ಪರಮಾತ್ಮನ ಅಂತರಂಗದಿಂದ ಜೀವಾತ್ಮನು ಒಡ ಮೂಡಿದನೆಂದು ಭಾರತೀಯ ದರ್ಶನವು ಹೇಳಿದರೆ, ಪ್ರಕೃತಿಯ ಶಕ್ತಿಗಳು ಒಂದಕ್ಕೊಂದು ಸೇರಿ ಈ ಪ್ರಪಂಚ ರೂಪುಗೊಂಡಿದೆ ಅಂದರೆ ವಿಶ್ವದ ಒಡಲೊಳಗಿಂದ ಜೀವನು ಹೊರ ಬಂದನೆಂದು ಪಾಶ್ಚಾತ್ಯ ವಿಜ್ಞಾನವು ಹೇಳುತ್ತದೆ. ಚಿದಚಿದೀಶ್ವರ ತತ್ತ್ವತ್ರಯದ ಸತ್ಯ ಮತ್ತು ಅವುಗಳ ಪರಸ್ಪರ ಸಂಬಂಧದ ರಹಸ್ಯವನ್ನು ಮೊದಲು ಬೌದ್ಧಿಕ ದೃಷ್ಟಿ ಹಾಗೂ ತತ್ತ್ವ ಶಾಸ್ತ್ರಗಳ ಆಧಾರದಿಂದ ಅಂದರೆ ದಿವ್ಯದೃಷ್ಟಿ, ಅಪರೋಕ್ಷಾನುಭೂತಿ, ಆಧ್ಯಾತ್ಮಿಕ ಸಾಕ್ಷಾತ್ಕಾರ—ಇವುಗಳ ಮೂಲಕ ತಿಳಿದುಕೊಳ್ಳುವ ಯತ್ನ ನಡೆಯಿತು. ಆದರೆ ತರ್ಕಶಾಸ್ತ್ರಕ್ಕಿಂತಲೂ ವೈಜ್ಞಾನಿಕ ದೃಷ್ಟಿಯಿಂದ ಅಂದರೆ ಕಲ್ಪನೆ, ಕೌಶಲ್ಯ, ಕುಟಿಲತೆ, ಪಕ್ಷಪಾತ ಇವುಗಳಾವುವೂ ಇಲ್ಲದ ಪ್ರಯೋಗಗಳಿಂದ ನಡೆದ ಸತ್ಯ ಶೋಧನೆಯು ಸಹಜ, ಆಧಾರಪೂರ್ಣ, ಅಧಿಕಾರಯುತ ಆದ ಪ್ರಮಾಣಗಳನ್ನು ನೀಡುವುದರಿಂದ, ಅದು ವಿಶ್ವಸನೀಯ ಹಾಗೂ ಅಧಿಕ ಮಹತ್ವವುಳ್ಳದ್ದು ಆಗಿರುತ್ತದೆಯೆಂಬ ದೃಢ ನಂಬಿಕೆಯಿಂದ ಗಾಜಿನ ನಳಿಕೆ, ದೂರದರ್ಶಕ ಯಂತ್ರ, ಸೂಕ್ಷ್ಮ ದರ್ಶಕ ಯಂತ್ರ ಮುಂತಾದ ಪ್ರತ್ಯಕ್ಷ ಪ್ರಯೋಗಾತ್ಮಕ ಸಾಧನಗಳು ನಿರ್ಮಾಣ ಗೊಂಡುವು.

ನೂರಾರು ವರ್ಷಗಳ ಕಾಲ, ಅನೇಕ ತಲೆ ಮಾರುಗಳ, ಸಾವಿರಾರು ವೀಕ್ಷಕರು, ಹಲವಾರು ಶಾಸ್ತ್ರಗಳ ದೃಷ್ಟಿಯಿಂದ, ಪ್ರಪಂಚದ ನಾನಾ ಭಾಗಗಳಲ್ಲಿ ಪರೀಕ್ಷೆ-ಪ್ರಯೋಗಗಳನ್ನು ನಡೆಸಿ, ಎಲ್ಲ ರೀತಿಯಿಂದಲೂ ತೃಪ್ತಿ ಹೊಂದಿದ ನಂತರವೇ, ನಂಬಲರ್ಹವಾದ ಉತ್ತರ-ನಿಯಮಗಳನ್ನು ವಿಜ್ಞಾನಿಗಳು ಸಾರಿರುವುದು ನಿಜ. ಇವರ ಅಭಿಪ್ರಾಯದಂತೆ ವಿಶ್ವವನ್ನು ಕುರಿತು ವಿಜ್ಞಾನದ ಕಲ್ಪನೆಯು ಭೌತಿಕ ಪರ ವಾಗಿದೆ ಎನ್ನಬಹುದು. ಅಂದರೆ ಆರಂಭದಲ್ಲಿ ಒಂದೇ ಮೂಲ ವಸ್ತುವಿದ್ದು, ಅದರ ಗುಣವು ವಿಕಾಸಗೊಳ್ಳುತ್ತ ಬಂದುದರ ಫಲವಾಗಿ, ಈ ವಿಶ್ವವು ಆವಿರ್ಭವಿಸಿತೆಂದು ವಿಜ್ಞಾನವು ಹೇಳುತ್ತದೆ. ಹೀಗೆ ನೈಸರ್ಗಿಕವಾಗಿರುವ ಸೃಷ್ಟಿಯ ನಿಯಮ ಬದ್ಧತೆ ಮತ್ತು ವಿಕಸನ ಶೀಲತೆಗಳ ಅರಿವು ವೈಜ್ಞಾನಿಕ ಉಪಕರಣಗಳಿಂದ ಆದರೂ, ಅವು ಗಳ ಪ್ರೇರಕ ಆಗಿರುವ ಇಚ್ಛಾಶಕ್ತಿಯ ಅಥವಾ ಸೃಷ್ಟಿಕರ್ತನ ಅರಿವು ಆಗಲು ಈ ಸಾಧನಗಳು ಅಜ್ಞ, ಅಸಮರ್ಥ ಆಗಿರುವ ಕಾರಣದಿಂದ, ವೈಜ್ಞಾನಿಕ ಪ್ರಯೋಗ ಶಾಲೆಯಲ್ಲಿ ಕಾಣುವ ಸೃಷ್ಟಿಯ ಸ್ವರೂಪವು ಅಪೂರ್ಣ, ಅಸ್ಥಿರ, ಅವಿಶ್ವಸನೀಯ ಆಗಿರುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ನಮ್ಮಲ್ಲಿ ಉಂಟಾಗಿರುವ ಸೃಷ್ಟಿಯ ಜ್ಞಾನವು ನಮ್ಮ ಆತ್ಮನ ಏಕೀಕರಣ ವ್ಯಾಪಾರದ ಫಲವಾಗಿರುವುದರಿಂದ, ಆತ್ಮನು ನಮಗೆ ಗೋಚರವಾಗುವ ಸೃಷ್ಟಿಯ ಭಾಗವಾಗಿದ್ದು, ಸೃಷ್ಟಿಯಿಂದಲೇ ಆತ್ಮನು ಹುಟ್ಟಿದ್ದಾನೆ ಎಂದು ಭಾವಿಸುವುದು ಸರಿಯಲ್ಲ. ವೈಜ್ಞಾನಿಕ ಸಾಧನಗಳಿಂದ ಕೂಡಿದ ಪ್ರಯೋಗ ಶಾಲೆಯೇ ಸೃಷ್ಟಿಯ ಮೂಲ ತತ್ತ್ವದ ಸತ್ಯಾಸತ್ಯತೆಯನ್ನು ನಿರ್ಣಯಿಸುವ ಒರೆಗಲ್ಲಾಗಿದೆ ಎಂದು ತಿಳಿಯು ವುದು ಹಾಗೂ ಅವುಗಳ ಆಧಾರದಿಂದ ಉಂಟಾದ ಜ್ಞಾನವು ಮಾತ್ರ ಸತ್ಯ ಎಂದು ಭಾವಿಸುವುದು ತುಂಬಾ ತಪ್ಪು. ಏಕೆಂದರೆ ವಿಸ್ತಾರವಾದ ವಿಜ್ಞಾನದ ಸಾಮಾನ್ಯ ಸಿದ್ಧಾಂತವೂ ಕೂಡ ಅನೇಕ ವೇಳೆ ಭಾರತೀಯ ಋಷಿಗಳು ಆಧ್ಯಾತ್ಮಿಕ ಗಾಂಭೀರ್ಯದ ದೃಷ್ಟಿಯಿಂದ ವಿಶಾಲವಾದ ಅರ್ಥದಲ್ಲಿ ಕಲ್ಪಿಸಿದ ಭೌತಿಕ ಸತ್ಯಕ್ಕೆ ಅನುಗುಣವಾಗಿದೆ ಯೆಂದು ತಿಳಿದು ಬಂದಿದೆ. ಪರೀಕ್ಷೆ—ಪ್ರಯೋಗಗಳು ನಡೆಯದಿದ್ದ ಮತ್ತು ಜ್ಞಾನ ಭಂಡಾರದ ಸೌಕರ್ಯಗಳು ಇಲ್ಲದಿದ್ದ ಪ್ರಾಚೀನ ಕಾಲದಲ್ಲಿ, ಭಾರತದ ಮಹರ್ಷಿಗಳು ಕೇವಲ ಅಂತಃಸ್ಫೂರ್ತಿಯಿಂದಲೇ, ದೇಶ ಕಾಲ ಪರಿಸ್ಥಿತಿಗಳಿಂದ ಅಬಾಧಿತವಾದ ನಿತ್ಯಸತ್ಯತತ್ತ್ವಗಳನ್ನು ಎಷ್ಟು ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆಂಬುದನ್ನು ಗಮನಿ ಸಿದರೆ, ಅವರ ಮೇಧಾಶಕ್ತಿಯು ಅಸಾಧಾರಣ ಹಾಗೂ ಅಪೌರುಷೇಯ ಆಗಿದ್ದಿತು ಎನ್ನುವುದರಲ್ಲಿ ಅತಿಶಯೋಕ್ತಿಯೇನಿಲ್ಲ. ಬುದ್ಧಿಮತ್ತೆ, ತಿಳಿವಳಿಕೆ ಹಾಗೂ ಸ್ವರೂಪ ವನ್ನು ತಳೆಯುವ ಶಕ್ತಿ ಶ್ರೇಷ್ಠವಾಗಿದ್ದ ಆ ಮಹರ್ಷಿಗಳು, ಆತ್ಮಸತ್ತೆಯ ಬೆಳಕಿ ನಲ್ಲಿ ವಸ್ತುಸತ್ಯದ ಮೂಲವನ್ನು ಕಂಡುಹಿಡಿದಿರುವುದು ನಿಜವೆಂದು ಯಾರಾದರೂ ಒಪ್ಪಲೇಬೇಕು.

ಧರ್ಮವು ವಿಜ್ಞಾನದ ವಿರೋಧಿ ಎಂಬ ಕಲ್ಪನೆ ಸರಿಯಲ್ಲ. ಪರಿಹಾರಕ್ಕೆ ಕಾದು ನಿಂತಿರುವ ಪ್ರಮುಖ ಪ್ರಶ್ನೆಯನ್ನು ಎದುರಿಸುತ್ತಿರುವ ಧರ್ಮದ ವೈಚಾರಿಕ ತಳಹದಿಯ ಮೇಲೇ ವಿಜ್ಞಾನವು ಉಗಮವಾಗಿದೆ ಎಂದರೆ ಆಶ್ಚರ್ಯವೇನಿಲ್ಲ. ಧರ್ಮವು ತಿಳಿದುಕೊಂಡಿರುವುದನ್ನೇ ವಿಜ್ಞಾನವು ಒಂದು ಸುಸಂಬದ್ಧವಾದ ಅಂದರೆ ಶಾಸ್ತ್ರೀಯ ರೀತಿಯಲ್ಲಿ ವ್ಯವಸ್ಥೆಗೊಳಿಸುವುದರಿಂದ, ವಿಜ್ಞಾನವು ಧರ್ಮದ ಹಿಂದೆಯೇ ಸಾಗುತ್ತಿದೆ ಎನ್ನಲಡ್ಡಿಯಿಲ್ಲ. ಹಾಗೆಯೇ ಅಸತ್ಯ ಧಾರ್ಮಿಕ ನಿಯಮವನ್ನು ನಾಶ ಮಾಡಿ, ಸತ್ಯವಾದ ಧಾರ್ಮಿಕ ನಿಯಮವನ್ನು ಸ್ಥಾಪಿಸಿ, ಹಿಂಸೆ—ಶೋಷಣೆಗಳನ್ನು ನಿರಾಕರಿಸುವ ತತ್ತ್ವವನ್ನು ಸ್ಥಾಪಿಸಬೇಕಾದುದರಿಂದ, ವೈಜ್ಞಾನಿಕ ದೃಷ್ಟಿಯನ್ನು ಹತ್ತಿಕ್ಕುವ ಧರ್ಮವು ಅಧರ್ಮವಾಗುತ್ತದೆ. ಏಕೆಂದರೆ ಧರ್ಮದ ತಿರುಳಾದ ದೇವರನ್ನು ಅರಿತಾಗ ಮಾತ್ರ ಚೆನ್ನಾಗಿ ಪ್ರೀತಿಸಿ, ಪೂಜಿಸಲು ಸಾಧ್ಯ. ಜ್ಞಾನವನ್ನು ವಿಜ್ಞಾನ ಕೊಟ್ಟರೆ, ಪ್ರೀತಿಯನ್ನು ಧರ್ಮ ಕೊಡುತ್ತದೆ. ಆದಕಾರಣ ಶಕ್ತಿಯನ್ನು ನೀಡುವ ವಿಜ್ಞಾನ, ದೂರ ದೃಷ್ಟಿಯನ್ನು ನೀಡುವ ಧರ್ಮ ಇವೆರಡರಲ್ಲಿಯೂ ಪರಸ್ಪರ ಅವಲಂಬನ ಮತ್ತು ಸಹಕಾರ ಇರುವುದು ಅವಶ್ಯವೆಂದು ಸುಪ್ರಸಿದ್ಧ ಪಾಶ್ಚಾತ್ಯ ವಿಜ್ಞಾನಿ ಐನ್‌ಸ್ಟೀನ್ ಒತ್ತಿ ಹೇಳಿದ್ದಾನೆ. ಸರಿಯಾದ ವೈಜ್ಞಾನಿಕ

ವಿಮರ್ಶೆ-ಶಿಸ್ತುಗಳಿಂದ ನಿಜವಾದ ಧಾರ್ಮಿಕ ಭಾವನೆ ಬೆಳೆಯಲು ಸಾಧ್ಯವೆಂದು ಭಾರತೀಯ ವೇದಾಂತಿಗಳಾದ ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದರು ತೋರಿಸಿಕೊಟ್ಟಿದ್ದಾರೆ.

ಹೀಗೆ ಸಾಧನದ ಉಪಯೋಗದಲ್ಲಿ ದಾರ್ಶನಿಕರು ಮತ್ತು ವಿಜ್ಞಾನಿಗಳಲ್ಲಿ ಭೇದವಿಲ್ಲ. ದಾರ್ಶನಿಕರು ಅನುಮಾನ ಅಥವಾ ಯುಕ್ತಿಯನ್ನು ಅವಲಂಬಿಸಿದರೆ, ವಿಜ್ಞಾನಿಗಳು ಪ್ರತ್ಯಕ್ಷವನ್ನು ಅವಲಂಬಿಸುತ್ತಾರೆ. ಪ್ರತ್ಯಕ್ಷಕ್ಕೆ ಒಳಗಾಗದ ವಿಷಯಗಳ ಬಗ್ಗೆ ನಿರ್ಧಾರವನ್ನು ಕೈಕೊಳ್ಳಲು ಯುಕ್ತಿಯೇಗತಿ. ಏಕೆಂದರೆ ಯುಕ್ತಿಯೂ ಅನುಮಾನದ ರೂಪವನ್ನು ತಾಳಿ, ಪ್ರತ್ಯಕ್ಷವಾಗದ ವಿಷಯವನ್ನೂ ಸಹ ನಮಗೆ ಪರೋಕ್ಷ ರೂಪದಲ್ಲಿ ತೋರಿಸಿಕೊಡುತ್ತದೆ. ವಿಜ್ಞಾನಿಗಳು ಅನುಭವಗಳಲ್ಲಿ ತಮಗೆ ಪ್ರಕೃತವಾದ ಅಂಶಗಳನ್ನು ಮಾತ್ರ ಗಮನಕ್ಕೆ ತೆಗೆದುಕೊಂಡರೆ, ದಾರ್ಶನಿಕರು ಸಮಗ್ರ ಅನುಭವವನ್ನೂ ಶೋಧಿಸುತ್ತಾರೆ. ಒಟ್ಟಿನಲ್ಲಿ ಸೂಕ್ಷ್ಮವೂ, ಅವ್ಯಕ್ತವೂ ಆದ ಒಂದೇ ಪ್ರಕೃತಿಯಿಂದ ಕ್ರಮವಾಗಿ ಭಿನ್ನವಾದ ಈ ವ್ಯಕ್ತ ಸೃಷ್ಟಿಯು ಹುಟ್ಟಿತೆಂಬ ಮುಖ್ಯ ಸಿದ್ಧಾಂತವು ವಿಜ್ಞಾನಿ ಮತ್ತು ಆಧ್ಯಾತ್ಮವಾದಿ ಇಬ್ಬರಿಗೂ ಒಪ್ಪಿಗೆಯಾಗಿರುವ ಒಂದು ಅಂಶ.

ಸರ್ವವ್ಯಾಪಕನಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ತರ್ಕಶಾಸ್ತ್ರವು ಅಶಕ್ತವಾದಾಗ, ತರ್ಕವಾದವನ್ನು ಒತ್ತಟ್ಟಿಗೆ ತಳ್ಳಿಬಿಟ್ಟು, ಮಾನಸಿಕ-ಆಧ್ಯಾತ್ಮಿಕ ಪರಿಶೋಧನ ಮಾರ್ಗದಲ್ಲಿ ಪ್ರವರ್ತಿಸುವುದು ಹಿತಕರವಾದುದು. ವ್ಯಕ್ತವಾಗಿರುವ ಪ್ರಕೃತಿಯ ರಹಸ್ಯಗಳೆಲ್ಲವನ್ನೂ, ಎಲ್ಲ ರೀತಿಯಿಂದಲೂ, ಜೀವಿಯು ತನ್ನ ಹೊರ ಗಣ್ಣುಗಳಿಂದ ಪರಿಶೋಧಿಸಿ, ತಿಳಿದುಕೊಂಡ ನಂತರ, ಅವ್ಯಕ್ತವಾದ ಪರಮಾತ್ಮ ತತ್ತ್ವವನ್ನು ತಿಳಿಯಲು ಜೀವಿಯು ತನ್ನ ಒಳಗಣ್ಣಿಗೆ ಭಯಭಕ್ತಿಗಳಿಂದ ಶರಣು ಹೋಗಬೇಕಾಗುತ್ತದೆ, ಎಂದು ಪ್ರಾಚೀನ ಋಷಿಗಳು ಹೇಳಿದರೆ, ಈಶ್ವರ ಸೃಷ್ಟಿಯ ರಹಸ್ಯವನ್ನು ಅರಿಯಲು ಕೇವಲ ಇಂದ್ರಿಯಾನುಭವದ ಪ್ರಮಾಣ ಸಾಲದು, ಧ್ಯಾನದಿಂದ ಲಭಿಸುವ ದರ್ಶನವೇ ವಿಶ್ವಸಾಮರಸ್ಯ ಜ್ಞಾನಕ್ಕೆ ಸಾಧಕ ಎಂದು ಪಾಶ್ಚಾತ್ಯ ವಿಜ್ಞಾನಿಗಳೇ ಹೇಳಿದ್ದಾರೆ.

ಈ ವಿಶ್ವವು ಸೃಷ್ಟಿಯಾದಂದಿನಿಂದ ಜಗತ್ತಿನಲ್ಲಿ ಉಂಟಾಗಿರುವ ಧ್ವನಿ, ಬೆಳಕು, ಚಲನೆ, ಚಿಂತನೆಗಳೆಲ್ಲವೂ ಅಮೂರ್ತ ರೂಪದಲ್ಲಿ ಆಕಾಶದಲ್ಲಿ ಲೀನವಾಗಿರುವುದರಿಂದಲೇ, ಅತೀಂದ್ರಿಯ ಶಕ್ತಿಯುಳ್ಳವರಿಗೆ ಭೂತಕಾಲದಲ್ಲಿ ಆಗಿರುವುದನ್ನು ನೋಡುವ ಹಾಗೂ ಭವಿಷ್ಯದ ಗರ್ಭದಲ್ಲಿ ಹುದುಗಿರುವ ನಿಗೂಢಗಳನ್ನು ತಿಳಿಯುವ ಅವಕಾಶ-ಅನುಕೂಲಗಳು ಇರುತ್ತವೆ. ಅಂದರೆ ವಿಶೇಷ ಶಕ್ತಿ ಸಾಮರ್ಥ್ಯಗಳಿರುವವರಿಗೆ ಎಲ್ಲವನ್ನೂ ಗ್ರಹಿಸಲು ಸಾಧ್ಯವಾಗುತ್ತದೆ. ಪಾಶ್ಚಾತ್ಯ ವಿಜ್ಞಾನಿಗಳಲ್ಲಿರುವ ವಿಶಿಷ್ಟವಾದಂತಹ ಹೆಚ್ಚಿನ ಸೂಕ್ಷ್ಮಜ್ಞತೆ, ಪರಿಪೂರ್ಣ ಅನುಭವ ವಿಜ್ಞಾನ, ಪ್ರಯೋಗ ಶೂರತೆಯ ಉತ್ಸಾಹ, ಸೂತ್ರಬದ್ಧ ಸ್ಫುಟತ್ವ, ಕಲ್ಪನೆಯ ಉದಾತ್ತತೆ,

ಇವೆಲ್ಲವೂ ಭಾರತದ ಪ್ರಾಚೀನ ಋಷಿಗಳ ಚಿಂತನೆಯ ಫಲವಾದ ವೇದ-ಉಪನಿಷತ್ತುಗಳಲ್ಲಿ ಕಾಣಬರುತ್ತದೆ. ಅಂದರೆ ವಿಜ್ಞಾನ ಶಾಸ್ತ್ರಗಳ ಅಭಿಪ್ರಾಯವನ್ನು ವಿಚಾರ ಪರವಾದ ವೇದೋಪನಿಷತ್ತುಗಳು ಮತ್ತು ಪುರಾಣಾಗಮಗಳು ಪೋಷಿಸುತ್ತವೆ ಯಾದಕಾರಣ ಅವು ಒಂದಕ್ಕೊಂದು ಪೂರಕವಾಗಿದೆ ಎಂದರೆ ಆಶ್ಚರ್ಯವಾಗದಿರದು.

ಪಾಶ್ಚಾತ್ಯ ದೇಶಗಳಲ್ಲಿ ಜನರು ಜೀವಿಸಲು ಉಪಯೋಗಿಸುವ ಸಾಧನ ಸಂಪತ್ತುಗಳಿಂದ ಕೂಡಿದ ಭೌತ ಸಂಸ್ಕೃತಿಯು ಶರವೇಗದಿಂದ ಮುನ್ನಡೆದಿದ್ದು, ಅಲ್ಲಿ ವೈಚಾರಿಕ ಸಂಸ್ಕೃತಿಯ ಪ್ರೇರಣೆಯಿಂದ ಬೆಳೆದ ಅಭೌತ ಸಂಸ್ಕೃತಿಗೆ ಹೆಚ್ಚು ಮಹತ್ವವಿಲ್ಲ ; ಆದರೆ ಭಾರತದಲ್ಲಿ ರೀತಿ ನೀತಿ, ಆಚಾರ ವಿಚಾರ, ಜೀವನವನ್ನು ಕುರಿತ ದೃಷ್ಟಿಕೋನ, ಸಾಮಾಜಿಕ ಮೌಲ್ಯ, ಸಂಘಸಂಸ್ಥೆ ಇವುಗಳಿಂದ ಕೂಡಿದ ಅಭೌತ ಸಂಸ್ಕೃತಿಗೇ ಹೆಚ್ಚು ಮಹತ್ವವಿದ್ದು, ಇಲ್ಲಿ ಭೌತ ಸಂಸ್ಕೃತಿಗೆ ಮಹತ್ವ ಕಮ್ಮಿ. ಶಾಸ್ತ್ರೀಯ ಜ್ಞಾನದ ಸಂಪೂರ್ಣ ಲಾಭವನ್ನು ಪಡೆದು, ಭೂಮಿ ನೀರು ಅಗ್ನಿ ಗಾಳಿ ಆಕಾಶ ಎಂಬೀ ಪಂಚ ಮಹಾಭೂತಗಳ ಮೇಲಣ ಸ್ವಾಮಿತ್ವವನ್ನು ಸಂಪಾದಿಸಿ, ಪ್ರಜಾಪ್ರಭುತ್ವ ಮತ್ತು ಸಮಾಜವಾದಗಳ ಮೂಲಕ, ನಾಗರಿಕ ಜಗತ್ತಿಗೆ ಬೇಕಾದ ಸುಖ ಸಾಧನಗಳ ಉತ್ಪನ್ನ ಮಾಡುವುದು ಪಾಶ್ಚಾತ್ಯರ ಭೌತ ಸಂಸ್ಕೃತಿಗೆ ಸಾಧ್ಯವಾಯಿತು. ಕೇವಲ ಸುಖ ಸಾಧನಗಳ ಸೃಷ್ಟಿ ಹಾಗೂ ಸುಧಾರಣೆಗಳಿಂದ ಜೀವನದಲ್ಲಿ ಸಕಲ ಸೌಕರ್ಯಗಳನ್ನು ಹೊಂದಿದ್ದಾಗಲೂ, ನಿಜವಾದ ಸುಖ ಶಾಂತಿ ಸಮಾಧಾನಗಳು ಸಿಗುವುದಿಲ್ಲವೆಂಬ ತತ್ತ್ವದ ಅರಿವೇ ಇಲ್ಲದ ಈ ಭೌತ ಸಂಸ್ಕೃತಿಯಿಂದ, ಸುಸಂಸ್ಕೃತ ಮಾನವರನ್ನು ನಿರ್ಮಾಣಮಾಡುವುದು ಸಾಧ್ಯವಾಗಲಿಲ್ಲ. ಅಂದರೆ ಎಲ್ಲ ವಸ್ತುಗಳ ಮೇಲಣ ಸ್ವಾಮಿತ್ವವನ್ನು ಸಂಪಾದಿಸಲು ಸಾಧ್ಯವಾದ ಈ ಭೌತ ಸಂಸ್ಕೃತಿಗೆ ಸ್ವಂತದ ಮೇಲಣ ಸ್ವಾಮಿತ್ವವನ್ನು ಮಾತ್ರ ಸಂಪಾದಿಸಲು ಸಾಧ್ಯವಾಗಲಿಲ್ಲ.

ವಿಚಾರ ಶೂನ್ಯವಾದ ಅಂಧಶ್ರದ್ಧೆ ಬೆಳೆದು, ಮೂಢನಂಬಿಕೆ ಮತ್ತು ಅಜ್ಞಾನಗಳಿಂದ ಉದ್ಭವಿಸುವ ಸಂಕುಚಿತ ಸ್ವಾರ್ಥಮನೋವೃತ್ತಿ, ಅಸಹಿಷ್ಣುತೆ, ಪರಮತ ದ್ವೇಷ ಮುಂತಾದುವುಗಳಿಂದ ಸಮಾಜದಲ್ಲಿ ಅವ್ಯವಸ್ಥೆಯುಂಟಾದಾಗ, ಸಮಾಜದ ಮಾಲಿನ್ಯವನ್ನು ತೊಳೆದು, ವಿಚಾರ ಪೂರಿತ ಹಾಗೂ ಸರ್ವಸಮ್ಮತ ಆದ ಸತ್ಯಗಳನ್ನು ಕಂಡುಹಿಡಿದು ಪ್ರಪಂಚದಲ್ಲೆಲ್ಲಾ ಹರಡಿದ ವಿಜ್ಞಾನಿಗಳಿಗೆ ಮಾನವರೆಲ್ಲರೂ ಕೃತಜ್ಞರಾಗಿರಬೇಕು. ಆದರೆ ಇರುವುದನ್ನು ಅಧ್ಯಯನ ಮಾಡುವುದಷ್ಟೇ ವಿಜ್ಞಾನದ ಗುರಿಯಾದುದರಿಂದ, ಅದಕ್ಕೆ ಬದುಕಿಗೆ ದಾರಿ ತೋರಿಸಬೇಕೆನ್ನುವ ಶ್ರೇಷ್ಠ ಆದರ್ಶವಿರುವುದಿಲ್ಲ. ಅದು ತನ್ನ ಸಮೀಕ್ಷೆಗಳಿಂದ ಮಾನವರಿಗೆ ಒಂದು ಸದಾಚಾರ ಸಂಹಿತೆಯನ್ನು ರೂಪಿಸಿಕೊಡಲಾರದು. ಜೀವ, ಜಗತ್ತು, ಮಾನವೀಯ ಮೌಲ್ಯ, ವಾಸ್ತವಿಕ ಸತ್ಯ—ಇವುಗಳೆಲ್ಲದರ ಸಮನ್ವಯ ಆಗುವಂತಹ ಈ ಪ್ರಪಂಚದ ಒಂದು ಅಖಂಡ ಕಲ್ಪನೆಯನ್ನು ವೈಜ್ಞಾನಿಕ ಅನ್ವೇಷಣ—ಆವಿಷ್ಕಾರಗಳು, ವೈಜ್ಞಾನಿಕ ವರ್ಗ

ಗಳಲ್ಲಿ ಅಡಕಗೊಳಿಸಿ ಹೇಳಲಾರವು. ಜಗತ್ತಿನಲ್ಲಿರುವ ಶಕ್ತಿ ಸೌಂದರ್ಯಗಳನ್ನು ಸಾಕ್ಷಾತ್ಕರಿಸಿಕೊಳ್ಳಲು ನೆರವಾಗದ ವಿಜ್ಞಾನದಿಂದ, ಮಾನವನಿಗೆ ನೈತಿಕ ಮತ್ತು ಆಧ್ಯಾತ್ಮಿಕತೆಯ ಉನ್ನತಿಯನ್ನು ಪಡೆಯಲು ಅವಕಾಶ ಸಿಗದುದರಿಂದ ತೃಪ್ತಿ ಆನಂದ ಗಳು ದೊರಕದಾಗಿದೆ. ಇದರ ಫಲವಾಗಿ ಅನೀತಿ, ಹಿಂಸೆ, ಶೋಷಣೆಗಳು ಹೆಚ್ಚಿ, ನಿಯತ್ತು, ಶಿಸ್ತು ಇಲ್ಲವಾಗಿವೆ.

ವಿಜ್ಞಾನದ ಮುನ್ನಡೆಯಿಂದ ಮಾನವನು ದೇವತ್ವಕ್ಕೆ ಏರುವ ಬದಲು, ದಾನ ವತ್ವಕ್ಕೆ ಇಳಿಯುವ ಸಂಭವವೇ ಹೆಚ್ಚಾಗಿ ಕಾಣಬರುತ್ತಿದೆ. ವೈಜ್ಞಾನಿಕ ಸಿದ್ಧಾಂತದ ಬಗ್ಗೆ ಅಂಧಶ್ರದ್ಧೆ ಬೆಳೆದಾಗ, ಅದೂ ಸತ್ಯ ಶ್ರದ್ಧೆಯನ್ನು ದಮನಗೊಳಿಸಿ ಪ್ರಗತಿ ಯನ್ನು ಕುಂಠಿತಗೊಳಿಸುವ ಸಾಧ್ಯತೆ ಇಲ್ಲದಿಲ್ಲ. ಆದರೆ ಆಧ್ಯಾತ್ಮ ಯೋಗದಲ್ಲಿ ಮಾನವನು ದೇವನಾಗಬಲ್ಲನೇ ಹೊರತು ದಾನವನಾಗುವ ಸಂಭವ ಬಹು ಕಡಿಮೆ. ಏಕೆಂದರೆ ಧರ್ಮದ ನೆರವಿನಿಂದ ಜ್ಞಾನೋದಯವಾದ ಜೀವರುಗಳಲ್ಲಿ ದೇವರ ದೀಪವು ಬೆಳಗಿದಾಗ, ಅವರಲ್ಲಿ ದೈವೀಶಕ್ತಿಯು ಕಾರ್ಯ ಮಾಡಲಾರಂಭಿಸಿ, ಅವರು ಪ್ರಪಂಚದಲ್ಲಿ ಅತ್ಯಂತ ಪ್ರಬಲ ಜೀವಿಗಳಾಗಿ, ಜನರಲ್ಲಿರುವ ಮೋಹದ ವೃತ್ತವನ್ನು ಹರಿದು, ಅವರನ್ನು ಉದ್ಧರಿಸಬಲ್ಲವರಾಗುತ್ತಾರೆ. ಆದುದರಿಂದ ವ್ಯಕ್ತಿ ಮತ್ತು ಸಮೂಹ ಜೀವನವು ವಿಜ್ಞಾನ ನಿಷ್ಠ ಆಧ್ಯಾತ್ಮಿಕ ಆಗದಿದ್ದರೆ, ಮಾನವ ಕುಲವೇ ನಶಿ ಸುವ ಕಾಲ ಬಹು ದೂರವಿಲ್ಲ.

ಪ್ರಜೆ—ಪ್ರಭು ಇಬ್ಬರೂ ಧರ್ಮಾವಲಂಬಿಗಳಾದಾಗ ಮಾತ್ರವೇ ಶಾಂತಿ–ಅಭ್ಯುದಯಗಳು ಸಾಧ್ಯವೆಂಬುದನ್ನು ಭಾರತೀಯ ಋಷಿಗಳು ಕಂಡುಕೊಂಡು, ಕೇವಲ ಭೌತ ಎನಿಸುವ ಸಾಮಾಜಿಕ ಸ್ವರೂಪದ ಬಗೆಗೇ ಚಿಂತಿಸದೆ, ದೈವತ್ವದೊಂದಿಗೆ ಮಾನವ ಸಂಬಂಧವನ್ನು ಬೆಳೆಸುವ ಬಗೆಗೂ ಬಹುದೂರ ಚಿಂತನೆ ಮಾಡಿದ್ದಾರೆ. ತಪಶ್ಚರ್ಯ, ಯೋಗ ಸಾಧನೆ, ಸಿದ್ಧಿ ಮೊದಲಾದ ಕಲ್ಪನೆಗಳನ್ನು ಮಾಡಿ, ಅವು ಗಳನ್ನು ಅನುಷ್ಠಾನ ಮಾಡುವುದರಲ್ಲಿ, ಸಿದ್ಧಾಂತ-ವಿಚಾರ-ಕಲ್ಪನೆಗಳಿರುವ ಸಂಸ್ಕೃತಿ ಯನ್ನು ಬೆಳೆಸಿಕೊಂಡಿರುವುದರಲ್ಲಿ, ಭಾರತದ ಸನಾತನ ಧರ್ಮವು ಮಾನವ ಧರ್ಮ ವೆನಿಸಿ, ಜಗತ್ತಿನಲ್ಲಿ ಅದ್ವಿತೀಯವೆನಿಸಿಕೊಂಡಿದೆ. ಜೀವ-ಜಗತ್ತು ಅಥವಾ ವ್ಯಕ್ತಿ–ಸಮಾಜಗಳಲ್ಲಿ ಸಾಮರಸ್ಯವನ್ನು ಅಳವಡಿಸಿ, ಪರಸ್ಪರಾವಲಂಬನೆಯನ್ನು ಜೋಡಿಸಿದ ಒಂದು ಸುಸಂಘಟಿತವಾದ ಹಾಗೂ ಸೊಗಸಾದ ಸಮಾಜ ವ್ಯವಸ್ಥೆ, ಅದನ್ನು ಪ್ರಕಾಶ ಪಡಿಸಲು ಒಂದು ಸ್ಪಷ್ಟ ಹಾಗೂ ಉನ್ನತ ಆದ ವಿಚಾರ, ಜೀವನದ ಅಂತಿಮ ದೆಸೆ ಯಲ್ಲಿ ಆಧ್ಯಾತ್ಮಿಕ ಪರಿಪೂರ್ಣತೆ ಅಥವಾ ಮೋಕ್ಷದ ಬಗ್ಗೆ ತೀವ್ರವಾಗಿ ಜಾಗೃತ ವಾಗಿದ್ದ ಮನ—ಇವು ಅಭೌತ ಸಂಸ್ಕೃತಿಯ ತೌರು ಆದ ಪ್ರಾಚೀನ ಭಾರತದಲ್ಲಿ ಇದ್ದ ಒಂದು ವೈಶಿಷ್ಟ್ಯ. ಧರ್ಮ ಮತ್ತು ಪ್ರಾಚೀನತೆಗಳ ಬಗ್ಗೆ ಪ್ರಪಂಚದ ಯಾವ ರಾಷ್ಟ್ರವೂ ಭಾರತದೊಂದಿಗೆ ಸ್ಪರ್ಧಿಸಲಾರದೆಂದು ಪಾಶ್ಚಾತ್ಯ [illegible]

"ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಬಗು
ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ
ಋಷಿವಾಕ್ಯದೊಡನೆ ವಿಜ್ಞಾನ ಮೇಳವಿಸೆ
ಜಸವು ಜನ ಜೀವನಕೆ ಮಂಕುತಿಮ್ಮ ॥

ಎಂಬ ಡಾ॥ ಡಿ.ವಿ.ಜಿ.ಯವರ ಹೇಳಿಕೆಯಂತೆ ಆದಿ ಭೌತಿಕವಾದ ವಿಜ್ಞಾನ, ಆದಿ ಆತ್ಮಿಕವಾದ ಧರ್ಮ, ಇವೆರಡೂ ಬದುಕಿನ ಎರಡು ಪ್ರಮುಖ ಮಾರ್ಗಗಳಾಗಿರ ಬೇಕು. ಅಂದರೆ ಬಹಿರಂಗ ವಿಜ್ಞಾನದೊಂದಿಗೆ, ಅಂತರಂಗ ಜ್ಞಾನವೂ ಬೆಳೆದು ಸಮರಸವಾದಾಗಲೇ, ವಿಶ್ವವು ಒಂದು ಯಂತ್ರವಲ್ಲ, ಅದು ಒಂದು ಮಹಾ ಭಾವನೆ, ಮನೋವಸ್ತು ಎಂಬ ಅರಿವು ಆಗುತ್ತದೆ. ಅಂತಹ ವಿಜ್ಞಾನ ನಿಷ್ಠ ಧರ್ಮದ ಮೇಲೆ ನಿಂತ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯ ಕ್ರಮಗಳಿದ್ದಾಗ ಮಾತ್ರ, ಸಮಾಜವು ಅಭ್ಯುದಯವನ್ನು ಸಾಧಿಸಬಲ್ಲುದು.

A Hindu is free to think as he likes but not to do as he likes. So the Brain and Hand never unite in Indians ಎಂಬಂತೆ ವಿಚಾರ ಸ್ವಾತಂತ್ರ್ಯವಿದ್ದೂ ಕ್ರಿಯಾ ಸ್ವಾತಂತ್ರ್ಯವಿಲ್ಲ ದಿರುವುದು ಹಿಂದೂ ಸಮಾಜದಲ್ಲಿರುವ ಒಂದು ಪ್ರಧಾನ ದೋಷ. ಕೇವಲ ಪವಾಡ, ಕುರುಡು ನಂಬಿಕೆ, ಕುತರ್ಕ, ಪೂಜೆಗಳಿಗೆ ಮಹತ್ವ ಕೊಟ್ಟು, ಸಾಮಾಜಿಕ ಸಂಘಟನೆಗೆ ಪ್ರಾಮುಖ್ಯವನ್ನು ಕೊಡದೆ ನಿರ್ಲಕ್ಷ್ಯ ತಾಳಿದುದರಿಂದ, ಭಾರತದಲ್ಲಿ ಸಮಾಜ ದೊಂದಿಗೆ ಪ್ರತ್ಯೇಕಿಸಲಾಗದಷ್ಟು ಮಟ್ಟಿಗೆ ಬೆರೆತುಕೊಂಡಿರುವ ಸುಸಂಬದ್ಧವಾದ ಧಾರ್ಮಿಕ ಸಂಘಟನೆಯೂ ಅವನತಿ ಹೊಂದಬೇಕಾಯಿತು. ರೈತರು, ಕಾರ್ಮಿ ಕರು ಮತ್ತು ಸ್ತ್ರೀಯರಿಗೆ ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯವನು ಕೊಡದಿದ್ದುದರಿಂದಲೂ, ಹುಟ್ಟಿನಿಂದಲ್ಲದೆ ಗುಣ ಕರ್ಮಗಳ ಫಲವಾಗಿ ದೊರಕಿದ ಹಕ್ಕು ಮತ್ತು ಸವಲತ್ತುಗಳನ್ನು, ಹುಟ್ಟಿನಿಂದ ಮೇಲೆಂದು ಹೇಳಿಕೊಂಡ ಜಾತಿ ಯವರು ದುರುಪಯೋಗ ಮಾಡಿಕೊಂಡುದರಿಂದಲೂ, ಜನಸಾಮಾನ್ಯರಲ್ಲಿ ಹೊಗೆ ಯಾಡುತ್ತಿರುವ ಅತೃಪ್ತಿ–ದ್ವೇಷಗಳು ಯಾವಾಗಬೇಕಾದರೂ ಹತ್ತಿಕೊಂಡು ಎಲ್ಲ ವನ್ನೂ ಧ್ವಂಸ ಮಾಡಿಬಿಡಬಹುದು.

ಮಾನವನು ಸಾಮಾಜಿಕ ಪ್ರಾಣಿ. ಜಟಿಲ ಹಾಗೂ ಸಂಕೀರ್ಣವಾದ ಪರಿ ಸರದಲ್ಲಿ ಬೆಳೆದು ಬಂದ ಮಾನವನು, ತನ್ನ ವ್ಯಕ್ತಿತ್ವದ ವಿಕಾಸಕ್ಕಾಗಿ ಸಹಾಯ–ಸಹಕಾರಗಳನ್ನಿತ್ತ ಸಾಮಾಜಿಕ ಘಟಕಗಳಿಗೆ ಋಣಿಯಾಗಿರುವುದರಿಂದ, ಅವನು ತನ್ನ ಪಾಲಿನ ಕರ್ತವ್ಯ ಕರ್ಮಗಳನ್ನು ನೆರವೇರಿಸಿ, ದೇವ, ಪಿತೃ, ಋಷಿ, ನರ, ಭೂತಗಳಿಗೆ ಸೇವೆ ಸಲ್ಲಿಸಿ ಋಣಮುಕ್ತನಾಗುವುದೇ ಸಾಮಾಜಿಕ ಪ್ರಜ್ಞೆ ಎನಿಸು ತ್ತದೆ. ಇದರ ಅಭಾವದಿಂದಲೇ ಮಾನವ ಜೀವನದಲ್ಲಿ ನೈತಿಕ ಮುಗ್ಗಟ್ಟು ತಲೆ ದೋರಿದೆ. ಪ್ರಕೃತಿಯ ಮೇಲೆ ಮಾನವನು ಸಾಧಿಸಿದ ವಿಜಯ, ತನ್ನ ಮೇಲೆ

ಸಾಧಿಸಿರುವ ಅಪಜಯ—ಇವೆರಡಕ್ಕೂ ಇರುವ ಅಂತರವೇ ಇಂದಿನ ನೈತಿಕ ಮುಗ್ಗಟ್ಟಿಗೆ ಕಾರಣವಾಗಿದೆ. ಇದರ ಫಲವಾಗಿ ಅಸಭ್ಯ ವರ್ತನೆ, ಹಿಂಸೆ ಎಲ್ಲೆಲ್ಲೂ ಪ್ರಕಟವಾಗತೊಡಗಿದೆ. ಸರಳ, ಶಾಶ್ವತ ಆದ ನೈತಿಕ ಮೌಲ್ಯಗಳೆನಿಸಿದ ದಯೆ, ನ್ಯಾಯ, ಪ್ರಾಮಾಣಿಕತೆ, ಅನುಕಂಪ, ಮಾನವೀಯತೆ, ಇವೇ ಸಾರ್ವ ಭೌಮವಾಗಿರುವಂತಹ ನೂತನ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸಿದಾಗ ಮಾತ್ರ, ಸಾಮಾಜಿಕ ಪ್ರಜ್ಞೆಯು ಮತ್ತೆ ಬೆಳಗಿ ಕಂಗೊಳಿಸಬಲ್ಲುದು. ಧಾರ್ಮಿಕ ಸಂಘಟನೆ, ಸಾಮಾಜಿಕ ಸಂಘಟನೆ ಎರಡೂ ಒಂದೇ ನಾಣ್ಯದ ಎರಡು ಮುಖಗಳು. ಮಠಾಧಿಪತಿಗಳು, ಶಿಕ್ಷಕರು, ಸರ್ಕಾರಗಳೆಲ್ಲ ಕಲೆತು ಒಂದು ಅತ್ಯುತ್ತಮವಾದ ವೈಜ್ಞಾನಿಕ ಧರ್ಮ ಶಿಕ್ಷಣವು ನಾಡಿನ ಮಕ್ಕಳಿಗೆಲ್ಲ ಸಿಗುವಂತೆ ಅವಕಾಶ ಕಲ್ಪಿಸಿ, ಅನುಕೂಲ ಮಾಡಿಕೊಡುವುದು ಅತಿ ಜರೂರಾಗಿ ಆಗಬೇಕಾದ ಅತಿಮುಖ್ಯ ಕಾರ್ಯ.

# 3. ಧರ್ಮ ಜೀವನದ ಆದರ್ಶಗಳು

ಮಾನವರಲ್ಲಿ ಇಂದ್ರಿಯಗಳ ಪ್ರಭಾವದ ಪರಿಣಾಮವಾಗಿ ಮೊದಲು ಭಾವನೆಗಳು ಉಂಟಾಗಿ, ಆಮೇಲೆ ಅವು ಆಚಾರದ ಮಾರ್ಗದರ್ಶನ ನೀಡುವ ಆದರ್ಶಗಳಾಗಿ ಪರಿಣಮಿಸುತ್ತವೆ. ವ್ಯಕ್ತಿಯ ಜೀವನದ ಗುಣ ಮಟ್ಟವನ್ನು ನಿರ್ಧರಿಸುವುದು ಹಾಗೂ ಈ ಪ್ರಪಂಚವನ್ನು ಒಳಿತು ಕೆಡಕುಗಳ ಕಡೆ ಚಲಿಸುವಂತೆ ಮಾಡುವುದು ಈ ಆದರ್ಶಗಳೇ. ದೇಶದಲ್ಲಿ ನಡೆಯುವ ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಚಳುವಳಿಗಳೆಲ್ಲವೂ ಒಂದಲ್ಲ ಒಂದು ಆದರ್ಶದಿಂದಲೇ ಮಾರ್ಗದರ್ಶನ ಪಡೆಯುತ್ತವೆ.

ಆಲೋಚನೆ, ಕ್ರಿಯೆಗಳ ಕಾಲದಲ್ಲಿ ನಮ್ಮ ಮುಂದೆ ಆದರ್ಶಗಳು ಇರಬೇಕು. ಆದರ್ಶಗಳು ಶೀಲ ಅಥವಾ ನಡತೆಯನ್ನು ನಿಯಂತ್ರಿಸಿ ನಿರ್ದೇಶಿಸುತ್ತವೆ. ಆದುದರಿಂದ ವ್ಯಕ್ತಿ ಹಾಗೂ ಸಮೂಹದ ನೈತಿಕ ಮಟ್ಟವು ಅದರ ಆದರ್ಶಗಳ ಮೇಲೆ ಅವಲಂಬಿಸಿರುತ್ತದೆ. ಕೆಲವು ವೇಳೆ ಮನಸ್ಸಿನಲ್ಲಿ ಉಚ್ಚ ಆದರ್ಶವಿದ್ದರೂ, ಹೋಗುವ ದಾರಿ ಹಾಗೂ ಮಾಡುವ ಕ್ರಿಯೆ ನೀಚವಾಗಿರುವುದುಂಟು. ಆದರೆ ಯಾರು ಕಷ್ಟ, ದುಃಖ ಸಮಯದಲ್ಲಿಯೂ ಶ್ರೇಷ್ಠವಾದ ಆದರ್ಶಕ್ಕೆ ಅಂಟಿಕೊಂಡಿರುತ್ತಾರೋ ಅವರೇ ಮಹಾತ್ಮ ಎನಿಸಿಕೊಳ್ಳಲು ಅರ್ಹರು. ಏಕೆಂದರೆ ಮಹಾತ್ಮರ ಆದರ್ಶ, ನಡೆವಳಿಕೆಗಳಲ್ಲಿ ಸಾಮರಸ್ಯ ಏರ್ಪಟ್ಟಿದ್ದು, ಅವು ಜೊತೆ ಜೊತೆಯಾಗಿ ಹೋಗುತ್ತವೆ. ಈ ಮಹಾತ್ಮರು ಆದರ್ಶದ ಸಲುವಾಗಿ ಉಳಿದು ಅಳಿಯಲು ಸಿದ್ಧರಾಗಿರುತ್ತಾರೆ. ಜೊತೆಗೆ ಸಾವಿನ ಎದುರಿನಲ್ಲಿಯೂ ಸತ್ಯಕ್ಕಾಗಿ ಹೋರಾಡಿ ಹುತಾತ್ಮರಾಗುವಂಥವರು. ಅಂತಹ ಜನರು ದೈಹಿಕವಾಗಿ ಸಾವನ್ನು ಅಪ್ಪಿದ್ದರೂ ಸಹ ಆಧ್ಯಾತ್ಮಿಕವಾಗಿ ಅಮರರಾಗಿಯೇ ಉಳಿಯುತ್ತಾರೆ. ಪ್ರಪಂಚದ ಇತಿಹಾಸದಲ್ಲಿ ಅಂತಹವರ ಜೀವನವನ್ನು ಪರಿಶೀಲಿಸಿದಾಗ ನಮಗೆ ಕೆಲವು ಆದರ್ಶಗಳು ಸಿಗುತ್ತವೆ, ಅವು ಹೀಗಿವೆ :—

1) ವ್ಯಕ್ತಿಯಲ್ಲಿ ಉತ್ತಮವಾದ ವಿವೇಚನೆ ಮತ್ತು ವಿಮರ್ಶೆಗಳ ವಿವೇಕ ಶಕ್ತಿಯು ಬರಬೇಕಾದರೆ, ಅವನಲ್ಲಿ ಅಜ್ಞಾನವೆಂಬ ಅಂಧಕಾರವು ನಾಶವಾಗಿ ಜ್ಞಾನವೆಂಬ ಬೆಳಕು ಪ್ರಜ್ವಲಿಸಬೇಕು. ಅಂದರೆ ಆತ್ಮನ ರಕ್ಷಣೆ ಮತ್ತು ವಿಕಾಸಗಳನ್ನು ಸಾಧಿಸಲು ಮಾನವರಲ್ಲಿ ಜ್ಞಾನದ ದಾಹ ಉಂಟಾಗಬೇಕು. ಜ್ಞಾನವೇ ಸ್ವಾತಂತ್ರ್ಯ. ಆದರೆ ಜ್ಞಾನವು ಕೇವಲ ತಿಳಿವಳಿಕೆಗಾಗಿ ಇರಬೇಕೇ ಹೊರತು, ಉಪಭೋಗಕ್ಕಾಗಿ

ಇರುವುದು ಸರಿಯಲ್ಲ. ಏಕೆಂದರೆ ಮಾನವನು ತನ್ನ ಆವಶ್ಯಕತೆಗಳ ದಾಸನಾಗದೆ ಅವುಗಳನ್ನು ಮೆಟ್ಟಿ ನಿಲ್ಲಬಲ್ಲ ಶಕ್ತಿಯನ್ನು ಹೊಂದಿರುತ್ತಾನೆ.

ಮಾನವನು ಜ್ಞಾತೃ, ಜ್ಞೇಯ ಎರಡೂ ಆಗಿದ್ದಾನೆ. ಅವನು ತನ್ನನ್ನೂ, ಈ ಪ್ರಪಂಚವನ್ನೂ ತಿಳಿಯಬಲ್ಲ ಶಕ್ತಿ ಅವನಿಗಿದೆ. ಜ್ಞಾನದಲ್ಲಿ ತಿಳಿದುದು, ತಿಳಿದವ, ಕರ್ಮ ಮೂರೂ ಸೇರಿದ್ದು, ಇವುಗಳ ಅರಿವೇ ನಿಜವಾದ ಜ್ಞಾನ ಎನಿಸುತ್ತದೆ. ಮಾನವನಿಗೆ ಪ್ರತ್ಯಕ್ಷ, ಅನುಮಾನ, ಶಬ್ದ ಎಂಬೀ ಮೂರು ಪ್ರಮಾಣಗಳ ಮೂಲಕ ಜ್ಞಾನವು ಸಿಗುತ್ತದೆ. ಪ್ರತ್ಯಕ್ಷ ಪ್ರಮಾಣದಲ್ಲಿ ಜ್ಞಾತೃ-ಜ್ಞೇಯ ಎರಡಕ್ಕೂ ಇಂದ್ರಿಯಗಳ ಮೂಲಕ ಸಂಪರ್ಕ ಏರ್ಪಡುತ್ತದೆ. ಅನುಮಾನದಲ್ಲಿ ಪರೋಕ್ಷ ಪ್ರಮಾಣವಿದ್ದು, ವ್ಯಾಪ್ತಿ, ಪರಾಮರ್ಶ ಎಂಬೆರಡು ವಿಧಾನದಿಂದಲೂ ಅನುಭವ ಉಂಟಾಗಿ ವ್ಯವಸ್ಥಿತವಾಗುತ್ತದೆ. ಲೌಕಿಕ ಜ್ಞಾನ ಮತ್ತು ವಿಜ್ಞಾನಗಳಲ್ಲಿ ಪ್ರತ್ಯಕ್ಷ, ಅನುಮಾನ ಎರಡೂ ವಿಧಾನಗಳಿರುತ್ತವೆ. ಆದರೆ ಧಾರ್ಮಿಕ ಜ್ಞಾನವನ್ನು ಪಡೆಯ ಬೇಕಾದರೆ ಶಬ್ದ ಪ್ರಮಾಣವೂ ಬೇಕಾಗುತ್ತದೆ. ಶಬ್ದವು ದೇವರು, ಋಷಿಗಳು ಹಾಗೂ ಸಂತರುಗಳಿಂದ ಅನುಗ್ರಹಿಸಲ್ಪಟ್ಟಿರುವುದರಿಂದ, ಅವೂ ಸತ್ಯವಾಗಿ, ದೋಷ ರಹಿತವಾಗಿವೆ. ಶಬ್ದಗಳ ಅಧ್ಯಯನಕ್ಕೆ ನಿರೀಕ್ಷೆ, ತರ್ಕಗಳು ಅವಶ್ಯವಾಗುತ್ತವೆ. ಹೀಗೆ ಒಬ್ಬ ವ್ಯಕ್ತಿಗೆ ಪೂರ್ಣ ಜ್ಞಾನ ಸಿಗಬೇಕಾದರೆ ಈ ಮೂರು ವಿಧಾನವನ್ನು ಅನುಸರಿಸಬೇಕು. ಅಂದರೆ ಪೂರ್ಣ ಜ್ಞಾನ ಬೇಕಾದವರು, ವಿಜ್ಞಾನದ ಜೊತೆಗೆ ತತ್ತ್ವ ಶಾಸ್ತ್ರ ಮತ್ತು ಧರ್ಮಗಳನ್ನು ಕಲಿಯಬೇಕು. ಇಂತಹ ಶ್ರೇಷ್ಠ ಜ್ಞಾನವೇ ಮುಕ್ತಿಯನ್ನು ದೊರಕಿಸುವ ಸಾಧನವಾಗುತ್ತದೆ.

2) ಪ್ರಕೃತಿಯ ಮೂಲಕ ದೈವೀಶಕ್ತಿಯು ವ್ಯಕ್ತವಾಗುವುದನ್ನು ಹಾಗೂ ದೇವರು ಇರುವುದನ್ನು ನೋಡಿ ಅದರ ಅನುಭವವನ್ನು ಪಡೆಯಬಹುದು. ಸತ್ಯ, ಸದ್ಗುಣ, ಸುಂದರವೆಂಬ ಭಾರತೀಯ ಮೌಲ್ಯಗಳು ಮಾನವನ ಹೃದಯವನ್ನು ಹೊಕ್ಕಾಗ ಉಂಟಾಗುವ ಚಲನೆಯು ಸಂಗೀತ, ಸಾಹಿತ್ಯ ಶಿಲ್ಪ, ಚಿತ್ರಕಲೆ, ಕುಶಲತೆ ಮುಂತಾದುಗಳ ಮೂಲಕ ಹೊರ ಹೊಮ್ಮುತ್ತದೆ. ವ್ಯಕ್ತಿಯ ಮನಸ್ಸಿಗೆ ಸತ್ಯವು ರೋಚಕವಾದಾಗ ಅದು ಅಸತ್ಯವನ್ನು ದೂರಮಾಡಲಿಚ್ಛಿಸುತ್ತದೆ. ಸೌಂದರ್ಯಾನು ಭವ ಆದಾಗ ಅದು ಕುರೂಪದಿಂದ ವಿಮುಖವಾಗಲಿಚ್ಛಿಸುತ್ತದೆ. ಲೋಕ ಕಲ್ಯಾಣ ಸಾಧನೆಯ ಪ್ರವೃತ್ತಿಗಳು ನೆಲಸಿದಾಗ ಅದು ಪರಹಿಂಸೆಯಿಂದ ದೂರವಾಗಲಿಚ್ಛಿಸು ತ್ತದೆ. ಆದಕಾರಣ ಹುಲ್ಲು, ನೀರು, ಮೋಡ, ಹಕ್ಕಿಗಳ ಧ್ವನಿ, ಪ್ರಾಣಿಗಳ ಕೂಗು ಎಲ್ಲದರಲ್ಲಿಯೂ ದೈವಾಂಶವಿದ್ದು, ಅವೆಲ್ಲ ದೇವರ ಸಂದೇಶವನ್ನು ಮಾನವರಿಗೂ, ಮಾನವರ ಪ್ರಾರ್ಥನೆಯನ್ನು ದೇವರಿಗೂ, ತಲಪಿಸುವ ಸಾಧನವಾಗುತ್ತದೆ. ಆದುದ ರಿಂದಲೇ ಅನೇಕ ಕವಿಗಳು ಇವುಗಳನ್ನು ತಮ್ಮ ಕೃತಿಗಳಲ್ಲಿ ಉಪಯೋಗಿಸಿಕೊಂಡಿ ದ್ದಾರೆ. ಪ್ರಕೃತಿ ಪ್ರೇಮವೂ ಒಂದು ರೀತಿಯಲ್ಲಿ ದೈವ ಪ್ರೇಮ ಎನ್ನಲಡ್ಡಿ ಯಿಲ್ಲ.

3) ಸತ್ಯವು ಧರ್ಮದ ಹಿರಿಯ ಆದರ್ಶ. ಅಂತರಾತ್ಮವು ಸತ್ಯಕ್ಕಾಗಿ ಯಾವಾಗಲೂ ಕಾತರಿಸುತ್ತಿರುತ್ತದೆ. ಪ್ರಪಂಚದಲ್ಲಿ ಶ್ರೇಷ್ಠ ವ್ಯಕ್ತಿಗಳು ಎಂದೆನಿಸಿ ಕೊಂಡಿರುವವರೆಲ್ಲರೂ ಸತ್ಯವನ್ನು ಚೆನ್ನಾಗಿ ಪ್ರೀತಿಸಿ, ಅದಕ್ಕಾಗಿ ಹೋರಾಡಿ, ಹುತಾತ್ಮರಾಗಿದ್ದಾರೆ.

4) ಪ್ರತಿಯೊಂದು ಧರ್ಮದಲ್ಲಿಯೂ ನೀತಿಯು ಒಂದು ಶ್ರೇಷ್ಠ ಆದರ್ಶ. ಐಹಿಕ ಜೀವನದ ಭೋಗ ವಿಲಾಸಗಳಿಗೆ ಹೆಚ್ಚು ಆಸಕ್ತಿ ತೋರಿಸಿದಾಗ ಆಧ್ಯಾತ್ಮಿಕತೆ ಕಡಿಮೆಯಾಗಿ, ಅನೀತಿ ಹೆಚ್ಚಲು ಅವಕಾಶವಾಗುತ್ತದೆ. ನೀತಿಯ ಮಟ್ಟವು ಬೇರೆ ಬೇರೆ ಧರ್ಮಗಳಲ್ಲಿ ಬೇರೆ ಬೇರೆ ರೀತಿಯಲ್ಲಿದ್ದರೂ, ಸತ್ಯಸಂಧತೆ, ನ್ಯಾಯ, ದಯೆ, ದಾನ, ಸಹಾನುಭೂತಿ, ತಾಳ್ಮೆ, ಉದಾರತೆ, ಸಹನೆ, ಪ್ರಾಮಾಣಿಕತೆ, ಪರರ ಪ್ರಾಣ-ಆಸ್ತಿಗಳಿಗೆ ಗೌರವ ಮುಂತಾದ ಕೆಲವು ಮೂಲಭೂತ ಸದ್ಗುಣಗಳು ಎಲ್ಲಕ್ಕೂ ಒಪ್ಪಿಗೆಯಾಗಿವೆ. ಯಾವ ದಯೆ, ಸಹಾಯಗಳಿಂದ, ಅವನ್ನು ಪಡೆದ ವ್ಯಕ್ತಿಯಲ್ಲಿ ನೂತನ ಹೊಣೆಗಾರಿಕೆಯ ಭಾವನೆ, ಒಂದು ಉತ್ತಮ ಜೀವನವನ್ನು ನಡೆಸಲು ಸ್ಫೂರ್ತಿ ಉಂಟಾಗಿ, ಅವನು ತನ್ನ ಕಾಲ ಮೇಲೆ ತಾನು ನಿಲ್ಲಬಲ್ಲೆನೆಂಬ ಧೈರ್ಯ ಬರುತ್ತದೋ, ಅದೇ ಎಲ್ಲ ಮಾನವರೂ ಒಬ್ಬರಿಗೊಬ್ಬರು ತೋರಿಸಬೇಕಾದ ದಯೆ ಹಾಗೂ ಮಾಡಬೇಕಾದ ಸಹಾಯ.

5) ಎಲ್ಲ ಧರ್ಮಗಳೂ ಕೀಳಾದ ನಿರಾಶಾಭಾವನೆಯನ್ನು ಕಿತ್ತೊಗೆದು, ಶ್ರೇಷ್ಠವಾದ ಆಶಾಭಾವನೆಯನ್ನು ಬೋಧಿಸಿ, ನ್ಯಾಯವಾದ ಕ್ರಿಯೆಯನ್ನು ಮಾಡಲು ಪ್ರೋತ್ಸಾಹ ನೀಡುತ್ತವೆ. ಯಾವುದೇ ಕ್ರಿಯೆಯನ್ನು ಮಾಡಬೇಕಾದಾಗ ವಿವೇಕದಿಂದ ಸರಿ ತಪ್ಪುಗಳನ್ನು ವಿವೇಚಿಸಿ, ವಿಮರ್ಶಿಸಿ ತೀರ್ಮಾನಿಸಬೇಕಾದುದು ಅತ್ಯಗತ್ಯ. ಈ ತೀರ್ಮಾನವನ್ನು ಕೈಗೊಳ್ಳಲು ನಮ್ಮ ಅಂತರಾತ್ಮವೇ ಶ್ರೇಷ್ಠ ನ್ಯಾಯಾಧಿಪತಿ. ಆದ ಕಾರಣ ನಮ್ಮ ಎಲ್ಲ ಕ್ರಿಯೆಗಳಲ್ಲಿಯೂ ಬುದ್ಧಿ ಮತ್ತು ಇಂದ್ರಿಯಗಳ ಮಾರ್ಗದರ್ಶನವನ್ನು ಕಡೆಗಣಿಸಿ, ಅಂತರಾತ್ಮನ ತೀರ್ಪಿಗೇ ಮರೆ ಹೋಗಬೇಕು. ಕ್ರಿಯೆಯನ್ನು ಮಾಡುವ ಸಂದರ್ಭಗಳಲ್ಲೆಲ್ಲಾ ಫಲದ ಕಡೆಗೆ ಗಮನ ಕೊಡದೆ, ಒಳ್ಳೆಯ ಕಾಲ ಬಂದೇ ಬರುತ್ತದೆಂಬ ಪ್ರಬಲವಾದ ಆಶಾಭಾವನೆಯನ್ನು ಹೊಂದಿ, ಸರಿಯಾದ ಕಾರ್ಯವನ್ನು ಮಾಡುತ್ತಿರಬೇಕು.

6) ಸುಖ ಶಾಂತಿ ಸಂತೋಷಗಳಿಂದ ಜೀವಿಸಲು ಆಶಿಸುವಂಥ ಮಾನವನು ಆರೋಗ್ಯವಂತ, ಬಲಶಾಲಿ ಆಗಿರುವುದು ಅವಶ್ಯ. ರೋಗ–ದೌರ್ಬಲ್ಯಗಳಿಂದ ಆವರಿಸಲ್ಪಟ್ಟ ದೇಹವು ಆತ್ಮದ ವಿಕಾಸಕ್ಕೆ ಉಪಯುಕ್ತ ಸಾಧನವಾಗಲಾರದು. ದೇಹವು ಆತ್ಮ ಎಂಬ ವಿಗ್ರಹದ ದೇವಾಲಯವಾದುದರಿಂದ, ದೇಹವು ಶುದ್ಧವಾಗಿ ಇರಬೇಕು. ದಿನಕ್ಕೆ ಮೂರು ವೇಳೆ ಅಂದರೆ ತ್ರಿಕಾಲ ಸ್ನಾನ ಮಾಡಬೇಕೆಂಬ ವಿಧಿ ಸನಾತನ ಹಿಂದೂ ಧರ್ಮದಲ್ಲಿದೆ. ಸ್ನಾನದಿಂದ ಶುದ್ಧವಾದ ದೇಹಕ್ಕೆ ಸ್ವಚ್ಛ, ಸರಳ ಆಗಿರುವ ವಸ್ತ್ರಗಳನ್ನು ತೊಡಬೇಕು. ನಿತ್ಯದ ಆಹಾರದ ಮೇಲೆ ಮನುಷ್ಯನ

ನಡತೆ, ವರ್ತನೆ, ಗುಣಗಳೆಲ್ಲ ಅವಲಂಬಿಸಿರುವುದರಿಂದ, ಆಹಾರ ಸೇವನೆಯಲ್ಲಿ ವಿವೇಚನೆ, ನಿಯಂತ್ರಣ ಇರಬೇಕಾಗುತ್ತದೆ.

ದೈವೀಗುಣ ಮತ್ತು ಚಟುವಟಿಕೆಗಳನ್ನು ನೀಡುವುದು ಸಾತ್ವಿಕ ; ಸಂವೇಗ, ಧೈರ್ಯ ಸಾಹಸಗಳನ್ನು ಉಂಟು ಮಾಡುವುದು ರಾಜಸ ; ಮೈಗಳ್ಳತನ, ಸೋಮಾರಿತನ, ಮಂಕುತನಗಳನ್ನುಂಟುಮಾಡುವುದು ತಾಮಸ. ಆದುದರಿಂದ ಯಾವಾಗಲೂ ಸಾತ್ವಿಕ ಆಹಾರವನ್ನೇ ಹೆಚ್ಚಾಗಿ ತೆಗೆದುಕೊಂಡು, ರಾಜಸ ಆಹಾರ ವನ್ನು ಸ್ವಲ್ಪವೇ ಸ್ವೀಕರಿಸಿ, ತಾಮಸ ಆಹಾರವನ್ನು ಪೂರ್ಣವಾಗಿ ತ್ಯಜಿಸಬೇಕು. ವಿವೇಚನೆ ಇಲ್ಲದೆ ಇಷ್ಟವಾದ ಹಾಗೂ ಕೈಗೆ ಸಿಕ್ಕಿದ ಆಹಾರವನ್ನು ಸೇವಿಸುವುದರಿಂದ, ಅನೇಕ ದೈಹಿಕ ಹಾಗೂ ಮಾನಸಿಕ ಅವ್ಯವಸ್ಥೆಯುಂಟಾಗಿ ರೋಗಗಳು ಉಂಟಾಗುತ್ತವೆ.

ಪರಿಶುದ್ಧ ಆಹಾರದೊಂದಿಗೆ ಒಳ್ಳೆಯ ನೀರು, ಗಾಳಿಗಳೂ ಅತ್ಯಾವಶ್ಯಕ. ಯಾವುದಾದರೂ ಒಂದು ರೀತಿಯಲ್ಲಿ ದೇಹಕ್ಕೆ ಅಂಗಸಾಧನೆ, ವ್ಯಾಯಾಮ ಇರುವಂತೆ ನೋಡಿಕೊಳ್ಳಬೇಕು. ಇವುಗಳನ್ನೆಲ್ಲ ಮೊದಮೊದಲು ನಾವು ಇಚ್ಛಿಸಿ, ಪ್ರಯತ್ನಿಸಿ ಮಾಡಬೇಕಾದರೂ, ಕೆಲವು ಕಾಲದ ನಂತರ ಅವು ಅಭ್ಯಾಸಗಳಾಗಿ ಮಾರ್ಪಟ್ಟು, ನಮ್ಮ ಇಚ್ಛೆ–ಪ್ರಯತ್ನಗಳಿಲ್ಲದಿದ್ದರೂ ನಡೆಯುತ್ತವೆ.

7) ದೈಹಿಕ ಶುದ್ಧಿಯ ಜೊತೆಗೆ ಮಾನಸಿಕ ಶುದ್ಧಿಯೂ ಅವಶ್ಯಕ. ನಮ್ಮ ಎಲ್ಲ ಕೃತಿ, ಮಾತುಗಳ ಮೂಲ ಅಥವಾ ಬೀಜವು ಆಲೋಚನೆ. ಆಲೋಚನೆಯು ಕೆಟ್ಟದಾಗ, ಮಾತು ಕೃತಿಗಳೂ ಕೆಟ್ಟವು ಆಗಿರುವುದು ಸಹಜ. ಆಲೋಚಿಸುವ ಮನಸ್ಸು ಪರಿಶುದ್ಧ, ನಿರ್ಮಲ ಆಗಿದ್ದರೆ ಅದು ವೈಯಕ್ತಿಕ ಹಾಗೂ ಸಾಮೂಹಿಕ ಪಾಪ ಕಾರ್ಯಗಳ ಪ್ರಭಾವದಿಂದ ನಮ್ಮನ್ನು ದೂರವಿರಿಸುತ್ತದೆ ಹಾಗೂ ಒಳ್ಳೆಯ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಹಾಯ ಮಾಡುತ್ತದೆ. ಕೆಟ್ಟ ಆಲೋಚನೆ ಗಳನ್ನು ತ್ಯಜಿಸುವುದರ ಜೊತೆಗೆ, ಒಳ್ಳೆಯ ಮಾತು ಕೃತಿಗಳನ್ನು ಪ್ರೇರೇಪಿಸುವಂತಹ ಆಲೋಚನೆಯನ್ನು ಹೊಂದಿರುವುದು ಸ್ವಚ್ಛವಾದ ಮನಸ್ಸಿನ ಲಕ್ಷಣ. ಸ್ವಚ್ಛತೆಯು ಹೆಚ್ಚಿದಷ್ಟೂ, ಜೀವನದ ಅಭಿಪ್ರಾಯದ ಭದ್ರತೆ ಹೆಚ್ಚಾಗಿ, ಅದು ಎಂತಹ ಕಠಿಣ ಸಂದರ್ಭದಲ್ಲಿಯೂ ಅಲುಗಾಡದೆ ದೃಢವಾಗಿರುತ್ತದೆ.

8) ಎಲ್ಲ ಧರ್ಮಗಳಲ್ಲಿಯೂ ಪ್ರಾರ್ಥನೆ, ಧ್ಯಾನ, ಸ್ವಶಿಸ್ತುಗಳಿಗೆ ಪ್ರಾಧಾನ್ಯ ವಿರುತ್ತದೆ. ದೇವರನ್ನು ತಾಯಿ, ತಂದೆ, ಸಖ, ಪ್ರಿಯತಮ, ಒಡೆಯ ಮುಂತಾದ ಭಾವದಲ್ಲಿ ಪ್ರೀತಿಸಬಹುದು. ಜೀವಾತ್ಮನೆಂಬ ಮಗುವು ಪರಮಾತ್ಮನೆಂಬ ತಾಯಿ ಗಾಗಿ ಅನವರತವೂ ಹಂಬಲಿಸುತ್ತಿರುತ್ತದೆ. ಪ್ರೇಮ, ಶರಣಾಗತಿಗಳ ಮೂಲಕ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಪ್ರಾರ್ಥನೆ. ಪ್ರಾರ್ಥನೆಗೆ ವಿಧಾನ, ಕಾಲ ಒಂದೇ ರೀತಿ ಇರಬೇಕಾದುದಿಲ್ಲ.

ಶಿಸ್ತಿನಿಂದ ಕೂಡಿದ ಧ್ಯಾನದಿಂದ, ಸ್ವವಿಭಜನೆ, ಅಂತರಾವಲೋಕನಗಳ

ಮೂಲಕ ಸ್ವಚ್ಛವಾಗುವ ಮನಸ್ಸು ಆಮೇಲೆ ವಿಚಲಿತವಾಗುವುದಿಲ್ಲ. ಧ್ಯಾನ ಮಾಡುವಾಗ ಮನಸ್ಸಿಗೆ ಮೊದಲು ಪ್ರಪಂಚದ ಹಾಗೂ ತನ್ನ ನೆರೆಹೊರೆಯವರ ಅರಿವು ಇದ್ದರೂ, ಕೊನೆಗೆ ಅಂತಹ ಮನಸ್ಸು ತನ್ನ ಮಾನಸಿಕ ಶಕ್ತಿಯನ್ನು ಕೇಂದ್ರೀಕೃತ ಮಾಡಲು ಯೋಗ್ಯವಾಗಿ, ಮೇಲ್ಮಟ್ಟಕ್ಕೆ ಏರಿ, ದೇವನೊಂದಿಗೆ ಐಕ್ಯ ವಾಗಲು ನೆರವು ಸಿಗುತ್ತದೆ. ದೈವೀ ಅನುಭವವನ್ನು ಪಡೆದವನು, ಈ ಪ್ರಪಂಚ ದಲ್ಲಿ ಬೇರೆಯವರೊಂದಿಗೆ ವಾಸಿಸುತ್ತಿದ್ದರೂ, ಅವರಿಗಿಂತ ಮೇಲೆ ನಿಂತು ತನ್ನ ಕೃತಿ ಗಳನ್ನೆಲ್ಲ ದೈವೀ ಶಕ್ತಿಗೇ ಅರ್ಪಿಸುತ್ತಾನೆ. ಅವನು ಪ್ರಪಂಚವನ್ನು ನೋಡುವ ವಿಧಾನವು ಇತರರಿಗಿಂತ ಬೇರೆಯಾಗಿರುತ್ತದೆ.

ಹೀಗೆ, ಪ್ರಾರ್ಥನೆ, ಸ್ವಶಿಸ್ತು, ಧ್ಯಾನಗಳ ಮೂಲಕ ಮಾನವನು ಮೊದಲು ತನ್ನನ್ನು ತಾನು ಅರಿತುಕೊಂಡು, ಆಮೇಲೆ ದೈವತ್ವದ ಇರುವಿಕೆಯನ್ನು ಅರಿತು, ದೇವರನ್ನು ತನ್ನ ತಂದೆಯೆಂದೂ, ಮಾನವರನ್ನು ತನ್ನ ಸೋದರ ಸೋದರಿಯರೆಂದೂ ಭಾವಿಸುತ್ತಾನೆ.

9) ಧಾರ್ಮಿಕನಾದ ಮನುಷ್ಯನು ತನ್ನ ಜೀವನದಲ್ಲಿ ಮಾನವೀಯತೆಯನ್ನು ಪಾಲಿಸಬೇಕು. ದೈಹಿಕವಾಗಿಯೇ ಅಲ್ಲದೆ ಆಧ್ಯಾತ್ಮಿಕವಾಗಿ ಮತ್ತು ನೈತಿಕ ವಾಗಿಯೂ ಮಾನವ ಆಗಿರಬೇಕು. ನೆರೆಹೊರೆಯವರಲ್ಲಿ ದೈವತ್ವ, ಭ್ರಾತೃತ್ವಗಳನ್ನು ಕಂಡುಕೊಳ್ಳಬೇಕು. ಅಂದರೆ ಎಲ್ಲ ಮಾನವರಲ್ಲಿಯೂ ದೈವಾಂಶವಿದೆ, ಸಮಾಜದ ಸದಸ್ಯರೆಲ್ಲರೂ ತನ್ನ ಬಂಧುಗಳು, ಎಂಬುದನ್ನು ಅರಿತು ವ್ಯವಹರಿಸಬೇಕು. ಮಾನವೀಯತೆ ಎಂಬ ಶ್ರೇಷ್ಠ ಗುಣವಿಲ್ಲದ ಧರ್ಮ–ನೀತಿಗಳು ಸಮಾಜದಲ್ಲಿ ಬಾಳ ಲಾರವು.

10) ಮಾನವನ ವ್ಯಕ್ತಿತ್ವಕ್ಕೆ ಪ್ರಾಧಾನ್ಯ ನೀಡದಿರುವ ಧರ್ಮವು ಧರ್ಮವೇ ಅಲ್ಲ. ಸಮಾಜವೆಂಬುದು ವ್ಯಕ್ತಿಗಳೆಂಬ ಅಂಗಗಳಿಂದ ಕೂಡಿದ ಒಂದು ಶರೀರ. ಎಲ್ಲ ವ್ಯಕ್ತಿಗಳ ವಿಕಾಸ ಅಂದರೆ ಸರ್ವೋದಯ ಆದಾಗ ಮಾತ್ರ ಸಮಾಜದ ಅಭಿವೃದ್ಧಿಯು ಸಾಧ್ಯ. ಆದ ಕಾರಣ ವ್ಯಕ್ತಿಗಳಿಗೆ ಪ್ರಾಮುಖ್ಯ, ಬೆಲೆ ನೀಡಬೇಕು. ಮಾನವನ ವ್ಯಕ್ತಿತ್ವವೆಂದರೆ ಅವನ ದೇಹ, ಮನಸ್ಸು, ಆತ್ಮಗಳ ಸುಂದರ ಸಮನ್ವಯ. ಆದುದರಿಂದ ಈ ಕರ, ಶಿರ, ಹೃದಯಗಳ ವಿಕಾಸವನ್ನು ಸಾಧಿಸಲು ಅವಕಾಶ-ಅನುಕೂಲ ಸಿಕ್ಕಿದಾಗ ಮಾತ್ರ ಮಾನವನು ತನ್ನ ಗುರಿಯನ್ನು ಮುಟ್ಟಲು ಶಕ್ತ ನಾಗುತ್ತಾನೆ.

ಮುಖ್ಯವಾಗಿ ಮಾನವ ಜೀವನದ ಎಲ್ಲ ರಂಗವನ್ನೂ ಸ್ಪರ್ಶಿಸುವ ಧರ್ಮದ ಪಾತ್ರ ಹಿರಿದು. ಧರ್ಮವೆಂದರೆ ಜೀವನವನ್ನು ತುಚ್ಛವಾಗಿ ಕಂಡು ಮೃತ್ಯುವನ್ನು ಆಹ್ವಾನಿಸುವುದಲ್ಲ. ವ್ಯಕ್ತಿಯ ಚೇತನವನ್ನು ಹಿಗ್ಗಿಸಿ, ಅದು ವಿಶಾಲ ಜಗತ್ತಿನ ಚೇತನಕ್ಕೆ ನಿಕಟವಾಗಿ ಸಂಬಂಧಿಸುವಂತೆ ಮಾಡಿ, ಜೀವನದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವುದು ಧರ್ಮದ ಹೆಗ್ಗುರಿ. ಸಮಾಜದ ಸದಸ್ಯರೆಲ್ಲರ ರೀತಿನೀತಿ, ನಡತೆ

ಗಳನ್ನೂ ರೂಪಿಸಿ, ಅವರ ಮನಸ್ಸಿಗೆ ಸಂಸ್ಕಾರ ನೀಡಿ ನೆಮ್ಮದಿಯನ್ನುಂಟುಮಾಡಿ, ಸಾಮಾಜಿಕ ಐಕ್ಯತೆಯನ್ನು ಸಾಧಿಸಿ, ಇಹದಲ್ಲಿ ಉನ್ನತಿ, ಪರದಲ್ಲಿ ಮೋಕ್ಷ ಕೊಡಿಸುವುದು ಧರ್ಮದ ಮುಖ್ಯ ಕಾರ್ಯ. ನಾನು ನನ್ನದು ಎಂಬ ಅಹಂಕಾರ ಮಮಕಾರಗಳನ್ನು ಬಿಟ್ಟು, ಸತ್ಯ, ಅಹಿಂಸೆ, ಪ್ರೇಮ ಎಂಬ ಅಂತರ್ಗಾಮಿ ತ್ರಿವೇಣೀ ಸಂಗಮದಲ್ಲಿ ಸ್ನಾನ ಮಾಡಿ, ಸರ್ವರ ಕಲ್ಯಾಣಕ್ಕಾಗಿ ದುಡಿಯುವಂತೆ ವ್ಯಕ್ತಿಗಳನ್ನು ಹುರಿದುಂಬಿಸಿ, ಸಮಾಜದ ಉಳಿವಿಗೆ ಕಾರಣವಾಗಿರುವ ಧರ್ಮವನ್ನು ಎಲ್ಲರೂ ಪಾಲಿಸಬೇಕು.

# 4. ಮಾನವ ಜಾತಿಯ ಹುಟ್ಟು ಮತ್ತು ಬೆಳವಣಿಗೆ

ಎಲ್ಲ ಜೀವ ಜಾತಿಗಳೂ ದೇವರಿಂದ ಈಗಿನ ರೂಪದಲ್ಲಿ ಆದಿಯಲ್ಲಿಯೇ ಸೃಷ್ಟಿಸಲ್ಪಟ್ಟಿವೆ ಎಂಬ ಧಾರ್ಮಿಕ ಹೇಳಿಕೆಯನ್ನು ವಿಜ್ಞಾನವು ಒಪ್ಪುವುದಿಲ್ಲ. ಏಕೆಂದರೆ ಎರಡು ಜಾತಿಯ ಸಸ್ಯ ಮತ್ತು ಪ್ರಾಣಿಗಳು ಪರಸ್ಪರ ಕಲೆತರೆ ಅಥವಾ ಸೇರುವಂತೆ ಮಾಡಿದರೆ, ಮೂರನೆಯ ಹೊಸ ತಳಿ ಅಥವಾ ಜಾತಿ ಹುಟ್ಟುವುದೆಂದು ಜೀವಶಾಸ್ತ್ರ ಹೇಳುತ್ತದೆ. ಜೊತೆಗೆ ಪ್ರತಿಯೊಂದೂ ಯಾವಾಗಲೂ ಬದಲಾವಣೆಯಾಗಿ, ಹೊಸದು ಆಗುತ್ತಲೇ ಇರುವುದರಿಂದ, ಈ ಜಗತ್ತಿನಲ್ಲಿ ಬದಲಾವಣೆಗೆ ಕೊನೆ ಎಂಬುದೇ ಇಲ್ಲ. ಉತ್ಪತ್ತಿ, ವಿಕಾಸ, ಸ್ಥಿತಿಗತಿ, ಹ್ರಾಸ, ವಿನಾಶ—ಇವು ಎಲ್ಲ ವಸ್ತು—ವ್ಯಕ್ತಿಗಳಿಗೂ ಸಾಮಾನ್ಯವಾದುದು. ಒಂದು ವಸ್ತುವಿನ ಯಾವುದೇ ಸ್ಥಿತಿಯೂ ಬಹು ದೀರ್ಘಕಾಲ ಇರದು. ಯಾವುದೇ ಸ್ಥಿತಿಯ ವಿಕಾಸವು ಆಗದೇ ಇರದು. ಈ ವಿಕಾಸವು ವಿರೋಧವಿಲ್ಲದೇ ಆಗದು. ಅಂದರೆ ಒಂದುಗೂಡಿಸುವ ಶಕ್ತಿ, ಅದನ್ನು ವಿರೋಧಿಸುವ ಶಕ್ತಿ ಮತ್ತು ಇವೆರಡರ ಸಂಘರ್ಷದಿಂದ ಪರಿಣಾಮ ಹೊಂದುವ ಏಕೀಕರಣ ಶಕ್ತಿ—ಈ ಮೂರು ಕಾರಣಗಳಿಂದ ಜೀವಿಗಳಲ್ಲಿ ಮಾರ್ಪಾಟು ಆಗುತ್ತಿರುತ್ತದೆ. ಇದು ಧಾರ್ಮಿಕ ತತ್ತ್ವ ಮತ್ತು ನೀತಿ ಮೌಲ್ಯಗಳಿಗೂ ಅನ್ವಯಿಸುತ್ತದೆ.

ದೇಹದಲ್ಲಿ ಹುಟ್ಟುವ ಒಂದು ಆಂತರಿಕ ಶಕ್ತಿಯ ಫಲವಾಗಿ ವರ್ತನೆಯು ಕ್ರಮಬದ್ಧವಾಗಿರುತ್ತದೆ. ಅಂದರೆ ತನ್ನ ಸುತ್ತಮುತ್ತಲಿನ ಪರಿಸ್ಥಿತಿಯೊಂದಿಗೆ ಪೂರ್ತಿಯಾಗಿ ಹೊಂದಿಕೊಂಡಿರುವುದು ಜೀವಿಗಳ ಧರ್ಮ. ಆದರೂ ಪರಿಸ್ಥಿತಿಯನ್ನು ತನ್ನ ಬೆಳವಣಿಗೆಗೆ ಪೋಷಕವಾಗುವಂತೆ ಮಾರ್ಪಡಿಸಿಕೊಳ್ಳುವ ಶಕ್ತಿಯೂ ವ್ಯಕ್ತಿಗೆ ಇರುತ್ತದೆ. ಹೀಗೆ ಬೆಳೆಯಲು ಅಡ್ಡಿ ಆತಂಕಗಳನ್ನು ಒಡ್ಡುವ ಪರಿಸರದೊಂದಿಗೆ ಹೋರಾಡುವ ವಿರೋಧಿ ಶಕ್ತಿ ಹಾಗೂ ಅಡೆತಡೆಗಳನ್ನು ತಳ್ಳಿಕೊಂಡು ತನ್ನ ಸ್ವಸ್ವರೂಪವನ್ನು ವಿಕಾಸಗೊಳಿಸುವ ಏಕೀಕರಣ ಶಕ್ತಿ—ಇವೆರಡೂ ಇರುವ ಜೀವಿಗೆ ಆಗಾಗ ಒದಗುವ ಕಷ್ಟ–ನಷ್ಟ, ನೋವು–ದುಃಖಗಳೆಲ್ಲವೂ ಅದನ್ನು ಉದ್ಧರಿಸುವ ಸಲುವಾಗಿ ಪ್ರಕೃತಿಯು ಹೂಡಿದ ಒಂದು ಆಟ. ಅಂದರೆ ಜೀವಿಗಳಿಗೆ ಒದಗುವ ಕಷ್ಟ ದೆಸೆಯು, ದೈವತ್ವದ ಕಡೆಗೆ ಸಾಗಲು ನೆರವಾಗುವ ಒಂದು ಸಾಧನ.

ಮಾನವನ ನಡೆವಳಿಕೆಗಳೆಲ್ಲವೂ ಪ್ರಾಣಿ ಜೀವನದಿಂದ ಬಳುವಳಿಯಾಗಿ ಬಂದಿರುವ ಕಾರಣ, ಪ್ರಾಣಿ ಜೀವನವೇ ಮನುಷ್ಯ ಜೀವನದ ಅಸ್ತಿಭಾರ. ಮಾನವನಿಗೂ ಸೃಷ್ಟಿಯ ಇನ್ನಿತರ ಪ್ರಾಣಿಗಳಿಗೂ ಇರುವ ಸಂಬಂಧವನ್ನು ಸ್ಥಿರಪಡಿಸಿದುದೇ

ಪ್ರಾಣಿ ಶಾಸ್ತ್ರವು ಗೈದ ಮಹಾಸೇವೆ. ಒಂದು ನಿಯಮಕ್ಕನುಸಾರವಾಗಿ, ಕ್ರಮ ವಾಗಿ ಸೃಷ್ಟಿಯಾದ ಈ ಪ್ರಪಂಚದಲ್ಲಿ ಈಗ ಇರುವ ಜೀವ ಜಾತಿಗಳೆಲ್ಲವೂ ಕೇವಲ ಕ್ಷೇತ್ರ ಮತ್ತು ಯೋನಿ ಭೇದದಿಂದ, ಬೇರೆ ಬೇರೆ ಸಸ್ಯ–ಪ್ರಾಣಿಗಳಾಗಿ ಪರಿಣಮಿಸಿದರೂ, ಒಂದೇ ಬೀಜ ಅಥವ ಬುಡದಿಂದ ಹೊರಟಿರುವ ಇವುಗಳಲ್ಲಿ ಪ್ರತಿಯೊಂದೂ ಇನ್ನೊಂದರ ದಾಯಾದಿ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ಪ್ರಪಂಚವೆಲ್ಲವನ್ನೂ ಒಂದು ತೆಕ್ಕೆಯಲ್ಲಿಟ್ಟುಕೊಂಡು, ಪ್ರೇಮ–ಕರುಣೆಗಳಿಂದ ನೋಡುತ್ತಿರುವ ಭಗವಂತ ನೊಬ್ಬನ ಕಲ್ಪನೆಯಿಂದ, ಅಖಿಲ ಮಾನವ ಕುಲವು ಪರಸ್ಪರ ಭಿನ್ನ ಭಾವನೆಗಳನ್ನು ಕಳಚಿ, ಒಂದುತನದಲ್ಲಿ ಸೇರಿಕೊಂಡು, ಅದರ ಆಗುಹೋಗುಗಳೆಲ್ಲಲ್ಲಿ ಪರಸ್ಪರ ಸಹಕಾರ, ಸಹಾನುಭೂತಿ, ಸಹಾಯಗಳನ್ನು ಅವಲಂಬಿಸುವಂತಾಗುವುದು ಒಳಿತು.

ಮಾನವನೂ ಒಂದೇ ಸಾರಿ ಈಗಿನ ಆಕಾರದ ಪೂರ್ಣ ಮನುಷ್ಯನಾಗಿ ಹುಟ್ಟಲಿಲ್ಲ. ಅನೇಕ ಜೀವ ಜನ್ಮಗಳ ಮೆಟ್ಟಿಲುಗಳನ್ನು ಹತ್ತುತ್ತ, ಕೊಂಚ ಕೊಂಚವಾಗಿ ಪ್ರಾಣಿ ಲಕ್ಷಣಗಳನ್ನು ಕಡಿಮೆ ಮಾಡಿಕೊಂಡು, ಮನುಷ್ಯ ಲಕ್ಷಣಗಳನ್ನು ಹೆಚ್ಚಾಗಿ ಅಳವಡಿಸಿಕೊಂಡು, ಸ್ಪಷ್ಟವಾದ ಮಾನವಾಕಾರವನ್ನು ಮೈಗೂಡಿಸಿಕೊಂಡಿದ್ದಾನೆಂಬುದು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ದಶರಥರಾಮ, ಬಲರಾಮ, ಶ್ರೀಕೃಷ್ಣ, ಬುದ್ಧ–ಎಂಬೀ ದಶಾವತಾರಗಳನ್ನು ಅಧ್ಯಯನ ಮಾಡಿದರೆ ತಿಳಿದು ಬರುತ್ತದೆ. "Evolution names a Process and does not negate the Power behind and within the Process; it signifies the slow development of being from lower to a higher state, the graded unfolding of things of Permanent Value" ಎಂದು ಆಲಿವರ್ ಲಾಡ್ಜ್ ಹೇಳಿದ್ದಾರೆ.

"The First People who mentioned that man could have derived from lower order of things were the ancient Indians, who Conceptualised the Dashavathar before Darwin Propogated the survival of the fittest theory,, – ಎಂದು ಡಾ॥ ಕಾಮರಾಜಾರವರು ಹೇಳಿದ್ದಾರೆ.

ಹೀಗೆ ಚಿಕ್ಕಪುಟ್ಟ ಸೂಕ್ಷ್ಮ ಜೀವರಾಶಿಗಳು ಕೆಳಗಿನಿಂದ ಮೇಲಕ್ಕೆ ಏರುತ್ತ, ಶ್ರೇಷ್ಠ ಜೀವಿಗಳಾಗಿ ಪರಿವರ್ತನೆ ಹೊಂದಲು, ತಾನು ಉದ್ಧಾರವಾಗಬೇಕೆಂಬ ಆಕಾಂಕ್ಷೆಯು ಅವುಗಳಲ್ಲಿ ಇರುವುದೇ ಕಾರಣ. ಈ ಜಗತ್ತಿನಲ್ಲಿರುವ ಸಮಸ್ತ ಚರಾಚರ ವಸ್ತುಗಳೂ, ತಮ್ಮ ತಮ್ಮ ಅಸ್ತಿತ್ವದ ಅರಿವನ್ನು ಹೆಚ್ಚು ಹೆಚ್ಚಾಗಿ ಪಡೆಯುವವರೆಗೆ, ತಮ್ಮ ಮೂಲಸ್ಥಾನದ ದಿವ್ಯ ಪ್ರೇಮವು ಲಭಿಸುವವರೆಗೆ, ಎಡಬಿಡದೆ ಹೋರಾಟವನ್ನು ನಡೆಸುತ್ತಲೇ ಇರುತ್ತವೆ.

ಮಾನವ ಜೀವನದಲ್ಲಿ ಬದುಕುವ ಮತ್ತು ಉತ್ತಮ ಆದರ್ಶವನ್ನು ಸಾಧಿಸುವ ಸಲುವಾಗಿ, ದ್ವಿಮುಖ ಹೋರಾಟ ನಡೆಯುತ್ತಿರುತ್ತದೆ. ಮಾನವ ಜೀವನದ ಈ

ಸಂಗ್ರಾಮವು ದ್ವಿಮುಖವಾಗಿರುವಂತೆಯೇ, ಮಾನವನ ಅನ್ವೇಷಣೆಯ ವಿಷಯುಗಳಾದ ನಿತ್ಯ-ಅನಿತ್ಯ, ಪಾರಮಾರ್ಥಿಕ–ವ್ಯವಹಾರ, ಚೇತನ–ಅಚೇತನ ಎಂಬುದೂ ದ್ವಿಮುಖವಾಗಿದೆ. ಹೀಗೆಯೇ ದ್ವಿಮುಖವಾದ ಈ ವಿಶ್ವದ ರಹಸ್ಯವನ್ನು ಅರಿಯುವ ಮಾನವನ ಪ್ರಯತ್ನವೂ ದ್ವಿವಿಧವಾಗಿದೆ. ಇಂದ್ರಿಯ ಗೋಚರವಾದ ಪ್ರತ್ಯಕ್ಷ ವೀಕ್ಷಣದ ಪ್ರಮಾಣವನ್ನೇ ಅವಲಂಬಿಸಿ, ವಿಶ್ಲೇಷಣಾತ್ಮಕವಾದ ಜ್ಞಾನವನ್ನು ಮಾತ್ರ ಪಡೆಯಬಲ್ಲ ಪಾಶ್ಚಾತ್ಯರ ವೈಜ್ಞಾನಿಕ ದೃಷ್ಟಿ ಒಂದು ; ಇಂದ್ರಿಯಾನುಭವವನ್ನು ಮೀರಿದ ಸತ್ಯ ಸೌಂದರ್ಯ ಸುಗುಣಗಳನ್ನು ಸಾಕ್ಷಾತ್ಕರಿಸುವ ಭಾರತೀಯ ಋಷಿಗಳ ಪೂರ್ಣ ದರ್ಶನ ಇನ್ನೊಂದು ; ಶ್ರದ್ಧೆಯಲ್ಲಿ ಪರ್ಯವಸಾನವಾಗದ ಜ್ಞಾನ, ಜ್ಞಾನದ ಆಧಾರವಿಲ್ಲದ ಶ್ರದ್ಧೆ, ಇವೆರಡೂ ಆತ್ಮ ಸಂಸ್ಕಾರಕ್ಕೆ ಸಾಧಕವಾಗಲಾರವು. ಆದುದರಿಂದಲೇ ವೈಜ್ಞಾನಿಕ ಅನ್ವೇಷಣೆಗೆ ಬೇಕಾದ ಧೀಶಕ್ತಿ, ಋಷಿ ದರ್ಶನಕ್ಕೆ ಬೇಕಾದ ಭಾವುಕಶಕ್ತಿ–ಎಂಬೀ ಪರಸ್ಪರ ಪೋಷಕ ಶಕ್ತಿಗಳ ಸಮನ್ವಯವಿದ್ದಾಗ ಮಾತ್ರ ವಿಶ್ವವನ್ನು ಪೂರ್ಣವಾಗಿ ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಅಂತಹ ಜ್ಞಾನ ಮಾತ್ರ ಲೋಕ ಕಲ್ಯಾಣಕಾರಕವಾಗಬಲ್ಲುದು.

ಜೀವವು ಬ್ರಹ್ಮಾಂಡದಲ್ಲಿ ಕೋಟಿಗಟ್ಟಲೆ ವರ್ಷಗಳಲ್ಲಿ ಮಾಡಿದ ಅದ್ಭುತ ಯಾತ್ರೆಯ ಪ್ರಸಂಗವನ್ನು, ಪಿಂಡಾಂಡವು ಗರ್ಭದಲ್ಲಿ ಒಂಬತ್ತು ತಿಂಗಳ ಕಾಲದಲ್ಲಿ ಅಡಕಮಾಡಿ, ನಾಟಕ ರೂಪದಲ್ಲಿ ತೋರಿಸಿ, ಅನಂತರ ಮನುಷ್ಯಾಕಾರದಲ್ಲಿ ಹೊರ ಬರುತ್ತದೆ. ಆದುದರಿಂದಲೇ ಪಿಂಡಾಂಡವು ಅಣು ಪ್ರಮಾಣದಲ್ಲಿ ಬ್ರಹ್ಮಾಂಡದ ಪ್ರತಿರೂಪವಾಗಿದೆ ಎಂಬುದು ಗರ್ಭ ಶಾಸ್ತ್ರದ ಅಧ್ಯಯನದಿಂದ ತಿಳಿದು ಬರುತ್ತದೆ.

ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲೂ ಸಾತ್ವಿಕ, ರಾಜಸ, ತಾಮಸ ಎಂಬೀ ತ್ರಿಗುಣಗಳು ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿದ್ದು, ಅವುಗಳಲ್ಲಿ ಮೇಲಾಟದ ಸಲುವಾಗಿ ಪರಸ್ಪರ ಹೋರಾಟ ನಡೆದಿರುತ್ತದೆ. ವಸ್ತುವಿನಲ್ಲಿ ಎಷ್ಟೇ ರೂಪಾಂತರವಾದರೂ, ಅದರಲ್ಲಿನ ಜಡದ್ರವ್ಯಗಳು ಮತ್ತು ಕರ್ಮ ಶಕ್ತಿಯು ಸ್ಥಿರವಾಗಿ ಉಳಿದಿರುತ್ತವೆ ಎಂಬುದು ಭಾರತೀಯ ಋಷಿಗಳ ಖಚಿತ ಅಭಿಪ್ರಾಯ. ಸೃಷ್ಟಿಯಲ್ಲಿ ಅನೇಕ ವಸ್ತುಗಳೂ, ಅವುಗಳ ವಿವಿಧ ರೂಪಗಳೂ ಕಾಣುತ್ತಿದ್ದರೂ ಮೂಲದಲ್ಲಿ ಎಲ್ಲ ವಸ್ತುಗಳ ದ್ರವ್ಯವು ಅಥವಾ ಸೃಷ್ಟಿಯ ಕಾರಣವು ಒಂದೇ ಆಗಿದ್ದು, ಜಗತ್ತು ಈ ಮೂಲ ಗುಣದ ಅಥವಾ ಪ್ರಕೃತಿಯ ವಿಕೃತಿ–ವಿಕಾರ ರೂಪವಾಗಿರುತ್ತದೆ. ವ್ಯಕ್ತ ವಿಶ್ವವನ್ನು ನಮ್ಮ ಕಣ್ಣುಗಳಿಂದ ನೋಡಲು ಸಾಧ್ಯವಾದರೂ, ಅದರ ಆಧಾರವಾದ ಮೂಲದ್ರವ್ಯ ಅಥವಾ ಪ್ರಕೃತಿಯ ರೂಪವು ಅವ್ಯಕ್ತವಾಗಿರುವುದರಿಂದ, ಅದನ್ನು ನೋಡಿ ಅನುಭವಕ್ಕೆ ತಂದುಕೊಳ್ಳಲು ಸಾಧ್ಯವಿಲ್ಲ. ಅದು ಊಹೆಗೆ ಮಾತ್ರ ನಿಲುಕುವಂತಹುದು.

ಪ್ರಪಂಚದ ಆದಿ–ಅಂತ್ಯಗಳು ಅವ್ಯಕ್ತವಾದರೂ, ಮಧ್ಯದ ಈಗಿನ ಸ್ಥಿತಿಯು ವ್ಯಕ್ತವಾಗಿದೆ. ಉಪಭೋಗ್ಯ ಜಡ ಪ್ರಕೃತಿ ಹಾಗೂ ಉಪಭೋಗ ಪಡೆಯುವ

ಜೀವಾತ್ಮ ಇವೆರಡೂ ಭಿನ್ನ ವಸ್ತುಗಳು. ಅನಾದಿಯಾದ ಈ ಪ್ರಕೃತಿ–ಪುರುಷರ ಜೊತೆಗೆ, ಅವ್ಯಕ್ತ, ಅಮೃತ, ಸನಾತನ, ಸರ್ವವ್ಯಾಪಕ, ಆದ ತತ್ತ್ವವೊಂದು ಸಕಲ ಸೃಷ್ಟಿಯ ಮೂಲದಲ್ಲಿದ್ದುಕೊಂಡು, ಪರಮಾತ್ಮನೆನಿಸಿ, ಅದರ ಇಚ್ಛಾಶಕ್ತಿಯ ಪ್ರೇರಣೆ ಪಡೆದ ಮೂಲ ಪ್ರಕೃತಿಯಿಂದ ಹೊರಹೊಮ್ಮಿದೆ. ಈ ಕಾರಣದಿಂದಲೇ ಜಗತ್ತು, ಜೀವ, ಜಗನ್ನಿಯಾಮಕ, ಎಂಬೀ ತತ್ತ್ವತ್ರಯದ ಬಗ್ಗೆ ಸಮರಸದೃಷ್ಟಿ ತಾಳುವುದು ಅವಶ್ಯಕವಾಗಿದೆ.

ಮೃಗದ ಅಂತಸ್ತಿನಿಂದ ಪರಿವರ್ತಿತವಾಗಿ ಬೆಳೆದು ಬಂದ ಪ್ರಾಣಿಯೇ ಮಾನವನೆನಿಸಿದ್ದಾನೆ. ವ್ಯಕ್ತಿ ಸ್ವರೂಪರಲ್ಲದೆ, ಗುಣ ಸ್ವರೂಪರೂ ಆಗಿ, ಮನುಷ್ಯ ಪ್ರಕೃತಿಗಳೇ ಆದ ಸಮಸ್ತ ದೇವತೆಗಳೂ ಮನುಷ್ಯರಲ್ಲಿಯೇ ಪ್ರತಿಯೊಂದು ಮನ್ವಂತರದಲ್ಲಿಯೂ ಕಾಣಿಸಿಕೊಂಡು, ಧರ್ಮದ ಮೂಲಕ ಪಡೆದ ಅರ್ಥ, ಕಾಮ ಗಳಿಂದ, ಮೋಕ್ಷವನ್ನು ಸಾಧಿಸಲು ಕಾರಣರಾಗಿದ್ದಾರೆ. ಆದುದರಿಂದಲೇ ಜೀವ ಜಾತಿಗಳಲ್ಲೆಲ್ಲಾ ಮಾನವನೇ ಶ್ರೇಷ್ಠನೆನಿಸಿದ್ದಾನೆ.

ಬ್ರಹ್ಮಾಂಡದಲ್ಲಿರುವ ಪ್ರತಿಯೊಂದು ವಸ್ತುವೂ, ನಿರ್ಜೀವ ಶಿಲೆಯಿಂದ ಹಿಡಿದು ಮಾನವನವರೆಗೆ, ತಕ್ಕ ಕಂಪನಗಳಿಂದ ಕೂಡಿದ್ದು, ಅದರದರ ಭಾವನೆ ಯನ್ನು, ಅದಕ್ಕೆ ತಕ್ಕ ವಾಣಿಯಿಂದ ಸದಾ ಕಾಲವೂ ಪ್ರಸಾರ ಮಾಡುತ್ತಿರುತ್ತದೆ ಹಾಗೂ ಪ್ರಸಾರವನ್ನು ಸ್ವೀಕರಿಸುತ್ತಿರುತ್ತದೆ. ಸಮಾಜದ ಒಂದೊಂದು ಕಡೆಯಿಂದ ಒಂದೊಂದು ಅಂಶದಂತೆ, ಹಲವಾರು ಕಡೆಗಳಿಂದ ಬಂದ ಹಲವು ಅಂಶಗಳು ಕಲೆತು ಮನುಷ್ಯ ಜೀವಿಯಲ್ಲಿ ಒಂದು ವ್ಯಕ್ತಿತ್ವವು ರೂಪುಗೊಂಡು, ಆಮೇಲೆ ಆ ವ್ಯಕ್ತಿತ್ವದ ಅಂಶಗಳೆಲ್ಲವೂ ಮತ್ತೆ ಕಣಕಣವಾಗಿ ಇತರರ ಮೇಲೆ ಪ್ರಭಾವ ಬೀರುವ ಸಲುವಾಗಿ ಚದುರಿ ಹೋಗುತ್ತವೆ. ಹೀಗೆ ತಳೆದ ವ್ಯಕ್ತಿತ್ವದ ಪ್ರಭಾವವನ್ನು ಸಮಾಜದ ಮೇಲೆ ಪರಿಣಾಮಕಾರಿಯಾಗಿ ಬೀರುವುದೇ ಆ ವ್ಯಕ್ತಿತ್ವಕ್ಕೆ ಸಾರ್ಥಕ್ಯ ಹಾಗೂ ಸರಿಯಾದ ವಿನಿಯೋಗ ಆಗಿದೆ.

ಬಿಡಿ ವ್ಯಕ್ತಿಯು ಸಮಾಜದ ಅಂಗವಾಗಿ ಎಣಿಕೆಗೆ ಬರುತ್ತಾನೆಯೇ ಹೊರತು, ಅವನಿಗೆ ಸ್ವತಂತ್ರವಾದ ಗತಿ–ಸ್ಥಾನಗಳು ಇರುವುದಿಲ್ಲ. ಆದರೂ ಸ್ವಂತದ ಮೇಲಣ ಪ್ರೇಮ–ಅಹಂಕಾರಗಳನ್ನು ಹೊಂದಿದ್ದು ಅಧಿಕಾರ ನಡೆಸುವುದು ಮಾನವನ ಮೂಲ ಪ್ರವೃತ್ತಿಯಾದುದರಿಂದ, ಯಾವುದೇ ನೂತನ ವಿಚಾರ, ಆಂದೋಲನ ಮತ್ತು ಕ್ರಿಯೆಯ ನಿಜವಾದ ಆರಂಭ ಬಿಂದುವು ವ್ಯಕ್ತಿಯೇ ಹೊರತು ಸಮಾಜವಲ್ಲ. ಬಹು ಜನರ ಸಂಕಟ, ಕೊರಗು, ಬೇನೆಗಳಿಗೆಲ್ಲ ಕಾರಣವಾದ ಈ ಇತರರ ಮೇಲೆ ಅಧಿಕಾರ ಚಲಾಯಿಸುವ ಆಸುರೀ ಪ್ರವೃತ್ತಿಯನ್ನು ಮಾನವ ಸಮಾಜದಲ್ಲಿ ಇಲ್ಲದಂತಾಗಿಸ ಬೇಕಾದರೆ, ಮಾನವನ ಮನಸ್ಸಿನ ಮೇಲೆ ಯೋಗ್ಯ ಸಂಸ್ಕಾರವನ್ನುಂಟು ಮಾಡಿ, ಆತನ ಅಂತಃಕರಣದಲ್ಲಿ ಸಮಾಜದ ಸುಖಶಾಂತಿ ಕಲ್ಯಾಣಗಳ ಬಗ್ಗೆ ಪೂರ್ಣ ಸಹಾನು ಭೂತಿಯ ದೃಷ್ಟಿಕೋನವನ್ನು ಉಂಟು ಮಾಡಬೇಕಾದುದು ಅತ್ಯಾವಶ್ಯಕ. ಸಮಾಜ

| | |
|---|---|
| ಸಾಹಿತ್ಯ ಭಾರತೀ | ಡಾ॥ ಎನ್. ಅನಂತರಂಗಾಚಾರ್ |
| ವಿವಿಧ ಮತಗಳ ವಿಮರ್ಶೆ ಮತ್ತು ಸಮನ್ವಯ | ಕೆ.ಪಿ. ರಾಮನಾಥಯ್ಯ ಮತ್ತು ಹೆಚ್. ನಾರಾಯಣರಾವ್ |
| ಶ್ರೀ ವೈಷ್ಣವ ಸಿದ್ಧಾಂತ ಸಂಗ್ರಹಃ | ಅರೈಯರ್ ಶ್ರೀರಾಮಶರ್ಮ |
| ರಹಸ್ಯತ್ರಯ ಸಾರ | ಎಸ್. ರಂಗಾಚಾರ್ |
| ಪ್ರಪತ್ತಿ ಶಾಸ್ತ್ರಂ | ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ |
| ತತ್ತ್ವರಸಾಯನ | ಈ. ಶ. ವರದಾಚಾರ್ಯ |
| ಯಜ್ಞ ದೃಷ್ಟಿ | ಸ್ವಾಮಿ ಸೋಮನಾಥಾನಂದ |
| Brahma Sutras according to Ramanuja | Swami Veereswarananda and Swami Adidevananda |
| Sri Bhashya | S.S. Raghavachar |
| Vedanta Sutras of Ramanuja | George Thibaut |
| The wisdom of the Vedas | J.C. Chatterji |
| The Essence of the Vedas | Bisnodayal Basdeo |
| The Call of the Vedas | A.C. Bose |
| Aspirations from a fresh word | Shankuntala Rao Sastry |
| Eternal Relevance of Vedas | A.R. Tatachariar |
| Abiding Grace | R.K Seshadri |
| Agamas and Vaishnavism | Dr. V. Varadachary |
| Studies in Ramanuja | Ramanuja Vedanta Centre Madras |
| Ramanuja's Teachings | M. Yamunacharya |
| Alwars of South India | Dr. K.C. Varadachary |
| Mysticism of Alwars | D Ramaswamy Iyengar |
| Bhakthi Renaissance | A. K. Majumdar |
| Myhatmas of India | Trivedi Krishnaji |
| Visistadvaita | Ramanuja Research Society Madras |
| Sadhanas in Visistadvaita | Dr. N.S. Ananiharangachar |
| God and Universe in Ramanuja | Dr. Eric J Lott |
| Knowledge, Self and God in Ramanuja | Dr. P.B. Vidyarthi |
| Divine Personality and Human life in Ramanuja | ,, |

| | |
|---|---|
| Ramanuja's Philosophy & Religion | Dr. P.B. Vidyarthi |
| The origin and Development of Vaisnavism | Dr. Suvira Jayaswal |
| History of Srivaishnavism | Dr. B.V. Ramanujam |
| Srivaishnava Brahmins | K. Rangachari |

# ಈ ಲೇಖಕರ ಇತರ ಕೃತಿಗಳು

## ಶಿಕ್ಷಣ

1. ಕ್ರಿಯಾತ್ಮಕ ಶಿಕ್ಷಣ
2. ಶಿಕ್ಷಣ ಪ್ರದೀಪ
3. ಸಮಾಜಶಾಸ್ತ್ರ ಬೋಧನೆ
4. ಭಾಷಾ ಶಿಕ್ಷಣ

## ಸಮಾಜ

5. ವಿಶ್ವದರ್ಶನ
6. ಭಾರತೀಯ ಸ್ವಾತಂತ್ರ್ಯ ಚಳುವಳಿ
7. ಕರ್ನಾಟಕ ದರ್ಶನ
8. ಸಮಾಜ ಜ್ಞಾನ ಕೋಶ
9. ನಮ್ಮ ನಾಡು ಭಾರತ
10. ಸ್ವರಾಜ್ಯ ಸಂದರ್ಶನ
11. ಸಮಾಜ ಕಲ್ಯಾಣ ಚಳುವಳಿ
12. ಭಾರತೀಯ ಮಹಿಳೆ
13. ಭೂಲೋಕ ಸಂದರ್ಶನ
14. ಸರ್ವೋದಯ ಸಮಾಜ ನಿರ್ಮಾಣ
15. ಜಗತ್ತಿನ ಪ್ರಸಿದ್ಧ ವ್ಯಕ್ತಿಗಳು

## ಧರ್ಮ

### (1)

16. ಶ್ರೀ ವೈಷ್ಣವ ಮತ ದೀಪಿಕ
17. ಶ್ರೀ ಆಂಡಾಳ್ ಆಳ್ವಾರ್
18. ಶ್ರೀರಾಮಾನುಜ ಸಿದ್ಧಾಂತ ದರ್ಪಣ
19. ವಿಶಿಷ್ಟಾದ್ವೈತದ ಪಂಚಾಚಾರ್ಯರು
20. ಉಭಯವೇದಾಂತದ ಉಭಯಕಲೆ
21. ಶ್ರೀವೈಷ್ಣವ ನಿತ್ಯಾನುಸಂಧಾನಂ
22. ಅಷ್ಟೋತ್ತರ ಶತನಾಮ ಸ್ತೋತ್ರ
23. ಶ್ರೀ ವಿಷ್ಣುಸಹಸ್ರನಾಮ
24. ಶ್ರೀ ಲಕ್ಷ್ಮೀ ಸಹಸ್ರನಾಮ
25. ಶ್ರೀ ನಲ್ಲಾನ್ ಚಕ್ರವರ್ತಿ

### (2)

26. ಸಾರ್ವತ್ರಿಕ ಪ್ರಾರ್ಥನೆ
27. ಲೋಕಧರ್ಮ ದರ್ಶನ
28. ಶೈವ ಧರ್ಮ ದರ್ಶನ
29. ವೈಷ್ಣವ ಧರ್ಮ ದರ್ಶನ
30. ಹಿಂದೂಧರ್ಮ ದರ್ಶನ
31. ಜಗತ್ತಿನ ಜೀವಂತ ಧರ್ಮಗಳು
32. ಕೆಲವು ಜನಪ್ರಿಯ ಹಾಡುಗಳು

## ಎಲ್ಲರೂ ಓದಬೇಕಾದ, ಪತ್ರಿಕೆಗಳು ಪ್ರಶಂಸಿಸಿರುವ
## ಹೆಚ್. ಜೆ. ರಾಮಯ್ಯಂಗಾರ್ ಅವರ
## ಸಮಾಜಶಾಸ್ತ್ರದ ಮೂರು ಉತ್ತಮ ಗ್ರಂಥಗಳು

೧. **ಜಗತ್ತಿನ ಪ್ರಸಿದ್ಧ ವ್ಯಕ್ತಿಗಳು** ಬೆಲೆ **40** ರೂ
(ಸಮಾಜದ ವಿವಿಧ ಕ್ಷೇತ್ರಗಳ 278 ಸ್ತ್ರೀ ಪುರುಷರ ಜೀವನ ಸಾಧನೆಗಳ ಮೂಲಕ ಪ್ರಪಂಚದ ಇತಿಹಾಸದ ಒಂದು ಇಣುಕು ನೋಟ)

೨. **ಭೂಲೋಕ ಸಂದರ್ಶನ** ಬೆಲೆ **24** ರೂ
(ಭಾರತದ ವಿಶೇಷ ವಿವರಣೆಯೂ ಸೇರಿದಂತೆ ಒಂದಿಷ್ಟು ಇತಿಹಾಸದೊಂದಿಗೆ ಪ್ರಪಂಚದ ಭೂವಿವರಣೆ)

೩. **ಸರ್ವೋದಯ ಸಮಾಜ ನಿರ್ಮಾಣ** ಬೆಲೆ **32** ರೂ
(ಪೌರಧರ್ಮ, ರಾಜನೀತಿ, ಅರ್ಥಶಾಸ್ತ್ರ, ಶಿಕ್ಷಣ ವಿಷಯಗಳ 26 ಪ್ರೌಢ ಪ್ರಬಂಧಗಳು)

ಈ ಮೂರೂ ಪುಸ್ತಕಗಳ ಒಂದು ಅಥವಾ ಹೆಚ್ಚು ಕಟ್ಟನ್ನು ತಮ್ಮ ವಿದ್ಯಾಲಯದ ಗ್ರಂಥ ಭಂಡಾರಕ್ಕೆ ಖರೀದಿಸಿ, ಶ್ರೀಮಂತ ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಕೊಳ್ಳುವಂತೆ ಪ್ರೋತ್ಸಾಹಿಸಿ, ಪ್ರಕಟನೆಗೆ ಸಿದ್ಧವಾದ **ಹಿಂದೂ ದೇಶದ ಹೊಸ ಇತಿಹಾಸ** ಎಂಬ 600 ಪುಟಗಳ ಗ್ರಂಥವನ್ನು ಹೊರತರಲು ನೆರವಾಗಬೇಕೆಂದು ಪ್ರಾರ್ಥಿಸುತ್ತೇನೆ.

—ಲೇಖಕ ಮತ್ತು ಪ್ರಕಾಶಕ